ಬೋನಸ್ ದರದಲ್ಲಿ ವೃದ್ಧಿ...ನಿಮ್ಮ ಎಲ್.ಐ.ಸಿ. ಪಾಲಿಸಿಯು ಈಗ ಹೆಚ್ಚು ಲಾಭಕಾರಿ




ಜೀವ ವಿಮಾ ನಿಗಮದ ಆಸ್ತಿಯ ದ್ವಿವಾರ್ಷೀಯ ವಿಮಾ ಗಣನೆಯ ಮೂಲ್ಯಾಂಕನೆಯ ಫಲವಾಗಿ, 31ನೇ ಮಾರ್ಚ್, 1985 ರಲ್ಲಿ ಜಾರಿಯಲ್ಲಿರುವ ಎಲ್ಲಾ ಲಾಭಸಹಿತ ಜೀವವಿಮಾ ಪಾಲಿಸಿಗಳು ಕೆಳಗೆ ನಮೂದಿಸಿರುವಂತೆ ಬೋನಸ್‌ಗೆ ಅರ್ಹವಾಗುತ್ತವೆ.

| ಹೋಲ್ ಲೈಫ್ ವಿಮೆಗಳು : | ಎಂಡೋಮೆಂಟ್ ವಿಮೆಗಳು : |
| --- | --- |
| ರೂ. 55.00 | ರೂ. 44.00 |
| ಪ್ರತಿ ರೂ. 1000 ವಿಮೆಗೆ ಪ್ರತಿ ವರ್ಷಕ್ಕೆ | ಪ್ರತಿ ರೂ. 1000 ವಿಮೆಗೆ ಪ್ರತಿ ವರ್ಷಕ್ಕೆ |

ಎಲ್.ಐ.ಸಿ. ಪಾಲಿಸಿಗಳು ಮುಂಚಿನ ಎಲ್ಲಾ ವರ್ಷಗಳಿಗಿಂತಲೂ ಈಗ ಹೆಚ್ಚು ಆಕರ್ಷಕವಾಗಿವೆ.

ವಿಮೆ ಇಳಿಸಿ ಸುರಕ್ಷಿತವಾಗಿರಿ.



ಜನತೆಯ ಸೇವೆಯಲ್ಲಿ ಎಲ್.ಐ.ಸಿ.
ಲೈಫ್ ಇನ್‌ಶೂರನ್ಸ್ ಕಾರ್ಪೊರೇಷನ್ ಆಫ್ ಇಂಡಿಯಾ

RADEUS/LIC/9/85

# ಕಸ್ತೂರಿ

## ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :
ಆರ್. ಜೆ. ದೇಸಾಯಿ

**

ಸಹಸಂಪಾದಕ :
ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :
ಜೋಡಿಜೀವ

**

ಛಾಯಾಚಿತ್ರ :
ವಿ. ಗೋಪಾಲ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

**KASTURI, February 1986**

# ಬೆಳಕಿಂಡಿ

ಹೆಂಗಸರು ಗಂಡಸರಿಗಿಂತ ಹೆಚ್ಚು ಕಾಲ ಬದುಕುತ್ತಾರಲ್ಲ, ಕಾರಣವೇನು ಗೊತ್ತೆ? ಅವರಿಗೆ ಪರಸ್ಪರ ಮಾತಾಡಿಕೊಳ್ಳಲು ಸಮಯ ಸಾಕಾಗುವುದಿಲ್ಲ ಅದಕ್ಕೆ.

—'ಕ್ರೊಕೊಡಿಲ್'ನಿಂದ

*

ಮಕ್ಕಳು ಹುಟ್ಟಿದರೆ ಕೆಲವೊಮ್ಮೆ ಯೌವನದ ತಪ್ಪು ಕಾರಣವಾದಂತೆಯೇ ಕೆಲವೊಮ್ಮೆ ಮುಪ್ಪಿನ ಆಕಸ್ಮಿಕವೂ ಕಾರಣವಾಗುತ್ತದೆ.

—'ಚಾಯಿನ್' ಪತ್ರಿಕೆಯಿಂದ

*

ಹಣದಿಂದ ತೊಂದರೆಯುಂಟಾಗುತ್ತದೆಯೇ? ಉದಾಹರಣೆ ಕೊಡಿ.

ಮನೆಯನ್ನು ಭಾಗ ಮಾಡಿ ಬಾಡಿಗೆಗೆ ಕೊಟ್ಟರೆ ಹೆಚ್ಚು ಹಣದ ಜತೆಗೆ ಹೆಚ್ಚು ತಲೆನೋವೂ ಬರುತ್ತದೆ.

—ಡ್ಯಾನ್ ಬೆನೆಟ್

*

ಪತ್ರಿಕೆಯೊಂದರಲ್ಲಿ ಬಂದ ಜಾಹೀರಾತು :

"ನೀವು ಅಶಿಕ್ಷಿತರೆ? ಉಚಿತ ಸಹಾಯಕ್ಕಾಗಿ ಇಂದೇ ನಮಗೆ ಬರೆದುಕೊಳ್ಳಿ."

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ

# ಸಹಚಿಂತನ

**ಅಗ್ನಿವರ್ಣ**

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಿನೂತನ ದಾಖಲೆ ಸ್ಥಾಪಿಸುತ್ತಾ ಬಂದಿರುವ ನಿಮ್ಮ ಮಾಸ ಪತ್ರಿಕೆಯು ಹಣದ ಮತ್ತು ಸಮಯದ ಅಭಾವ ದಿಂದ ಜನಸಾಮಾನ್ಯನ ಕೈ ತಪ್ಪಿರುವ ಅನೇಕ ಉತ್ತಮ ಕಾದಂಬರಿಗಳನ್ನು ಸಂಕ್ಷಿಪ್ತ ರೂಪದಲ್ಲಿ ಪ್ರಕಟಿಸಿ ನಮ್ಮಂತಹ ಮಧ್ಯಮ ವರ್ಗದ ಜನರಿಗೆ ಸಹಾಯ ಮಾಡುತ್ತಿದೆ. ಅದಕ್ಕಾಗಿ ತಮಗೆ ಕೃತಜ್ಞತೆ. ಜನವರಿ ೮೬ರ ಕಸ್ತೂರಿಯಲ್ಲಿನ 'ಸರ್ವಸುಖ ಶೋಧಕ' ಇದಕ್ಕೊಂದು ಉತ್ತಮ ಉದಾಹರಣೆ. ೮೦ ಪರ್ವಗಳನ್ನು ಕಂಡ ಕನ್ನಡದ ಖ್ಯಾತ ಕಾದಂಬರಿಕಾರ ಶ್ರೀ ಮುಗಳಿ-ಯವರ ಗಮನಾರ್ಹ ಕಾದಂಬರಿ 'ಅಗ್ನಿವರ್ಣ' ವನ್ನು ಶ್ರೀಮತಿ ಕಲಾವತಿ ಜಿ. ಕುಲಕರ್ಣಿ ಯವರ ಸಹಾಯದಿಂದ ಸಂಕ್ಷಿಪ್ತಗೊಳಿಸಿ ನಮ್ಮ ಪರಂಪರೆಯ ರಸದೌತಣ ಮಾಡಿಸಿ ದ್ದೀರಿ. ಈ ಕಥೆಯಲ್ಲಿ ರಾಜ ಅಗ್ನಿವರ್ಣನಲ್ಲಿ ಆತನ ಪಟ್ಟದ ರಾಣಿ ಮತ್ತು ಆತನ ವಯೋ ವೃದ್ಧ, ಜ್ಞಾನವೃದ್ಧ, ತಾಯಿ ಕರ್ತವ್ಯಪ್ರಜ್ಞೆ ಉಂಟು ಮಾಡಿದಂತೆ ನಮ್ಮ ದೇಶದ ನಾರಿಯರು ಕರ್ತವ್ಯ ವಿಮುಖ ಪುರುಷರನ್ನು ಎಚ್ಚರಿಸಿ ದೇಶದ ಪುನರುದ್ಧಾರಕ್ಕೆ ಶ್ರಮಿಸುವಂತೆ ಅಣಿಗೊಳಿಸಲಿ.

ಬೆಂಗಳೂರು —ನ. ಕೃಷ್ಣಮೂರ್ತಿ

**ಹಣಮಂತಾಚಾರ್ಯ**

ಮಕ್ಕಾ ಯಾತ್ರೆ ಮಾಡಿ ಬಂದ ಹಣಮಂತಾ ಚಾರ್ಯರ ಬಗೆಗೆ ಕಸ್ತೂರಿ (ಜನವರಿ, ೮೬) ಯಲ್ಲಿ ಓದಿ ಆಶ್ಚರ್ಯವಾಯಿತು. ಅದೂ ಇಟಗಿ ಭೀಮಾಚಾರ್ಯರ ಪುತ್ರ ಹಣಮಂತಾ ಚಾರ್ಯರು! ನಂಬುವುದೇ ಅಸಾಧ್ಯ. ಆದರೆ ೭೬ ವರ್ಷ ಪ್ರಾಯದ ಅವರು ಈಗಲೂ ನಮ್ಮ ನಡುವೆಯೇ ಇದ್ದಾರೆಂದ ಬಳಿಕ ನಂಬಲೇಬೇಕು. ಭೂತ, ಪ್ರೇತಗಳ ಒಡನಾಟದಲ್ಲಿ ಆಚಾರ್ಯರು ವಾಸ ಮಾಡಿದ ದಾಖಲೆಗಳ ಕುರಿತು ಓದಿದಾಗ ನಿಬ್ಬೆರಗಾದೆ. ಪರಿಚಯ ಮಾಡಿಕೊಟ್ಟ ಗುರುರಾಜ ಕುಲಕರ್ಣಿಯವರಿಗೆ ಕೃತಜ್ಞತೆಗಳು.

ಮೈಸೂರು —ಟಿ. ವಿ. ವಿಜಯಾ

'ಮಕ್ಕಾ ಯಾತ್ರೆ ಮಾಡಿ ಬಂದ ಹಣಮಂತಾ ಚಾರ್ಯರು' ಅನುಭವ ರೋಚಕವಾಗಿತ್ತು. (ಕಸ್ತೂರಿ ಜನವರಿ, ಗುರುರಾಜ ಕುಲಕರ್ಣಿ) ನಿಜಕ್ಕೂ ಅವರ ಬಾಲ್ಯದ ಮುಗ್ಧ ಸಾಹಸ ದೈವದತ್ತವೆಂದೇ ಹೇಳಬೇಕು. ಅಂತೆಯೇ ಅದೇ ಸಂಚಿಕೆಯ 'ಖೋಟಾ ನೋಟುಗಳಿಗೊಂದು ಪತ್ರಿಕೆ,' 'ವಿದ್ಯಾವರ್ಧಕ ಸಂಘ ಧಾರವಾಡ,' 'ಮಾಯಿಯ ಮೂರು ಮುಖಗಳು' ಮುಂತಾದ ಲೇಖನಗಳು ಸ್ವಾರಸ್ಯವಾಗಿತ್ತು.

ಬರೋಡಾ —ಎಸ್ಕೆ ಹಳೆಯಂಗಡಿ

**ಕಳಂಕ**

ಹೊಸ ವರ್ಷದ ಆದಿಯ (ಜನವರಿ ತಿಂಗಳ) 'ಕಸ್ತೂರಿ'ಯಲ್ಲಿ ಮೂಡಿ ಬಂದ 'ಕಳಂಕ' ಕಥೆ ತುಂಬಾ ಸೊಗಸಾಗಿತ್ತು. ಗಂಡು ಹೆಣ್ಣಿನ ಬಾಳು ಪ್ರೇಮಗೀತೆ ವಿರಹಗೀತೆ ಆಗುವುದು ಎಂತೆಂಬುದನ್ನು ಚಿತ್ರಿಸಿದ ಶೈಲಿ ಮನೋಹರ.

ವಿಟ್ಲ —ಬಾಲಗೋಪಾಲ

**ಇದು ತಪ್ಪು**

ಡಿಸೆಂಬರ್ ತಿಂಗಳ ಸಂಚಿಕೆಯಲ್ಲಿ ಜೇಬು-ನ್ನೀಸಾಳ ಪ್ರಣಯ ಪ್ರಕರಣ ಕುರಿತ ಅನುವಾದ ಅನೇಕ ತಪ್ಪುಗಳಿಂದ ಕೂಡಿದೆ. ೧೭೦೧ರಲ್ಲಿ ಅವಳು ಮುಸಲ್ಮಾನ ಸರ್ದಾರನೊಬ್ಬನ ಪ್ರಣಯ ಪ್ರಕರಣದ ನಂತರ ಶಿವಾಜಿಯ ಬಗ್ಗೆ ಆಸಕ್ತಿ ತಾಳಿದ್ದಳು ಎಂಬರ್ಥದ ಲೇಖನವು ಇತಿಹಾಸಕ್ಕೆ ಸರಿ ಹೊಂದುವುದಿಲ್ಲ. ಶಿವಾಜಿ ಸತ್ತದ್ದು ೧೬೮೦ರಲ್ಲಿ. ಅಂದ ಬಳಿಕ ೧೭೦೧ರ ನಂತರ ಅವಳು ಶಿವಾಜಿಯ ಬಗ್ಗೆ ಮೋಹ ತಾಳುವುದು ಹೇಗೆ? ಸಂಭಾಜಿಯ ಬಗ್ಗೆ ಅವಳು ಮೋಹಗೊಂಡಿರಬೇಕು. ಸಂಭಾಜಿ ಮುಸಲ್ಮಾನನಾದರೆ ಆತನಿಗೆ ಜಹಾಗೀರ ಕೊಟ್ಟು ಮಗಳನ್ನು ಮದುವೆ ಮಾಡುವುದಾಗಿಯೂ ಸಂಭಾಜಿ ನಿರಾಕರಿಸಿದಾಗ ಆತನನ್ನು ಚಿತ್ರಹಿಂಸೆ ಮಾಡಿ ಕೊಂದುದಾಗಿಯೂ ಹೇಳುತ್ತಾರಲ್ಲ!

ರಾಜಾಜಿಯವರ ಕಥೆ ಕೃಷ್ಣದಾಸನಾಗಿ ಸೀತಾ ರಾಮಯ್ಯರ 'ಬದಲಾವಣೆ' ಸಂತೋಷ ತರ

ಲಿಲ್ಲ. ದೇಶಕ್ಕಾಗಿ ದುಡಿದದ್ದು ದೇವರ ವಿರುದ್ಧ ದುಡಿಮೆ ಎಂಬ ಭಾವನೆ ಹುಟ್ಟಿಸುತ್ತದೆ ಕಥೆ.

'ಜಟ್ಟು' ಕಥೆಯು ಸಾಮಾನ್ಯವಾಗಿದೆ, 'ನಾವು ನಪುಂಸಕರು' ನಗೆಬರೆಹವೋ ನೀತಿಯ ಪ್ರಬಂಧವೋ ಹರಟೆಯೋ? ಮುದ್ರಣ ಮಾತ್ರ ಸುಧಾರಿಸಿದೆ. ಒಳ್ಳೆಯ ಕಥೆಗಳು, ಕಾದಂಬರಿಗಳು ಕಸ್ತೂರಿಯಲ್ಲಿ ಬರಲಿ.

ಬೆಳಗಾವಿ —ಎಸ್. ಎಂ. ಖಾಸಭಾಗ

**'ಮಿನಿ'ಯಲ್ಲ 'ಮೇಜರ್'**

ಜನೆವರಿ ೧೯೮೬ರ 'ಕಸ್ತೂರಿ'ಯಲ್ಲಿ ಪ್ರಕಟವಾದ ಅಶೋಕಕುಮಾರ್‌ರವರ (ಮಿನಿ ಕಥೆ) 'ಹೀಗೊಂದು ಪ್ರೇಮ ಕಥೆ' ಪ್ರಸ್ತುತ ನಮ್ಮ ಸಮಾಜದಲ್ಲಿ ನಡೆಯಬಹುದಾದ ಘಟನೆಯ ಒಂದು ತುಣುಕು ಎನ್ನಬಹುದು. ಇದೊಂದು 'ಮಿನಿ' ಕಥೆಯಾದರೂ ಅರ್ಥ ಮಾತ್ರ 'ಮೇಜರ್'.

ಮು.ಖಾ. ಹುಬ್ಬಳ್ಳಿ —ನಾಗೇಶ ಶಿ. ಬಡಿಗೇರ

**ಉತ್ತಮ ಲೇಖನ**

ವಿ. ಎಸ್. ಸೂರ್ಯನಾರಾಯಣರ 'ಖೋಟಾನೋಟುಗಳಿಗೊಂದು ಪತ್ರಿಕೆ' (ಜನವರಿ) ವಿಶೇಷ ಮಾಹಿತಿಗಳನ್ನೊಳಗೊಂಡು, ಉತ್ತಮ ನಿರೂಪಣೆಯಿಂದಾಗಿ ಯಾವುದೇ ಪತ್ತೇದಾರಿ ಕತೆಗಿಂತಲೂ ಕುತೂಹಲಕಾರಿ.

ಬೆಂಗಳೂರು —ಹ. ರಾ. ಶ್ರೀಧರ

**ಅವಾಸ್ತವ**

ಪ್ರಪಂಚದ ಎಲ್ಲಾ ಕಡೆಗಳಲ್ಲೂ ಕ್ರಿಸ್‌ಮಸ್ ಸಮಯದಲ್ಲಿ ಕ್ರೈಸ್ತರು ಆಡುವ ನಾಟಕ ಕ್ರಿಸ್ತನ ಜನನವನ್ನು ಸೂಚಿಸುವಂಥಾದ್ದು ಮಾತ್ರ. ಇದಕ್ಕೆ ಬದಲು ಕ್ರಿಸ್ತನನ್ನು ಶಿಲುಬೆಗೆ ಹಾಕುವ ಒಂದು ದೃಶ್ಯವನ್ನು ಶುಭ ಶುಕ್ರವಾರದಂದು ಮಾತ್ರ ತೋರಿಸಲು ಸಾಧ್ಯ [ಅಂದರೆ ಕ್ರಿಸ್ತನು ಪ್ರಾಣವನ್ನು (ಶಿಲುಬೆಯಲ್ಲಿ) ಬಿಡುವ ಸಮಯ]. ಕ್ರಿಸ್ತನು ಕಂದನಾಗಿ ಹುಟ್ಟುವ ಸಮಯ ಬೇರೆ, ಕ್ರಿಸ್ತ ಶಿಲುಬೆಯಲ್ಲಿ ಕೂಗುತ್ತಾ ಪ್ರಾಣ ಬಿಡುವ ಸಮಯ ಬೇರೆ.

ಆದ್ದರಿಂದ 'ಕಸ್ತೂರಿ'ಯ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ವಿಜಯ ಅವರ ನಗೆಹನಿ ಅವಾಸ್ತವವೆನಿಸುತ್ತದೆ.

ಬೆಂಗಳೂರು —ಐ. ಎಸ್. ದಯಾಳ ಕ್ರಿಸ್ಟೋಫರ್

**ಮಿ. ಡೆಮೋಕ್ರ್ಯಾಟ್**

೩೬ ನೆಯ ಗಣರಾಜ್ಯೋತ್ಸವಕ್ಕಿದು ಒಂದು ಅಪೂರ್ವ, ಅರ್ಥಪೂರ್ಣ ಕಾಣಿಕೆ. ಆದರ್ಶಕ್ಕೂ ವಾಸ್ತವತೆಗೂ ಇರುವ ಅಂತರವನ್ನು ಕೆಲವರು ತಟ್ಟನೆ ಗ್ರಹಿಸಲಾರದಾಗುತ್ತಾರೆ. ಗೋಪಾಲ ಆಶ್ರಿತರು ಇಂಥ ಭಾವಜೀವಿ, ಮುಗ್ಧಜೀವಿ ಎಂದು ನಾವು ಭಾವಿಸಬೇಕೆ?

ಸಾಂಗಲಿ —ಪ್ರ. ಕೆ. ಕುಲಕರ್ಣಿ

**ತಾನSS ತಂದಾನSSS**

ನಾನಾ ಬರೆದ 'ತಾನSS ತಂದಾನSSS' ಓದಿದಾಗ ಕಟು ವಾಸ್ತವತೆಯನ್ನೂ ಕಲಾತ್ಮಕವಾಗಿ ಹೃದಯಕ್ಕೆ ನೇರವಾಗಿ ನಡುವಂತೆ ಹೇಳಲು ಸಾಧ್ಯವೆಂದು ನನಗೆ ಮನವರಿಕೆಯಾಯಿತು.

ರಾಯಚೂರು —ಎನ್. ಸಿಂಧು

**ಹಾಕಿಕೊಟ್ಟ ದಾರಿ**

ಮಹಿಷಮಂಡಲದ ಮಾಜಿ ಮಂತ್ರಿ ಶ್ರೀಮಾನ್ ಬಂಡೋ ರಾಮಚಂದ್ರ ಕುದರಿಯವರ ಅಮೋಘ ಜೀವನ ಚರಿತೆಯನ್ನಿತ್ತು ಎರಡು ತಿಂಗಳುಗಳು ಸವೆಯುವುದರಲ್ಲೇ ಡಾ. ವಿಷ್ಣುಶರ್ಮ ವನಹಳ್ಳಿಯವರು ನಮಗೆ ನವೀನ ದರ್ಶನ ಮಾಡಿಸಿ ಉಪಕಾರ ಕಟ್ಟಿಕೊಂಡಿದ್ದಾರೆ. ಅವರ ಉಪಕಾರವನ್ನು ಹೇಗೆ ಸ್ಮರಿಸುವುದೆಂದೇ ನನಗೆ ತಿಳಿಯದಾಗಿದೆ. ಶ್ರದ್ಧಾಂಜಲಿಯ ಹಲವು ಹತ್ತು ರೂಪಗಳನ್ನು ತೆರೆದು ತೋರಿಸಿದ್ದಾರೆ, ಈಗ ನಾನು ನನ್ನ ತೀರ್ಥರೂಪರು ನನಗಿಂಥ ಶ್ರದ್ಧಾಂಜಲಿ ಸಲ್ಲಿಸುವ ಅವಕಾಶವನ್ನು ಯಾವಾಗ ಕಲ್ಪಿಸುತ್ತಾರೋ ಎಂದು ಆಸೆಯಿಂದ ಎದುರು ನೋಡುತ್ತಿದ್ದೇನೆ. ನನ್ನಲ್ಲಿಯ ಸಾಹಿತ್ಯ ಸಸಿ ಬೇಗ ಮೊಳಕೆಯೊಡೆಯಲೆಂದೇ ನನ್ನ ತೀರ್ಥರೂಪರು ಸದಾ ಹಾರೈಸುತ್ತಿರುತ್ತಾರೆಂಬ ವಿಶ್ವಾಸವೂ ನನಗಿದೆ.

ಹುಬಳ್ಳಿ —ಓರ್ವ ನಮ್ರ ಅಭಿಮಾನಿ

# ಕಸ್ತೂರಿ

ವರ್ಷ : ೩೦ ಫೆಬ್ರುವರಿ ೧೯೮೬ ಸಂಚಿಕೆ : ೬


## ಇದು ದೇಶಕ್ಕೆ ಹೊಸ ತಿರುವು ನೀಡಬಹುದೆ?

ರಮಾನಂದ

೧೯೭೪. ಒಂದು ದೃಷ್ಟಿಯಿಂದ ಇದು ನಮ್ಮ ದೇಶದ ರಾಜಕೀಯ ಇತಿಹಾಸದಲ್ಲಿ ಮಹತ್ವದ ವರ್ಷ. ಸ್ವಾತಂತ್ರ್ಯೋತ್ತರದಲ್ಲಿ ಆಡಳಿತದಲ್ಲಿ ಬೇರುಬಿಟ್ಟಿರುವ ಭ್ರಷ್ಟಾಚಾರ ಮತ್ತು ಅದರಿಂದ ಒಟ್ಟಾರೆ ಸಮಾಜ ಜೀವನದಲ್ಲಿಯ ನೈತಿಕ ಅಧಃಪತನಗಳ ವಿರುದ್ಧ ಸಿಡಿದೆದ್ದ ಗುಜರಾತದ ಯುವಕರು ನವನಿರ್ಮಾಣ ಆಂದೋಲನವನ್ನು ಪ್ರಾರಂಭಿಸಿ ಎರಡು ತಿಂಗಳು ಹೋರಾಡಿ ತಮ್ಮ ಮುಖ್ಯ ಬೇಡಿಕೆಯಾಗಿದ್ದ ವಿಧಾನ ಸಭೆಯ ವಿಸರ್ಜನವನ್ನು ಸಾಧಿಸಿದರು. ಈ ಆಂದೋಲನಕ್ಕೆ ಮೂಲ ಸ್ಫೂರ್ತಿ ಜಯಪ್ರಕಾಶ ನಾರಾಯಣರಿಂದ ದೊರೆತಿರಬಹುದಾದರೂ ಅಥದಿಂದ ಇತಿಯವರೆಗೆ ಅದನ್ನು ರೂಪಿಸಿ, ಸಂಘಟಿಸಿ ಕೃತಿಗಿಳಿಸಿದ ಶ್ರೇಯಸ್ಸು ಕೈಬೆರಳ ಮೇಲೆಣಿಸುವಷ್ಟು ವಿದ್ಯಾರ್ಥಿ ಧುರೀಣರಿಗೇ ಸಲ್ಲುತ್ತದೆ. ಆದರೆ ಆ ಆಂದೋಲನ ಎಷ್ಟು ರಭಸದಿಂದ

ಪ್ರಾರಂಭವಾಯಿತೋ, ವಿಧಾನಸಭೆಯು ವಿಸ-ರ್ಜನದೊಂದಿಗೆ ಅಷ್ಟೇ ದ್ರುತಗತಿಯಿಂದ ಕರಗಿಯೂ ಹೋಯಿತು. ಮುಂದಿನ ವರ್ಷದಲ್ಲಿ ಪ್ರಧಾನಿಯವರು ಆಪತ್ಕಾಲೀನ ಸ್ಥಿತಿಯನ್ನು ಜಾರಿಗೆ ತರುವುದಕ್ಕೆ ಈ ಆಂದೋಲನವೂ ತಕ್ಕ ಮಟ್ಟಿಗೆ ಕಾರಣವಾಗಿರಬೇಕು.

ಗುಜರಾತದಲ್ಲಿ ಇಂಥ ಆಂದೋಲನ ಆಯಿತೆಂ-ದರೆ, ಅಥವಾ ದೇಶದಲ್ಲಿ ಇತರತ್ರ ಯಾರೂ ಎತ್ತಿಕೊಳ್ಳಲು ಮುಂದಾಗದಂಥ ಸಮಸ್ಯೆಗಳನ್ನು ಎತ್ತಿಕೊಂಡು ಹೊಸ ಆಂದೋಲನಗಳು ಗುಜರಾತದಲ್ಲಿ ಆಗುತ್ತವೆಂದರೆ ಆಶ್ಚರ್ಯಪಡುವುದಕ್ಕೆ ಕಾರಣವಿಲ್ಲ. ಯಾಕೆಂದರೆ, ದೇಶದಲ್ಲಿ ಮುಂದು-ವರಿದ ಹಾಗು ಶ್ರೀಮಂತ ರಾಜ್ಯಗಳಲ್ಲಿ ಗುಜರಾತ ಒಂದು. ಆದರೆ ಅಸ್ಸಾಮಿನಲ್ಲಿ ಇತ್ತೀಚೆ ನಡೆದ ಘಟನೆ ಮಾತ್ರ ಹೊಸ ಆಸೆಗಳನ್ನು ಚಿಗುರಿಸು-ತ್ತಿದೆ. ಅಲ್ಲಿ ಆರು ವರ್ಷ ಕಾಲ ಸತತವಾಗಿ ಆಂದೋಲನ ನಡೆಸಿ ಅಲ್ಲಿರುವ ವಿದ್ಯಾರ್ಥಿಗಳು ಚುನಾವಣೆಯನ್ನು ಜಯಿಸಿ ಈಗ ಮಂತ್ರಿ ಮಂಡಲವನ್ನೂ ರಚಿಸಿದ್ದಾರೆ. ಮುಖ್ಯಮಂತ್ರಿಯಾದ ವಿದ್ಯಾರ್ಥಿನಾಯಕ ಪ್ರಫುಲ್ಲ ಮಹಂತ ೩೦ ವರ್ಷದ ಎಲೆಲೆಂ ವಿದ್ಯಾರ್ಥಿ. ಅವರ ಮಂತ್ರಿ ಮಂಡಲದ ಸದಸ್ಯರ ಸರಾಸರಿ ವಯಸ್ಸು ೨೮!

ಅಸ್ಸಾಮ್ ಎದುರಿಸಿದ ಸಮಸ್ಯೆಗಳು ದೇಶದ ಇತರೆಡೆಗಳಲ್ಲಿಗಿಂತ ತೀರ ಭಿನ್ನವಾಗಿವೆ. ರಾಜಕೀಯ ಭ್ರಷ್ಟಾಚಾರ ಹಾಗೂ ಆಡಳಿತದಲ್ಲಿ ಅಕ್ಷದತೆಗೆ ಈ ರಾಜ್ಯವೇನೂ ಅಪವಾದವಾಗಲಾರದು. ಆದರೆ ದೇಶ ವಿಭಜನೆಯೊಂದಿಗೆಯೇ ಇಲ್ಲಿ ಹೊಸ ಹೊಸ ಸಮಸ್ಯೆಗಳು ತಲೆಯೆತ್ತ ತೊಡಗಿವೆ. ಅದರಲ್ಲಿ ಅತಿ ಮುಖ್ಯವಾದುದೆಂದರೆ ಬಂಗ್ಲಾದೇಶ(ಹಿಂದಿನ ಪೂರ್ವ ಪಾಕಿಸ್ತಾನ) ದೊಂದಿಗಿನ ಗಡಿ. ಈ ಗಡಿಯನ್ನು ದಾಟಿ ೧೯೪೭ ರಿಂದಲೇ ಅನೇಕ ಜನ ಬಂಗಾಲಿಗಳು ಅಸ್ಸಾ-ಮಿಗೆ ಅಕ್ರಮವಾಗಿ ನುಗ್ಗಿ ಬಂದು ನೆಲೆಸಿದ್ದಾರೆ. ಕಳೆದ ಮೂರೂವರೆ ದಶಕದಲ್ಲಿ ಅವರ ಸಂಖ್ಯೆ ಹಲವು ಲಕ್ಷಗಳಿಗೆ ಏರಿದೆ. ಈ ರೀತಿ ಅಕ್ರಮವಾಗಿ ಬಂದವರಲ್ಲಿ ಹಿಂದೂಗಳೂ ಇದ್ದಾರೆ, ಮುಸಲ್ಮಾನರೂ ಇದ್ದಾರೆ; ಮುಸಲ್ಮಾನರು ಬಹುಸಂಖ್ಯರೆಂಬ ಮಾತು ಬೇರೆ. ಆದರೆ ಅಧಿಕಾರ ಲಾಲಸಿ ರಾಜಕಾರಣಿಗಳು ತಮ್ಮ ಬೇಳೆ ಬೇಯಿಸಿಕೊಳ್ಳಲು ಈ ಅಕ್ರಮ ವಲಸೆಗಾರರ ಪೂರ್ಣ ಪ್ರಯೋಜನ ಪಡೆದರು. ಅದರಲ್ಲಿ ಹೆಚ್ಚಿನವರಿಗೆ ಮತದಾನದ ಹಕ್ಕು ನೀಡಿ ಚುನಾವಣೆಗಳಲ್ಲಿ ಬಳಸಿಕೊಳ್ಳತೊಡಗಿದಾಗ ಅಸ್ಸಾಮಿ ಭಾಷಿಕರಿಗೆ ಭಯವುಂಟಾಗಿ ತಮ್ಮ ರಾಜ್ಯದಲ್ಲಿ ತಾವೇ ಅಲ್ಪ ಸಂಖ್ಯಾತರಾಗಿಬಿಡಬಹುದಾದ ಭೀತಿ ತಲೆದೋರಿತು. ವಿದೇಶೀಯರನ್ನು ಗುರುತಿಸಿ ಹೊರ ಹಾಕಬೇಕೆಂಬ ಬೇಡಿಕೆಯೊಂದಿಗೆಯೆ ಅಸ್ಸಾಮ್ ವಿದ್ಯಾರ್ಥಿ ಆಂದೋಲನ ೧೯೭೯ರಲ್ಲಿ ಮೈದಳೆಯಿತು. ಕೇಂದ್ರದೊಂದಿಗೆ ಹಲವಾರು ಸುತ್ತು ಮಾತುಕತೆಗಳು ನಡೆದುವಾದರೂ ಸಮಸ್ಯೆ ಉಳಿದುಕೊಂಡೇ ಬಂತಲ್ಲದೆ ಅದರ ಪರಿಹಾರಕ್ಕೆ ಚಾಲನೆ ಸಿಕ್ಕುದು ರಾಜೀವ ಗಾಂಧಿಯವರು ಪ್ರಧಾನಿಯಾದ ನಂತರವೇ.

ಇಲ್ಲಿ ನಾವು ಗಮನಿಸಬೇಕಾದ ಒಂದು ಅಂಶವೆಂದರೆ ಆಂದೋಲನವನ್ನು ಆರು ವರ್ಷ ಕಾಲ ಜೀವಂತ ಉಳಿಸಿಕೊಂಡು ಬಂದುದು. ಯುವಕರ ಉತ್ಸಾಹ ಸಾಮಾನ್ಯವಾಗಿ ಅಲ್ಪಾಯುಷಿ. ಅದನ್ನು ಜೀವಂತವಾಗಿಡಲು ನಿಷ್ಣಾತ ಧುರೀಣರೇ ಬೇಕೆಂಬುದನ್ನು ಇತಿಹಾಸ ಎತ್ತಿತೋರಿಸುತ್ತದೆ. ಆದರೆ ಇಲ್ಲಿ (ಅಸ್ಸಾಮಿನಲ್ಲಿ) ನಾಯಕರು ಅನು-ಯಾಯಿಗಳು ಎಲ್ಲರೂ ಯುವ ವಿದ್ಯಾರ್ಥಿಗಳೇ. ಅಲ್ಲದೆ ಅಂದೋಲನವೊಂದು ಇಷ್ಟು ದೀರ್ಘ ಕಾಲ ಜೀವಂತವಿರಬೇಕಾದರೆ ಬರಿ ಭಾವೋದ್ರೇಕ ಸಾಲದು. ತಮ್ಮ ಗುರಿಯ ಬಗ್ಗೆ ಸಾಮಾನ್ಯನಿಗೂ ಸ್ಪಷ್ಟ ಕಲ್ಪನೆಯಲ್ಲದೆ ಶ್ರದ್ಧೆಯೂ ಬೇಕಾಗುತ್ತದೆ.

ಭಾರತದ ರಾಜಕಾರಣದಲ್ಲಿ ಪ್ರಾದೇಶಿಕ ಪಕ್ಷಗಳ ಹೆಚ್ಚಳ ರಾಷ್ಟ್ರಹಿತದ ದೃಷ್ಟಿಯಿಂದ ಎಷ್ಟು ಸಾಧುವೆಂಬುದು ಚರ್ಚಾಸ್ಪದ ವಿಷಯುವೇ ಸರಿ.

ತಮಿಳುನಾಡಿನಲ್ಲಿ ದ್ರಾವಿಡ ಕಳಗ, ಕಾಶ್ಮೀರದಲ್ಲಿ ನ್ಯಾಶನಲ್ ಕಾನ್ಫರೆನ್ಸ್, ಪಂಜಾಬದಲ್ಲಿ ಅಕಾಲಿ ದಳ, ಆಂಧ್ರದಲ್ಲಿ ತೆಲಗುದೇಶಂ ಹಾಗು ಅವೆಲ್ಲವು ಗಳಿಗೂ ಕಳಸವಿಡುವಂತೆ ಅಸ್ಸಾಮಿನಲ್ಲಿ ಅಸೋಂ ಗಣಪರಿಷತ್ ಪ್ರಾದೇಶಿಕ ಪಕ್ಷಗಳತ್ತ ಜನಸಾಮಾನ್ಯನ ಒಲವನ್ನು ಎತ್ತಿತೋರಿಸುತ್ತಿವೆ. ನಮ್ಮ ರಾಜ್ಯವ್ಯವಸ್ಥೆ ಹಲವು ರಾಜ್ಯಗಳ ಒಕ್ಕೂಟವೆಂದು ಸಂವಿಧಾನವೇ ಹೇಳುತ್ತಿರುವಾಗ ಈ ಬೆಳವಣಿಗೆಯನ್ನು ಸಂಶಯದಿಂದ ನೋಡುವ ಅಗತ್ಯವಿಲ್ಲ. ಆದರೆ ಈ ಬೆಳವಣಿಗೆಗೆ ಕಾರಣಗಳನ್ನು ಹುಡುಕಲು ಬಹು ದೂರವೇನೂ ಹೋಗಬೇಕಿಲ್ಲ. ಸ್ವಾತಂತ್ರ್ಯೋತ್ತರದಲ್ಲಿ ಅಖಿಲ ಭಾರತೀಯ ಮಟ್ಟದಲ್ಲಿ ಹಲವಾರು ಪಕ್ಷಗಳು ತಲೆಯೆತ್ತಿದ, ವಾದರೂ ನಿಜವಾದ ಅರ್ಥದಲ್ಲಿ ಕಾಂಗ್ರೆಸ್ಸೊಂದೇ ಸರ್ವವ್ಯಾಪಿ ಪಕ್ಷವಾಗಿ ಉಳಿದುಕೊಂಡಿದೆ. ದೇಶದಲ್ಲಿ ಅಲ್ಪಾವಧಿಯ ಜನತಾ ಆಡಳಿತವನ್ನು ಬಿಟ್ಟರೆ ಕಾಂಗ್ರೆಸ್ಸೇ ಅಧಿಕಾರದಲ್ಲಿದೆ. ಹಲವು ಬಾರಿ ಹೋಳಾದ ನಂತರವೂ ಅದು ಈಗಲೂ ಇಂದಿರಾ ಉಪಾಧಿಯೊಂದಿಗೆ ಅಧಿಕಾರಾರೂಢ ಪಕ್ಷವಾಗಿ ಮುಂದುವರಿದಿದೆ.

ಕಳೆದ ೩೫ ವರ್ಷಗಳಲ್ಲಿ ದೇಶಕ್ಕಾದ ಕಲ್ಯಾಣ ಅಕಲ್ಯಾಣ ಎರಡಕ್ಕೂ ಬಹು ಮಟ್ಟಿಗೆ ಕಾರಣ ಕಾಂಗ್ರೆಸ್ಸೇ ಎಂಬುದನ್ನು ಮರೆಯಲಿಕ್ಕಾಗದು. ಕಾಂಗ್ರೆಸ್ಸು ಅನೇಕ ವಿಚ್ಛಿದ್ರಕಾರಕ ಶಕ್ತಿಗಳೆದುರಲ್ಲೂ ದೇಶವನ್ನು ಒಟ್ಟಾಗಿ ಹಿಡಿದಿರುವುದು ಅದರ ಬಹು ದೊಡ್ಡ ಸಾಧನೆ. ಅಲ್ಲದೆ ಜಾಗತಿಕ ಮಟ್ಟದಲ್ಲಿ ಅತ್ಯಂತ ಯೋಗ್ಯ ನೀತಿಯೆನಿಸಿರುವ ಅಲಿಪ್ತ ನೀತಿಯು ಕಾಂಗ್ರೆಸ್ಸಿನ ವಿಶಿಷ್ಟ ಕೊಡುಗೆ. ಬಂಗ್ಲಾ ಉದಯಕ್ಕೆ ಕೂಡ ಕಾಂಗ್ರೆಸ್ಸೇ ಕಾರಣ. ಕಾಂಗ್ರೆಸ್ಸಿನ ಅಪ್ರತಿಮ ನೇತಾರರಾಗಿದ್ದ ನೆಹರೂ ಅವರು ಪ್ರಜಾತಂತ್ರದ ಅನೇಕ ಸಂತ್ಸಪ್ರದಾಯಗಳನ್ನು ತುಂಬ ಎಚ್ಚರದಿಂದ ಅನುಷ್ಠಾನಕ್ಕೆ ತರಲು ಶ್ರಮಿಸಿದರು. ಆದರೆ ಅವರ ಮಗಳು ಇಂದಿರಾ ಅಧಿಕಾರದ ಕೇಂದ್ರೀಕರಣಕ್ಕಾಗಿ ತತ್ವಗಳನ್ನೆಲ್ಲ ಗಾಳಿಗೆ ತೂರಿ ದೇಶವನ್ನು ತಮ್ಮ ಮನೆತನದ ಆಸ್ತಿಯಾಗಿ ಪರಿವರ್ತಿಸಿಕೊಂಡಂತೆ ಮಾಡಿದರು. ರಾಜನೀತಿಯ ಹೆಸರಿನಲ್ಲಿ ಹೊಗಳುಭಟರೂ ಸಮಯಸಾಧಕರೂ ಅಧಿಕಾರದ ಗದ್ದುಗೆಯೇರುವುದಕ್ಕೆ ಅವಕಾಶ ಮಾಡಿಕೊಟ್ಟರು. ಅವರ ಅಧಿಕಾರಾವಧಿಯಲ್ಲೇ



ಅಸ್ಸಾಮಿನ ಮುಖ್ಯಮಂತ್ರಿ ಪ್ರಫುಲ್ಲ ಮಹಂತರಿಗೆ ಈಗ ವಿಜಯದ ಉಲ್ಲಾಸಕ್ಕಿಂತ ಜವಾಬ್ದಾರಿಯ ಮೆಟ್ಟಿಲೇರುವ ಹೊರೆಯೇ ಹೆಚ್ಚಾಗಿರಬೇಕೇನೊ. ಆದರೀಗ 'ಅಕ್ರಮ ಪ್ರವೇಶ ಮಾಡಿದ ವಿದೇಶಿ'ಗಳೆಂದು ಒಮ್ಮೆ ಕರೆಯುತ್ತಿದ್ದವರನ್ನು 'ಅವರೂ ಈ ನೆಲದ ನಾಗರಿಕರೇ' ಎನ್ನತೊಡಗಿದ್ದಾರೆ.

ಪ್ರಾದೇಶಿಕ ಪಕ್ಷಗಳು ಪ್ರಬಲವಾದವು. ಅವುಗಳ ಬಲವನ್ನು ಮುರಿಯಲು ಅವರು ಏನೆಲ್ಲವನ್ನೂ ಮಾಡಿದರು. ಆಂಧ್ರದಲ್ಲಿ ಎನ್. ಟಿ. ಆರ್. ಮಂತ್ರಿಮಂಡಳವನ್ನೂ ಕಾಶ್ಮೀರದಲ್ಲಿ ಫರೂಕ್ ಮಂತ್ರಿಮಂಡಳವನ್ನೂ ಉರುಳಿಸಿದ್ದು, ಕರ್ನಾಟಕದಲ್ಲಿ ಹೆಗಡೆ ಸರಕಾರವನ್ನುರುಳಿಸಲೆಂದು ಬಳಸಿದ ಅನೇಕ ಅಯಶಸ್ವಿ ತಂತ್ರಗಳು ಪ್ರಜಾತಂತ್ರವನ್ನೇನೂ ಪೋಷಿಸಲಿಲ್ಲ. ಅಸ್ಸಾಮಿನಲ್ಲಿ ಮೂರು ವರ್ಷಗಳ ಹಿಂದೆ ನಡೆಸಿದ ಚುನಾವಣೆಯ ಅಣಕವನ್ನು ದೇವರೇ ಮೆಚ್ಚಿರಬೇಕು, ಅವರ ನಂತರ ಅಧಿಕಾರಕ್ಕೆ ಬಂದ ರಾಜೀವ ಗಾಂಧಿಯವರು ಪ್ರಾದೇಶಿಕ ಪಕ್ಷಗಳನ್ನು ರಾಷ್ಟ್ರವಿರೋಧಿಯೆಂದು ಕರೆದಿದ್ದರೂ ವಾಸ್ತವದಲ್ಲಿ ಅವರು ವಸ್ತುಸ್ಥಿತಿಯನ್ನು ಗೌರವಿಸುವವರಾಗಿ ತೋರುತ್ತಾರೆ. ಕಳೆದ ವರ್ಷ ಲೋಕಸಭಾ ಚುನಾವಣೆಯಲ್ಲಿ ದೊರೆತ ಅಭೂತಪೂರ್ವ ವಿಜಯ ಅವರ ನೆತ್ತಿಗೇರಲಿಲ್ಲ. ಪಂಜಾಬಿ, ಅಸ್ಸಾಮ್‌ಗಳಂಥ ಗಡಿ ರಾಜ್ಯಗಳಲ್ಲಿ ಕಾಂಗ್ರೆಸ್ಸೇತರ ಸರಕಾರಗಳು ಅಧಿಕಾರಕ್ಕೆ ಬಂದಾಗಲೂ ಅವರು ಅದನ್ನು ಸಹನೆಯಿಂದ ಕಂಡಿದ್ದಾರೆ.

ಇತರತ್ರ ಕಾಂಗ್ರೆಸ್ಸೇತರ ಸರಕಾರಗಳು ಬಂದಿರುವುದಕ್ಕೂ ಅಸ್ಸಾಮಿನಲ್ಲಿ ಬಂದಿರುವುದಕ್ಕೂ ಒಂದು ಸ್ಪಷ್ಟ ಅಂತರವಿದೆ. ಉಳಿದೆಡೆಗಳಲ್ಲಿಯಂತೆ ಅಸ್ಸಾಮಿನಲ್ಲಿ ನಿಯುಕ್ತವಾದ ಸರಕಾರದಲ್ಲಿ ವಿಶಿಷ್ಟ ಹಿತಾಸಕ್ತಿಗಳನ್ನು ಬೆಳೆಸಿಕೊಳ್ಳಲು ಅವಕಾಶವಿದ್ದಂಥ ರಾಜಕಾರಣಿಗಳಾರೂ ಇರುವಂತೆ ತೋರುವುದಿಲ್ಲ. ತಮ್ಮ ರಾಜ್ಯಕ್ಕೆ, ತಮ್ಮ ಜನಕ್ಕೆ ಒಳಿತನ್ನು ಮಾಡುವ ಉದ್ದೇಶದಿಂದ ಈ ಹೊಸ ನಾಯಕರು ಪ್ರೇರಿತರಾಗಿದ್ದಾರೆ. ಆದರೆ ಅವರಿನ್ನೂ ಅಧಿಕಾರಕ್ಕೆ ಹೊಸಬರು, ಅಧಿಕಾರ ಒಡ್ಡುವ ಆಮಿಷಗಳಿಗೆ ಹೊಸಬರು, ಆದರೆ ಅಧಿಕಾರ ಸಾಮಾನ್ಯವಾಗಿ ಮನುಷ್ಯನನ್ನು ದಾರಿಗೆಡಿಸುತ್ತದೆ. ಅನುಕೂಲಸಿಂಧುವಿಗಾಗಿ ಆದರ್ಶವನ್ನು ಮರೆತವರೇ ನಮ್ಮ ಅರ್ವಾಚೀನ ಇತಿಹಾಸದಲ್ಲಿ ಜಾಸ್ತಿ. ಆರು ವರ್ಷ ಕಾಲ ಜಿಗುಟುತನದಿಂದ ಹೋರಾಡಿ ಇದುವರೆಗೆ ಕಡೆಗಣಿಸಲ್ಪಟ್ಟ ರಾಜ್ಯಕ್ಕೆ ಆತ್ಮಗೌರವವನ್ನು ತಂದಿತ್ತ ಯುವಧುರೀಣರು ಆದರ್ಶಗಳನ್ನೇ ವಸ್ತುಸ್ಥಿತಿಯಾಗಿ ಪರಿವರ್ತಿಸಿಕೊಳ್ಳುವಲ್ಲಿ ಸಫಲರಾಗುತ್ತಾರೆಂದು ಹಾರೈಸಬೇಕು. ✡



## ಪ್ರಾಚೀನ ಗೊಂಬೆ

ಪ್ರಾಯಶಃ ಜಗತ್ತಿನ ಬಹು ಹಳೆಯದೆಂದು ಹೆಸರಿಸಬಹುದಾದಂತಹ ಗೊಂಬೆಯನ್ನು ಪುರಾತತ್ವ ತಜ್ಞರು ಹಳೆಯ ರೋಂನ ಶವಕೋಶವೊಂದರಲ್ಲಿ ಪತ್ತೆ ಹಚ್ಚಿದ್ದಾರೆ. ಸಮಾರು ೧೮೦೦೦ ವರ್ಷಗಳಷ್ಟು ಹಿಂದಿನದೆಂದು ಭಾವಿಸಲಾಗಿರುವ ಈ ಗೊಂಬೆಯ ಜೊತೆಯಲ್ಲಿ ಗೊಂಬೆಯ ಒಡತಿಯ ಬಗೆಗೂ ಅಪೂರ್ವ ಮಾಹಿತಿ ಲಭ್ಯವಾಗಿದೆ. ಗೊಂಬೆಯ ಒಡತಿಯ ಹೆಸರು ಕ್ರೆಫೆನಿ ತ್ರಿಫೆನಿ ಆಗಿನ ಕಾಲದ ಸಂಪ್ರದಾಯದಂತೆ ಕ್ರೆಫೆನಿ ಹುಟ್ಟಿದಾಗಲೇ ಅವಳನ್ನು ಫಿಲೀಕ್ ಎಂಬ ಮಗುವಿನೊಂದಿಗೆ 'ತೊಟ್ಟಿಲ ವಿವಾಹ' ಮಾಡಲಾಗಿತ್ತು. ಆದರೆ ತ್ರಿಫೆನಿ ಚಿಕ್ಕ ಹುಡುಗಿಯಾಗಿದ್ದಾಗಲೇ ಸಾವಿಗೀಡಾದಳು. ಅವಳ ಶವದೊಂದಿಗೆ, ಅವಳ ಪ್ರೀತಿಯ ಗೊಂಬೆಯನ್ನೂ ಶವಕೋಶದಲ್ಲಿಡಲಾಯಿತು.

–ಶೆಣೈ



# ಶತಮಾನದ ಕೃತಿ ಸ್ಮರಣ

## ಒಂದು ಪ್ರಸ್ತಾವನೆ

**ದೇಶಪಾಂಡೆ ಸುಬ್ಬರಾಯ**

೧

ನೂರಾರು ವರುಷಗಳ ತಳಪಾಯವಾಗಬಲ್ಲ ಯಾವುದೇ ಸಾಮುದಾಯಿಕ ಸಾಂಸ್ಕೃತಿಕ ಮೂಲದ ಐತಿಹಾಸಿಕ ಚಲನವೂ ಒಂದು ನಿರ್ದಿಷ್ಟ ಸೂರ್ಯೋದಯದೊಂದಿಗೆ ಆರಂಭವಾಗುವದಿಲ್ಲ. ಇಡಿಯ ಇತಿಹಾಸದ ದೃಷ್ಟಿಯಿಂದ ಎಷ್ಟೇ ಚಿಕ್ಕದೆನಿಸಿದರೂ ಒಂದು ಆದರ್ಶದಾಯಕ/ಸೃಷ್ಟಿಶೀಲ ಅವಧಿಯ ತಕ್ಕ ವಾತಾವರಣ ಇದಕ್ಕೆ ಹಿನ್ನೆಲೆಯಾಗಿ ರೂಪಿತವಾಗಲೇಬೇಕಾಗುತ್ತದೆ. ಈ ಒಂದು ಅವಧಿಯ/ವಾತಾವರಣದ ಮಧ್ಯದಿಂದಲೇ ಅಷ್ಟೇ ಕ್ರಮೇಣವಾದ ಒಂದು ಐತಿಹಾಸಿಕ ಚಲನೆಯ ಆರಂಭಕ್ಕೆ ಮೊದಲಾಗಬೇಕಾಗುತ್ತದೆ. ಆಧುನಿಕ ಕನ್ನಡ ಸಾಹಿತ್ಯ ರೂಪ ಈ ಒಂದು ಅನಿವಾರ್ಯ ಪರಿಶ್ರಮಕ್ಕೆ ಹೊರತಾಗಬೇಕಾಗಿಲ್ಲ. ಆದ್ದರಿಂದ ಇಂದು ನಾವು ಆಧುನಿಕವೆಂದು ಪರಿಗಣಿಸುವ ಕನ್ನಡ ಸಾಹಿತ್ಯದ ಖಚಿತ ಆರಂಭ ಒಂದು ನಿರ್ದಿಷ್ಟವೇ ಆದ ಆಕೃತಿಯಿಂದ ನಿರ್ದಿಷ್ಟ ವರುಷದಲ್ಲಿಯೇ ಆರಂಭಗೊಂಡಿತೆಂದು ಹೇಳುವುದು ಕೇವಲ ಅಭಿಮಾನ ಮತ್ತು ಅವಸರದ ಮಾತಾಗುವ ಸಂಭವವೇ ಹೆಚ್ಚಾಗುತ್ತದೆ.

ಮೇಲಿನ ಮಾತುಗಳಿಗೆ ಆತುಕೊಂಡು ಹೇಳುವದಾದಲ್ಲಿ, ಆಧುನಿಕ ಕನ್ನಡ ಸಾಹಿತ್ಯದ ಆರಂಭದ ಬಿಂದುವನ್ನು ಗುರುತಿಸಲು ಇಂಥದೇ ಒಂದು ಕೃತಿಯನ್ನಾಗಲೀ ವರುಷವನ್ನಾಗಲೀ ನಿರ್ದೇಶಿಸುವದಕ್ಕಿಂತ ಒಂದು ವಿಶಿಷ್ಟ ಅವಧಿಯತ್ತ ಬೆರಳು ತೋರುವದು ಹೆಚ್ಚು ವಿವೇಕದ ವಿಶ್ಲೇಷಣೆ ಎನಿಸುತ್ತದೆ. ಈ ಹಿನ್ನೆಲೆಯಲ್ಲಿ ಗಮನಿಸಿದರೆ ಗಂಗಾಧರ ಮಡಿವಾಳೇಶ್ವರ ತೂರಮರಿಯವರ 'ಕನ್ನಡ ಬಾಣ ಕಾದಂಬರಿ' (೧೮೭೬/೭೭) ಮತ್ತು ಬಿ. ವೆಂಕಟಾಚಾರ್ ಅವರ 'ಆನಂದಮಠ' ಕಾದಂಬರಿ (೧೮೯೨/೧೮೯೭) ಈ ಅನುವಾದ ಪ್ರಕಟನೆಗಳ ಮಧ್ಯದ ಅವಧಿಯನ್ನು ಆಧುನಿಕ ಕನ್ನಡ ಸಾಹಿತ್ಯದ ಆರಂಭದ ವಾತಾವರಣವೆಂದು ಗುರುತಿಸಬಹುದೇನೋ.

ಎಂದರೆ, ಅನೇಕ ವೈವಿಧ್ಯಮಯ ಘಟ್ಟಗಳಲ್ಲಿ ವಿಶಿಷ್ಟ ತಿರುವುಗಳನ್ನು ಬಳಸಿ, ಹೊಸ ಹೊಸ ಜೀವದ್ರವ್ಯಗಳನ್ನು ಗಳಿಸಿ ಹಳೆಯ ಪೊರೆಗಳನ್ನು ಕಳಚಿ ಅವಿರತವಾಗಿ ಪ್ರವಹಿಸುತ್ತಿರುವ ಆಧುನಿಕ ಕನ್ನಡ ಸಾಹಿತ್ಯ, ಇದೀಗ, ತನ್ನ ನೂರರ ಹರಯದಲ್ಲಿ, ಸರ್ವಾಂಗ ಸಮೃದ್ಧವಾಗಿ ಮುಂದುವರೆಯುತ್ತಿದೆ ಎಂದರ್ಥ.

೨

ಯಾವುದೇ ಒಂದು ನಾಡಿನ ಇತಿಹಾಸದಲ್ಲಿ, ಅದೂ ಈಗಿನ ಆಧುನಿಕ ಜಗತ್ತಿನಲ್ಲಿ, ಒಂದು ಶತಕದ ಅವಧಿ ಎಂದರೆ ಅನೇಕ ದೃಷ್ಟಿಗಳಿಂದ ಗಮನಿಸಲೇಬೇಕಾದ ಒಂದು ಅಧ್ಯಯನಾತ್ಮಕವಾದ ಅವಧಿ ಎನಿಸುತ್ತದೆ.

ಐತಿಹಾಸಿಕ ಏರಿಳಿವು ಮತ್ತು ರಾಜಕೀಯ

ಸ್ಥಿತ್ಯಂತರಗಳ ದೃಷ್ಟಿಯಿಂದ, ಸಾಮಾಜಿಕ ಸಂಘರ್ಷ ಮತ್ತು ಸಾಂಸ್ಕೃತಿಕ ಪಲ್ಲಟಗಳ ದೃಷ್ಟಿಯಿಂದ, ಧಾರ್ಮಿಕ ದೃಷ್ಟಿಭಿನ್ನತೆ ಮತ್ತು ತಾತ್ವಿಕ ತಾಕಲಾಟಗಳ ದೃಷ್ಟಿಯಿಂದ, ವ್ಯಕ್ತಿಗತ ಆಹ್ವಾನ ಮತ್ತು ಸಾಮೂಹಿಕ ಘಾತಗಳ ದೃಷ್ಟಿಯಿಂದ, ಜಾತಿ ಪರಂಪರೆ ಮತ್ತು ವರ್ಗ ವ್ಯವಸ್ಥೆಗಳ ದೃಷ್ಟಿಯಿಂದ, ಭಾಷೆ ಭಾವನೆ ಮತ್ತು ನಾಡು ನುಡಿಗಳ ದೃಷ್ಟಿಯಿಂದ, ಜೀವನಮೌಲ್ಯ ಮತ್ತು ಜೀವದ್ರವ್ಯಗಳ ಒಟ್ಟಾರೆ ಏರಿಳಿವುಗಳ ಸಮಗ್ರ ವಿವೇಚನೆಯ ದೃಷ್ಟಿಯಿಂದ ಈ ಅವಧಿ ವಿಶ್ಲೇಷಿಸಲೇಬೇಕಾದ ಒಂದು ಐತಿಹಾಸಿಕ ಕರ್ತವ್ಯವೆನಿಸುತ್ತದೆ. ಒಂದು ನಾಡು ಮತ್ತು ನಾಡಿನ ಚರಿತ್ರೆಯ ದೃಷ್ಟಿಯಿಂದ ಮೇಲ್ಕಂಡ ಎಲ್ಲ ದೃಷ್ಟಿ ವಿಶ್ಲೇಷಣೆಗಳನ್ನೂ ತನ್ನಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಒಳಗೊಂಡಿರುವ, ಒಂದಿಲ್ಲೊಂದು ರೀತಿಯಲ್ಲಿ ಪ್ರತಿಕ್ರಿಯಿಸಿರುವ ಈ ಅವಧಿಯ ಸಾಹಿತ್ಯದ ಒಂದು ವಿವೇಚನೆ ಕೂಡ ಅಷ್ಟೇ ಅಗತ್ಯದ ಒಂದು ಐತಿಹಾಸಿಕ ಅನಿವಾರ್ಯತೆ ಎನಿಸುತ್ತದೆ.

ಮೇಲ್ಕಾಣಿಸಿದ ಎಲ್ಲ ದೃಷ್ಟಿಗಳಿಂದ, ನಮ್ಮ ನಾಡು ನೆಲಗಳು ಕಂಡ ಎಲ್ಲ ಬಗೆಯ ತಿರುವು

---

ಸುಮಾರಾಗಿ ಒಂದು ಶತಮಾನದುದ್ದಕ್ಕೂ ಅವಿರತವಾಗಿ ಹರಿದು ಬರುತ್ತ, ಮೌಲ್ಯಾತ್ಮಕ ಚಿಂತನೆಗಳ ಹಿನ್ನೆಲೆಯಲ್ಲಿ ವೈವಿಧ್ಯಮಯ ಕೊಡುಗೆಗಳನ್ನು ನೀಡಿದೆ, ಆಧುನಿಕ ಕನ್ನಡ ಸಾಹಿತ್ಯ. ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಇತ್ಯಾದಿ ವಿಭಿನ್ನ ತತ್ವ ಪ್ರತಿಪಾದನೆಗಳ ಪಾರ್ಶ್ವದಲ್ಲಿ ಪ್ರತಿಭಾವಂತರನೇಕರು, ಅಕ್ಷರಶಃ ಸಾವಿರಾರು ಕೃತಿಗಳನ್ನು ರಚಿಸಿದ್ದಾರೆ. ಕಾಲನ ಹೇಳಿಕೆಗೆ ಮೇಳವಾಗಿ ಬಂದ ಈ ಬರಹಗಳ ಒಂದು ಐತಿಹಾಸಿಕ ವಿವೇಚನೆ ಇಂದು ಆಗಬೇಕಾದ ಅಗತ್ಯದ ಕಾರ್ಯಗಳಲ್ಲಿ ಒಂದಾಗಿದೆ. ಎಂತಲೇ ಈ ಹಿನ್ನೆಲೆಯಲ್ಲಿ 'ಕಸ್ತೂರಿ' ಎಂದಿನಂತೆ ತನ್ನದೇ ಆದ ಮಾದರಿ ರೀತಿಯಲ್ಲಿ ಈ ಐತಿಹಾಸಿಕ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಆಧುನಿಕ ಕನ್ನಡ ಸಾಹಿತ್ಯದ ಈ ಸುಮಾರು ಒಂದು ನೂರು ವರುಷಗಳ ಅವಧಿಯಲ್ಲಿ ಮೂಡಿಬಂದ ಸೃಜನಮೂಲದ ಆಯ್ದ ನೂರು ಕೃತಿಶ್ರೇಷ್ಠಗಳ ಮೌಲ್ಯ ವಿವೇಚನೆಯನ್ನು ನಿಮ್ಮೆದುರು 'ಕಸ್ತೂರಿ' ಮಂಡಿಸಲಿದೆ. ಪ್ರತಿ ತಿಂಗಳೂ ಮೂರು ಕೃತಿಗಳಂತೆ ಮೂರು ವರುಷಗಳ ವರೆಗೆ ಈ ಮಾಲೆಯಲ್ಲಿ ತಮ್ಮ ಆಯ್ಕೆಗಳ ವಿವೇಚನೆಗಳನ್ನು ಬರೆಯುವವರು, ಕನ್ನಡದ ಕವಿ, ವಿಮರ್ಶಕ ಮತ್ತು ಕಥೆಗಾರ ದೇಶಪಾಂಡೆ ಸುಬ್ಬರಾಯ ಅವರು. 'ಶತಮಾನದ ಕೃತಿ ನೂರು' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗುವ ಈ ವಿವೇಚನಾಮಾಲೆಯ ಮೊದಲಿಗೆ, ದೇಶಪಾಂಡೆ ಸುಬ್ಬರಾಯರು ಬರೆದ ಒಂದು 'ಪ್ರಸ್ತಾವನೆ' ಇದರೊಂದಿಗೆ ಪ್ರಕಟವಾಗಿದೆ. ತಮ್ಮ ಆಯ್ಕೆಯ ಹಿನ್ನೆಲೆ, ಹಾಕಿಕೊಂಡ ಚೌಕಟ್ಟು ಇತ್ಯಾದಿ ಕುರಿತು ಅವರು ಅಲ್ಲಿ ವಿವರಣೆಯನ್ನಿತ್ತಿದ್ದಾರೆ.

ಮುಂದಿನ ಸಂಚಿಕೆಯಲ್ಲಿ (ಮಾರ್ಚ್ ೮೬) ಪ್ರಕಟವಾಗುವ ಬೇಂದ್ರೆಯವರ 'ಗರಿ', ಕಾರಂತರ 'ಅಳಿದ ಮೇಲೆ' ಮತ್ತು ಶ್ರೀರಂಗರ 'ಕತ್ತಲೆ ಬೆಳಕು' ಈ ಮೂರು ಕೃತಿಗಳ ವಿವೇಚನೆಗಳೊಂದಿಗೆ ಈ ಮಾಲೆಯ ಮೊದಲ ಕಂತು ಆರಂಭವಾಗುತ್ತದೆ. ಕನ್ನಡ ವಿಮರ್ಶೆಯ ಸಾಹಿತ್ಯದಲ್ಲಿ ಒಂದು ಮುಖ್ಯ ಘಟನೆಯಾಗಬಲ್ಲ ಈ ವಿವೇಚನಾಮಾಲೆ ನಮ್ಮ ಸಾಹಿತ್ಯಪ್ರೇಮಿಗಳಿಗೂ, ಕನ್ನಡ ಸಾಹಿತ್ಯಕ್ಕೂ 'ಕಸ್ತೂರಿ' ಸಲ್ಲಿಸುವ ನಮ್ರ ಕೊಡುಗೆ ಎಂದು ನಾವು ಭಾವಿಸುತ್ತೇವೆ.

**–ಸಂಪಾದಕ**

ಗಳ ಅನೇಕ ವಿಧದ ಪರಿಣಾಮ ನಮ್ಮ ಸಾಹಿತ್ಯದ ಮೇಲೆ ಆಗಿಯೇ ಇದೆ: ಪ್ರತ್ಯಕ್ಷವಾಗಿ ಇಲ್ಲ ಪರೋಕ್ಷವಾಗಿ, ಅಧ್ಯಯನವಾಗಿ ಇಲ್ಲ ಅನುಭವವಾಗಿ, ವಿವೇಕವಾಗಿ ಇಲ್ಲ ವ್ಯವಹಾರವಾಗಿ, ಪ್ರಚೋದಕವಾಗಿ ಇಲ್ಲ ಪ್ರತಿಭಟನೆಯಾಗಿ. ಏನಿದ್ದರೂ, ಆಯಾ ಬರಹಗಾರನ ಅನುಭವ, ಅನುಭೂತಿ, ವಾತಾವರಣ, ದೃಷ್ಟಿಕೋನ, ಅಭ್ಯಾಸ, ಉದ್ದೇಶ, ನಿಸ್ಪೃಹತೆ, ನಿಖರತೆ, ನಿಷ್ಠೆ, ನಂಬಿಕೆ ಇತ್ಯಾದಿ ಎಲ್ಲ ಪರಿಕರಗಳ ವಿವಿಧ ಮಟ್ಟಗಳಿಗನುಗುಣವಾಗಿ ಮತ್ತು ಯಥಾಸಾಧ್ಯ ಕಲಾತ್ಮಕ ಸ್ಪರ್ಶಗಳಿಂದಾಗಿ ಅಸಂಖ್ಯ ಸಾಹಿತ್ಯಕ ಕೃತಿಗಳಾಗಿ ಮೂಡಬಂದಿವೆ. ಕಾಲನ ತಿರುವುಗಳಿಗೆ ತಕ್ಕಂತೆ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತಾದಿ ಪ್ರಜ್ಞೆ ಪ್ರತಿಪಾದನೆಗಳ ಪಾರ್ಶ್ವದಲ್ಲಿ ತಮ್ಮ ವೈಶಿಷ್ಟ್ಯಗಳನ್ನು ಮೆರೆದಿವೆ. ಇನ್ನು ಕೆಲ ವೈಶಿಷ್ಟ್ಯಗಳು ಈ ಎಲ್ಲ ಪಾರ್ಶ್ವಗಳ ಪಕ್ಕದಲ್ಲಿದ್ದೂ ತಮ್ಮತನವನ್ನೇ ಮೆರೆದಿವೆ. ಈ ಎಲ್ಲ ವಿಶೇಷ ಬರಹಗಳನ್ನು ವಿವೇಚನೆಯ ಮೂಸೆಯಲ್ಲಿಟ್ಟು ವಿಶ್ಲೇಷಿಸಬಯಸುವುದು ಈ ನನ್ನ ಲೇಖನಮಾಲೆಯ ಉದ್ದೇಶ.

ಆದರೆ ನನ್ನ ವಿವೇಚನೆಯ ಮಾರ್ಗ ಮಾತ್ರ ಕೊಂಚ ಭಿನ್ನವಾಗಿದೆ. ಪ್ರಸ್ತುತ ಶತಮಾನದ ಆರಂಭದಿಂದ ಈ ವರೆಗಿನ ವಿವಿಧ ತಿರುವುಗಳಲ್ಲಿ, ವಿವಿಧ ಧ್ಯೇಯ ಧೋರಣೆ, ತತ್ವ ಸತ್ವ ಮತ್ತು ದೃಷ್ಟಿ ವಿಭಿನ್ನತೆಗಳ ಕೃತಿ ಸೃಷ್ಟಿಗಳ ಮಧ್ಯದಿಂದ ಶ್ರೇಷ್ಠ ನೂರನ್ನಾಯ್ದು ವಿಶ್ಲೇಷಿಸುವುದೇ ಆ ನನ್ನ ಭಿನ್ನ ಮಾರ್ಗವಾಗಿದೆ. ಈ ನೂರು ಶ್ರೇಷ್ಠ ವೈವಿಧ್ಯಗಳ ಮಧ್ಯದಿಂದಲೇ ಆಧುನಿಕ ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಎತ್ತಿ ತೋರಿಸುವುದೇ ಈ ಮಾಲೆಯ ತಳಪಾಯಲಾಗಿದೆ.

## ೨

ಒಂದು ಅಂದಾಜಿನಂತೆ ಈಗ ಕನ್ನಡದಲ್ಲಿ ಪ್ರತಿವರುಷ ಸಾವಿರಕ್ಕೂ ಮಿಕ್ಕಿ ಪುಸ್ತಕಗಳು-ಅಧಿಕೃತ ನೋಂದಣಿಯಂತೆ, ೧೯೭೯ರಲ್ಲಿ ೧೧೫೭, ೧೯೮೦ ರಲ್ಲಿ ೧೧೫೬, ೧೯೮೧ ರಲ್ಲಿ ೧೨೩೫, ೧೯೮೨ ರಲ್ಲಿ ೧೧೭೨ (ಅಂಕಿ ಸಂಖ್ಯೆ; 'ಗ್ರಂಥಲೋಕ') ಕೃತಿಗಳು ಪ್ರಕಟವಾಗುತ್ತವೆ. ಪ್ರತಿ ವರುಷದ ಇಂಥ ಒಂದು ಸಮೃದ್ಧ ನಿರ್ಮಿತಿಯ ಹಿನ್ನೆಲೆಯಲ್ಲಿ ಕಳೆದ ಸುಮಾರು ಒಂದು ನೂರು ವರುಷಗಳಲ್ಲಿ ಪ್ರಕಟವಾಗಿರಬಹುದಾದ ಪುಸ್ತಕಗಳ ಸಂಖ್ಯೆಯನ್ನು, ಎಷ್ಟೇ ಜಿಪುಣತನದಿಂದ ಊಹಿಸಿಕೊಂಡರೂ, ಅದು ಊಹಾತೀತವಾಗುವದು ಸ್ವಾಭಾವಿಕ. ಇಂಥ ಒಂದು ಬೃಹತ್ ಮೊತ್ತದ ಮಧ್ಯದಿಂದ ನೂರನ್ನು ಮಾತ್ರ ಆಯ್ದು ಎತ್ತಿ ತೋರಿಸುವುದೂ ತೊರಿಸಿದ್ದನ್ನು ಸಮರ್ಥಿಸಿಕೊಳ್ಳುವುದೂ ಅಷ್ಟೇ ಕಷ್ಟದ ಕಾರ್ಯ. ಎಂತಲೇ ಇಂಥ ಒಂದು ಆಯ್ಕೆಯ ಸಂದರ್ಭದಲ್ಲಿ ಕೆಲವೊಂದು ಖಚಿತವಾದ ಮಾನದಂಡಗಳನ್ನು, ನಿಖರ ನಿಲುವುಗಳನ್ನೂ ಇಟ್ಟುಕೊಳ್ಳುವದು ಅಷ್ಟೇ ಅಗತ್ಯ. ಆದ್ದರಿಂದ ನನ್ನ ಬರಹಗಳಿಗೆ ಮುಂಚೆಯೇ ನನ್ನ ಆಯ್ಕೆಯ ಹಿಂದಿರುವ ನಿಲುವುಗಳನ್ನು ನಿಶ್ಚಿತಪಡಿಸುತ್ತೇನೆ.

ನನ್ನ ಆಯ್ಕೆಗಳಿಗೆ ಮುಖ್ಯ ತಳಪಾಯವಾಗಿಟ್ಟುಕೊಂಡ ಮಾನದಂಡ; ಆಯ್ದ ಕೃತಿಯನ್ನಾವರಿಸಿದ, ಖಚಿತ ವೈಶಿಷ್ಟ್ಯದ ಸೃಜನಾತ್ಮಕ ಗುಣ. ಎಂತಲೇ ಈ ಆಯ್ಕೆಯಲ್ಲಿ ಕಾವ್ಯ, ಕಥೆ, ಕಾದಂಬರಿ ಮತ್ತು ನಾಟಕಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಸ್ವಾಭಾವಿಕ. ಆಧುನಿಕ ಕನ್ನಡ ಸಾಹಿತ್ಯದಲ್ಲಿ, ಒಂದಿಲ್ಲೊಂದು ಹಂತದಲ್ಲಿ, ಐತಿಹಾಸಿಕ ಸಂದರ್ಭದಲ್ಲಿ ವಿಭಿನ್ನ ಭೂಮಿಕೆಗಳ ಮೇಲೆ, ತಮ್ಮ ಗುಣವಿಶೇಷ ಮಾತ್ರಗಳಿಂದ ಮಾನ್ಯತೆ ಪಡೆದ ಬಹುಪಾಲು ಸೃಜನಾತ್ಮಕ ಕೃತಿಗಳೆಲ್ಲವೂ ಇಲ್ಲಿವೆ ಎಂದರೆ ಸಾಕು.

ಆದರೆ, ಇಲ್ಲಿಯ ಆಯ್ಕೆಗಳ ದೃಷ್ಟಿಯಿಂದ ಹೇಳುವುದಾದಲ್ಲಿ, ಕಥೆ, ಕಾದಂಬರಿ, ಕಾವ್ಯ ನಾಟಕಗಳು ಮಾತ್ರವೇ ಸೃಜನಶೀಲ ಬರಹಗಳೆಂಬ ಕಣ್ಣುಪಟ್ಟಿ ಕಟ್ಟಿಕೊಂಡೂ ನಾನು ಹೊರಟಿಲ್ಲ. ಉದ್ದೇಶ ಸೃಜನೇತರ ಬರವಣಿಗೆಯಾಗಿದ್ದರೂ, ಬರಹದ ಅನೇಕ ಮುಖಗಳಲ್ಲಿ, ಬದಿಗಳಲ್ಲಿ, ಅತ್ಯುತ್ತಮವಾದ ಸೃಜನಶೀಲ ಗುಣಗಳನ್ನು ಅಳವಡಿಸಿಕೊಂಡ ಕೆಲವಾದರೂ ಕೃತಿಗಳು ಈ ಮಾಲೆಯಲ್ಲಿ ಸೇರುವ ಅರ್ಹತೆ ಪಡೆದೇ ಇರುತ್ತವೆ. ಹೀಗಾಗಿ ಭಿನ್ನ ಬಗೆಯ, ಭಿನ್ನ ಉದ್ದೇಶದ ಬರಹಗಳಿದ್ದೂ

ಸೃಷ್ಟ್ಯಾತ್ಮಕ ಪ್ರತಿಭೆಯನ್ನೂ ಸ್ಪರ್ಶವನ್ನೂ ಹೊಂದಿದ ಕೃತಿಗಳು ಕೆಲವಾದರೂ ಇಲ್ಲಿ ಸ್ಥಾನ ಗಳಿಸಿಕೊಂಡಿವೆ. ಈ ಅಂಶವನ್ನು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸಬಹುದು.

ಸಾಹಿತ್ಯದ ಇತರ ಪ್ರಕಾರಗಳ ಒಟ್ಟು ಸಾಧನೆಯ ಬದಿಯಲ್ಲಿ ನೋಡಿದರೆ ಕನ್ನಡ ಹರಟೆ ಸಾಹಿತ್ಯದ ಒಟ್ಟು ಮಟ್ಟ ಅಂಥ ಕಣ್ಣು ಕುಕ್ಕುವ ಎತ್ತರವನ್ನೇನೂ ತಲಪಿಲ್ಲ. ಹಾಗಿದ್ದೂ ಯಾವುದೇ ಇತರ ಸೃಷ್ಟ್ಯಾತ್ಮಕ ಬರಹದಂತೆ ಹರಟೆಯೂ ಚಿಂತನ ತಳಪಾಯದ ಒಂದು ಸೃಜನಾತ್ಮಕ ಕೊಡುಗೆಯಾಗಬಲ್ಲದು ಎಂಬುದನ್ನು ತೋರಿಸಿದ ಪ್ರತಿಭಾವಂತರು ಲಾಂಗೂಲಾ ಚಾರ್ಯರು (ಪಾವೆಂ). ಎಂತಲೇ ಅವರ 'ಪ್ರಹಾ ರ'ಕ್ಕೂ ನಾನು ಇಲ್ಲಿ ತಲೆ ಕೊಟ್ಟಿದ್ದೇನೆ.

ಹೀಗೆಯೇ ಸಾಹಿತ್ಯದ ಇತರ ಅನೇಕ ಪ್ರಮುಖ ಪ್ರಕಾರಗಳಾದ ವ್ಯಕ್ತಿಚಿತ್ರಣ, ಪ್ರವಾಸ ಕಥನ, ಪತ್ರಸಾಹಿತ್ಯ, ಅನುಭವ ಕಥನ, ವೈಜ್ಞಾನಿಕ ವಿಚಾರಗಳು, ಐತಿಹಾಸಿಕ ಚಿತ್ರಣ ಇತ್ಯಾದಿ ಮುಖೇನ ಮಾತನಾಡಿಯೂ ಸೃಜನಾತ್ಮಕ ಧ್ವನಿ ಯನ್ನೂ ಹೊಂದಿದ ಅನೇಕ ಕೃತಿಗಳೂ ಈ ಆಯ್ಕೆಯಲ್ಲಿ ಸ್ಥಾನ ಪಡೆದಿವೆ. ಬಿ. ಜಿ. ಎಲ್. ಸ್ವಾಮಿಯವರ 'ಹಸುರು ಹೊನ್ನು', ಎ. ಎನ್. ಮೂರ್ತಿರಾಯರ 'ಚಿತ್ರಗಳು ಪತ್ರಗಳು', ಸಿದ್ದವನಹಳ್ಳಿ ಕೃಷ್ಣಶರ್ಮರ 'ಪರ್ಣಕುಟಿ' ಪ್ರಭುಶಂಕರ ಅವರ 'ಚೆರಗು,' ವಿ. ಸೀ. ಅವರ 'ಪಂಪಾಯಾತ್ರೆ' ಗೊರೂರು ಅವರ 'ನಮ್ಮ ಊರಿನ ರಸಿಕರು', ಶಿವರುದ್ರಪ್ಪನವರ 'ಗಂಗೆಯ ಶಿಖರಗಳಲ್ಲಿ' ಮೊದಲಾದ ಕೃತಿಗಳು, ಈ ಆಯ್ಕೆ ಯಲ್ಲಿ ಸ್ಥಾನ ಪಡೆದ ಹಿನ್ನೆಲೆ ಇದು.

ಈಗ ನೇರವಾದ, ಸೃಷ್ಟ್ಯಾತ್ಮಕ ಕೃತಿಗಳ ಆಯ್ಕೆಯ ಹಿನ್ನೆಲೆಯಲ್ಲಿಯೂ ಒಂದೆರಡು ವಿವರಣೆ ಕೊಡುವುದು ಸೂಕ್ತ. ಈ ವಿವರಣೆ ಯನ್ನು ಒಂದೆರಡು ಉದಾಹರಣೆಗಳೊಂದಿಗೇ ಕೊಡಬಹುದು.

ನಮ್ಮ ಕನ್ನಡ ಕಾದಂಬರಿ ಪ್ರಕಾರದ ಒಟ್ಟು ಎತ್ತರದೊಂದಿಗೆ ಹೋಲಿಸಿದರೆ ತ್ರಿವೇಣಿ ಅವರ ಬರಹಗಳ ಮಟ್ಟ ಸಾಕಷ್ಟು ಕುಬ್ಜವಾಗಿಯೇ ಎಣಿಸುತ್ತದೆ. ಕಹಾಗಿದ್ದೂ ಅವರ ಒಂದು ಕಾದಂಬರಿಯನ್ನು ನಾನು ಎತ್ತಿಕೊಂಡಿದ್ದು ಎರಡು ಕಾರಣಗಳಿಗಾಗಿ. ೧) ಐತಿಹಾಸಿಕವಾಗಿ ಮೊದಲ ಸಲ ಲೇಖಿಕೆಯೊಬ್ಬರು ಹೆಚ್ಚಿನ ಬೀಸಿ ನೊಂದಿಗೆ ಸೃಜನಾತ್ಮಕವಾಗಿ ಬರೆಯಲು ಆರಂಭಿಸಿ ದ್ದಕ್ಕಾಗಿ. ೨) ಕೆಲವಾದರೂ ಅಂಶಗಳಲ್ಲಿ, ತನ್ನ ಸಮಕಾಲೀನರಾದ ಸಾಕಷ್ಟು ಖ್ಯಾತ ಕಾದಂಬರಿಕಾರರೊಂದಿಗೆ ಹೊಯ್‌ಕೈಯಾಗಿ ಹಲವು ಕೊಡುಗೆಗಳನ್ನು ನೀಡಿದ್ದಕ್ಕಾಗಿ.

ಹೀಗೆಯೇ ಒಟ್ಟು ಗುಣಮಟ್ಟದ ದೃಷ್ಟಿಯಿಂದ ಯಾವುದೇ ಶ್ರೇಷ್ಠ ಕಾದಂಬರಿಯ ಸಮೀಪಕ್ಕೆ ಬಾರದಿದ್ದರೂ, ಒಂದು ವಿಶಿಷ್ಟವಾದ ಪ್ರಾದೇಶಿಕ ಹಿನ್ನೆಲೆಯಲ್ಲಿ, ಆಯ್ದುಕೊಂಡ ವಸ್ತು ಮತ್ತು ಆಕೃತಿಗಳೆರಡೂ ತಾವು ನಿಂತ ನೆಲದ ಸೊಗಡನ್ನು ತೊಡೆದುಕೊಂಡ ಪ್ರಾಮಾಣಿಕತೆಯಿಂದಾಗಿಯೇ ಈ ಆಯ್ಕೆಯಲ್ಲಿ ನಾನು ಎರಡು ಭಿನ್ನ ಕಾದಂಬರಿ ಗಳನ್ನೂ ಎತ್ತಿಕೊಂಡಿದ್ದೇನೆ. ಎಂ. ಹರಿದಾಸ-ರಾಯರ 'ಬಾಳಿನ ಗಿಡ' ಮತ್ತು ಭಾರತೀಸುತ ಅವರ 'ಬೆಳ್ಳಿ ಮೂಡಿತು' ಇವೇ ಆ ಎರಡು ಕಾದಂಬರಿಗಳು.

ಅನುವಾದ ಮಾತ್ರಗಳಾಗಿದ್ದರೂ, ಆಧುನಿಕ ಕನ್ನಡ ಸಾಹಿತ್ಯದ ಅನಾವರಣಕ್ಕೇ ಕಾರಣವಾದ 'ಆನಂದ ಮಠ' ಮತ್ತು 'ಇಂಗ್ಲಿಷ್ ಗೀತೆಗಳು' ಇತ್ಯಾದಿಗಳ ಆಯ್ಕೆ ಕುರಿತು ವಿವರಿಸುವ ಅಗತ್ಯ ವಿದೆಯೇ? ಒಂದು ಐತಿಹಾಸಿಕ ಅವಧಿ ಮತ್ತು ಅಗತ್ಯದ ದೃಷ್ಟಿಯಿಂದ ಈ ಕೃತಿಗಳನ್ನು ಕನ್ನಡದ ಸ್ವತಂತ್ರ ಕೃತಿಗಳೊಟ್ಟಿಗೇ ಇಟ್ಟು ನೊಡ-ಬೇಕಾದದ್ದು ಒಂದು ಅನಿವಾರ್ಯ ವಿಷಯ ಎಂದೇ ನಾನು ಭಾವಿಸುತ್ತೇನೆ.

೪

ಇನ್ನು ಕೃತಿಗಳ ಆಯ್ಕೆಗೆ ಸಂಬಂಧಿಸಿದಂತೆ ನಾವಿಟ್ಟುಕೊಂಡ ಒಂದು ನಿಬಂಧನೆಯನ್ನು ವಿವ ರಿಸುವದು ಕೂಡ ಇಲ್ಲಿ ಅಗತ್ಯ — ಸೂಕ್ತ ಎಂದುಕೊಂಡಿದ್ದೇನೆ.

ನನ್ನ ಆಯ್ಕೆಯಲ್ಲಿ ಒಬ್ಬ ಲೇಖಕನ ಯಾವುದೇ ಒಂದು ಕೃತಿಗೆ ಮಾತ್ರವೇ ಪ್ರಾತಿ ನಿಧ್ಯವಿರಬೇಕು ಎಂಬುದೇ ನಾನು ಅಂದು ಕೊಂಡ ನಿಬಂಧನೆ. ಇದರಿಂದ ವ್ಯಕ್ತಿ ವೈಶಿಷ್ಟ್ಯ,

ವಸ್ತು ವೈಶಿಷ್ಟ್ಯಾದಿಗಳ ಮೇಳ ಹೆಚ್ಚು ದಟ್ಟ ಮತ್ತು ಹೆಚ್ಚು ಪ್ರಾತಿನಿಧಿಕವಾಗುವದರೊಂದಿಗೆ ಅದಷ್ಟು ಹೆಚ್ಚು ಬರಹಗಾರರನ್ನೊಳಗೊಂಡ ಸಾಮೂಹಿಕತೆಯೂ ಇದಕ್ಕೆ ಒದಗುತ್ತದೆ ಎಂದು ನನ್ನ ಆಶಯ. ಆದರೆ, ಈ ನಿಬಂಧನೆಯಿಂದೊದಗಬಹುದಾದ ಕೆಲವೊಂದು ಓರೆ ಕೊರೆಗಳ ಕಲ್ಪನೆ ಕೂಡ ನನಗಿದೆ.

ನಮ್ಮ ಕೆಲವು ಶ್ರೇಷ್ಠ ಲೇಖಕರು ತಮ್ಮ ಪ್ರತಿಭಾನ್ವಿತ ಬರವಣಿಗೆಯ ಚೌಕಟ್ಟನ್ನು ಸಾಹಿತ್ಯದ ಕೇವಲ ಒಂದು ಪ್ರಕಾರಕ್ಕೆ ಮಾತ್ರವೇ ಮೀಸಲಾಗಿಟ್ಟುಕೊಂಡಿಲ್ಲ. ಒಂದಕ್ಕಿಂತ ಹೆಚ್ಚು ಪ್ರಕಾರಗಳಲ್ಲಿ ಅಷ್ಟೇ ಉತ್ಕೃಷ್ಟತೆಗಳೊಂದಿಗೆ ಬರೆದ ಬರೆಹಗಾರರು ಕೆಲವರಾದರೂ ಇಲ್ಲಿ ಇದ್ದೇ ಇದ್ದಾರೆ. ಉದಾಹರಣೆಗೆ ಕುವೆಂಪು ಎಷ್ಟು ಮಟ್ಟಿಗೆ ಶ್ರೇಷ್ಠ ಕಾದಂಬರಿಕಾರರೊ ಅಷ್ಟೇ ಮಟ್ಟಿಗಿನ ಕವಿಯೂ ಹೌದು. ಉನ್ನತ ಮಟ್ಟದ ಕಥೆಗಾರ ಯಶವಂತ ಚಿತ್ತಾಲ ಶ್ರೇಷ್ಠ ಕಾದಂಬರಿಕಾರರು ಸಹ. ನಾಟಕಕಾರ ಮತ್ತು ಕವಿಯಾಗಿ ಕಂಬಾರ ಅಷ್ಟೇ ಅತ್ಯುತ್ತಮ. ಸೃಜನಶೀಲ ಸಾಹಿತ್ಯದ ಒಂದಿಲ್ಲೊಂದು ಪ್ರಕಾರಕ್ಕೆ ಸಂಬಂಧಿಸಿದಂತೆ ಮಾಸ್ತಿ, ಶ್ರೀರಂಗ, ಗೋಕಾಕರಿಂದ ಅನಂತಮೂರ್ತಿ, ದೇಸಾಯಿ, ತೇಜಸ್ವಿ ಅವರ ವರೆಗೆ, ಈ ಬಹುಮುಖ ಪ್ರತಿಭೆ ಅನೇಕರಲ್ಲಿ ಕಂಡುಬಂದೇ ಬರುತ್ತದೆ. ಎಂದರೆ, ನನ್ನ ನಿಬಂಧನೆಯಂತೆ ಇವರೆಲ್ಲರ ಒಂದೊಂದು ಕೃತಿ ಮಾತ್ರವನ್ನು ಆಯ್ದುಕೊಂಡರೆ, ಇತರ ಉಳಿದ ಮುಖಗಳು, ಗುಣಪುಷ್ಟವಾಗಿದ್ದೂ ಈ ಮಾಲೆಯ ಮಟ್ಟಿಗೆ ಮಸುಕಾಗುವ ಸಾಧ್ಯತೆ ಇದೆ. ಎಂತಲೇ, ಇದಕ್ಕೆ ಪರಿಹಾರಾರ್ಥವಾಗಿ, ನನ್ನ ಇದೇ ಮಾಲೆಯ ಕೊನೆಯಲ್ಲಿ, ನಾನು ಬರೆಯಬೇಕೆಂದುಕೊಂಡಿರುವ ಒಂದು ವಿವರವಾದ ಬರಹದಲ್ಲಿ ('ಹಾರಕ್ಕೊಂದು ತುರಾಯಿ') ಹೀಗೆ ಬಿಟ್ಟ ಮುಖಗಳ ಅನನ್ಯತೆಗಳನ್ನು ಕುರಿತು ಪ್ರಸ್ತಾಪಿಸಬೇಕೆಂದಿದ್ದೇನೆ. ಶ್ರೇಷ್ಠ ಸಾಹಿತ್ಯದ ಒಟ್ಟು ಮೌಲ್ಯ ವಿವೇಚನೆಯ ದೃಷ್ಟಿಯಿಂದ ಇದು ನಾನು ಮಾಡಲೇಬೇಕಾದ ಕೆಲಸವೂ ಹೌದು ಎಂದು ನನಗೆ ಗೊತ್ತಿದೆ.

ಇನ್ನೊಂದು ವರ್ಗದ ಬರಹಗಾರರಿಗಾಗಿಯೂ ಈ ಕೊನೆಯ ಲೇಖನ ('ತುರಾಯಿ') ಅಗತ್ಯವೆನಿಸುತ್ತದೆ. ಅನೇಕ ಕಾರಣಗಳಿಂದಾಗಿ ಈ ಮಾಲೆಯಲ್ಲಿ ತೋರೆ ಕಾಣಿಸಲಾಗದಿದ್ದರೂ ಕೆಲವಾದರೂ ಐತಿಹಾಸಿಕ ಕಾರಣಗಳಿಂದಾಗಿ ಮತ್ತು ವಿಶಿಷ್ಟ ಕೊಡುಗೆಗಳಿಂದಾಗಿ ಹಲವಾರು ಲೇಖಕರ ಬರಹಗಳನ್ನು ಕುರಿತು ಒಂದೆರಡು ಮಾತುಗಳಲ್ಲಾದರೂ ಪ್ರಸ್ತಾಪಿಸಬೇಕಾಗುತ್ತದೆ. ಉದಾಹರಣೆಗೆ: ನವೋದಯದ ಸಂದರ್ಭದಲ್ಲಿ, 'ತೆಂಕಣ ಗಾಳಿಯಾಟ' ಬರೆದ ಪಂಜೆ ಮಂಗೇಶರಾಯರು, ಒಂದೆರಡು ಒಳ್ಳೆಯ ಅಂಶಗಳ ಕಥೆಗಳನ್ನಿತ್ತ ಶ್ರೀಮತಿ ಬಿ. ಟಿ. ಜಿ. ಕೃಷ್ಣ (ಗೌರಮ್ಮ), 'ಧನಿಯರ ಸತ್ಯನಾರಾಯಣ' ಬರೆದ ಕೊರಡ್‌ಕಲ್, 'ಜಗವೆಲ್ಲ ನಗುತಿರಲಿ, ಜಗದಳವು ನನಗಿರಲಿ' ಬರೆದ ಈಶ್ವರ ಸಣಕಲ್, ನವ್ಯ ಸಂದರ್ಭದ ರಾಜಲಕ್ಷ್ಮಿ ಎನ್. ರಾವ್ ಇತ್ಯಾದಿ.

ಹಾಗೆಯೇ ಈ ಮಾಲೆಯಲ್ಲಿ ಮೂಡಿದ ಬರಹಗಳ ಆಚೀಚೆಯಲ್ಲೋ, ಕೊಂಚ ಹಿಂಬದಿಯಲ್ಲೋ ಇರುವ ಹಲವು ಲೇಖಕರ ಸಾಧನೆ ಕೆಲವನ್ನು ಕುರಿತು, ಕನಿಷ್ಠ ಪಕ್ಷ ನಮೂದಿಸುವುದೂ ನನ್ನ ಕರ್ತವ್ಯವಾಗುತ್ತದೆ.

ಹೇಗೆ ನೋಡಿದರೂ 'ತುರಾಯಿ' ಹಾರದ ಒಂದು ಅವಿಭಾಜ್ಯ ಅಂಗ ತಾನೆ!

೫

ಶತಮಾನದ ಸಾಹಿತ್ಯ ಸುಗ್ಗಿಯಲ್ಲಿ ಕುಯ್ದು ಫಸಲು ಶ್ರೇಷ್ಠವನ್ನು ನಿಮ್ಮೆದುರು ಒಕ್ಕಿ ಒಟ್ಟುತ್ತಲಿದ್ದೇನೆ. ಬದಿಯಲ್ಲೇ ನೆನೆಯುತ್ತಿದ್ದೇನೆ: ಬಿ. ಎಂ. ಶ್ರೀ ಅವರ ಮಾತು: 'ಬೆಳೆಯೇನೋ ಬೇಕಾದ ಹಾಗಿದೆ. ಕುಯ್ಯುವವರು ಕಡಿಮೆ.'

ನಿರ್ಣಯ ನಿಮಗೆ ಮತ್ತು ನಾಳೆಗೆ. ✡



# ಅನೇಕ ಬಾರಿ ಮರಣ ಹೊಂದಿದಾತ

ಬಿ. ವಿ. ಶಶಿಧರ ಕಾರಂತ

ಒಬ್ಬ ವ್ಯಕ್ತಿ ಒಂದು ಬಾರಿ ಮಾತ್ರ ಮರಣ ಹೊಂದುವುದು ನೂರಕ್ಕೆ ನೂರರಷ್ಟು ಸತ್ಯ. ಆದರೆ ಅಮೇರಿಕದ ನ್ಯಾಯಾಲಯವು ಒಂದು ವ್ಯಕ್ತಿಯ 'ಅನೇಕ ಮರಣ'ಗಳ ಬಗ್ಗೆ ವಿಚಾರಣೆಯನ್ನು ಮುಂದುವರೆಸಲು ನಿರ್ಧರಿಸಿದೆ. ಈ 'ಅನೇಕ ಮರಣ'ಗಳ ವಿಶೇಷ ವ್ಯಕ್ತಿಯೇ ನಾಜಿ ಯುದ್ಧದ ಕೈದಿ ಜೋಸೆಫ್ ಮೆಂಗೆಲೆ.

೧೯೪೬ರಲ್ಲಿ ನ್ಯೂರೆನ್‌ಬರ್ಗ್‌ವಿ ಚಾರಣೆಯಲ್ಲಿ ಅಮೇರಿಕದ ಪ್ರತಿನಿಧಿಗಳಲ್ಲೊಬ್ಬರಾದ ಟೆಲ್‌ಫೋರ್ಡ್ ಟೇಲರ್ ಎಂಬುವರು ಜೋಸೆಫ್ ಮೆಂಗೆಲೆ ನಿಧನ ಹೊಂದಿದ್ದಾನೆಂದು ಹೇಳಿಕೆ ನೀಡಿದರು. ಆದರೆ ಈಗ ತಾವು ಯಾವ ಆಧಾರದ ಮೇಲೆ ಆ ರೀತಿಯ ಹೇಳಿಕೆ ನೀಡಿದೆನೆಂಬುದು ಮರೆತಿರುವುದಾಗಿ ಟೇಲರ್ ತಿಳಿಸಿದ್ದಾರೆ.

ಎರಡನೆಯ ಬಾರಿ ನಾಜಿ ವಿರೋಧಿ ಗುಂಪಿಗೆ ಸೇರಿದ್ದ ಮತ್ತು ಬ್ರೆಜಿಲಿನ ಪೋಲೀಸಿನವನಾದ ಒಬ್ಬ ತಾನು ಮೆಂಗೆಲೆಯನ್ನು ೧೯೬೮ರಲ್ಲಿ ಪರಗ್ವೆ ಮತ್ತು ಅರ್ಜೆಂಟೈನಾ ನಡುವೆ ಇರುವ ಪರನಾ ನದಿ ದಡದಲ್ಲಿ ಕೊಂದಿದ್ದಾಗಿ ಹೇಳಿಕೊಂಡಿದ್ದಾನೆ.

೧೯೭೦ರಲ್ಲಿ ದಕ್ಷಿಣ ಅಮೇರಿಕದ ಪ್ರೆಸ್, ಮೆಂಗೆಲೆ ಅವರು ಪರಗ್ವೆಯಲ್ಲಿ ನಿಧನ ಹೊಂದಿದ್ದಾಗಿಯೂ ಮತ್ತು ಅವರನ್ನು ಫ್ಲೋರೆಸ್ ಎಂಬ ಹೆಸರಿನಲ್ಲಿ ಅನ್ಸಿಯನ್‌ನಲ್ಲಿ ಹೂಳಲಾಗಿದೆ ಎಂದು ವರದಿಮಾಡಿತು. ಆದರೆ ಪರಗ್ವೆ ಅಧಿಕಾರಿಗಳು ಊಹಿಸಿದಂತೆ ಮೆಂಗೆಲೆ ೧೯೭೯ರಲ್ಲಿ ದೇಶ ಬಿಟ್ಟು ಹೋಗಿ, ದಕ್ಷಿಣ ಅಮೇರಿಕದಲ್ಲಿ ಸತ್ತಿದ್ದಾನೆ. ಆದರೆ ಮೆಂಗೆಲೆ ಅವರ ಪುತ್ರ ಮತ್ತು ಬ್ರೆಜೇಲಿನ ಪೋಲೀಸ್ ಪ್ರಕಾರ ಮೆಂಗೆಲೆ ೧೯೭೯ರಲ್ಲೇ ನಿಧನ ಹೊಂದಿದ್ದಾರೆ.

ಆದರೆ ಈ ವರ್ಷದ ಪ್ರಾರಂಭದಲ್ಲಿ ಮತ್ತೊಮ್ಮೆ ಮೆಂಗೆಲೆ ಅವರ ಸಾವಿನ ಸುದ್ದಿ ಹರಡಿದ್ದು, ಅವರು ಈ ಬಾರಿ ಪೋರ್ಚುಗಲ್‌ನಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎಂಬ ಮಾತು ಎದ್ದಿದೆ.

ಆರನೆಯ ಬಾರಿ ಎರಡು ತಿಂಗಳಹಿಂದೆ 'ಪರಗ್ವೆ ಜರ್ಮನಿ ಸ್ನೇಹ–ಸಂಘ'ವು ಮೆಂಗೆಲೆ ಅವರು ೯ ವರ್ಷದ ಹಿಂದೆ ನಿಧನ ಹೊಂದಿದ್ದು ಅವರ ದೇಹವನ್ನು ೧೯೭೬ರಲ್ಲಿ ಬೊಲಿವಿಯಾದಲ್ಲಿ ಸಮಾಧಿ ಮಾಡಲಾಯಿತು ಎಂದು ತಿಳಿಸಿದೆ.

ಏಳನೆಯ ಬಾರಿ ಮೆಂಗೆಲೆ ಅವರ 'ಸತ್ಯ ಮೃತ್ಯು' ಬಗ್ಗೆ ಶೋಧನೆ ನಡೆಸಿರುವ ನ್ಯಾಯ ಪರಿಣಿತರು ಸಾವೋ ಪೋಲೋನಲ್ಲಿರುವ ಸಮಾಧಿಯನ್ನು ಪೂರ್ಣ ತೆಗೆಯಲಾಗದಿದ್ದುದರಿಂದ ಅವರ ಸಾವಿನ ಬಗ್ಗೆ ಸಂಪೂರ್ಣ ಮಾಹಿತಿ ದೊರೆಯುವುದು ಕಷ್ಟವೆಂದು ತಿಳಿಸಿದ್ದಾರೆ. ✡

೧೯೨೪ರ ಡಿಸೆಂಬರಿನಲ್ಲಿ ಬೆಳಗಾವಿಯಲ್ಲಿ ಮಹಾತ್ಮಾಜಿಯ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ನಡೆಯಿತಷ್ಟೆ. ಕಾಂಗ್ರೆಸ್ಸಿನ ಮುಖಂಡರೆಲ್ಲ ಸೇರಿದ್ದರು.

ಅಧಿವೇಶನದ ಎರಡನೆ ದಿನ ಆ ಮುಖಂಡರಿಗೆಲ್ಲ ಅಚ್ಚರಿಯ ಸಂಗತಿಯೊಂದು ಕಾದಿತ್ತು. ಇಂದೂರಿನ ಆಗಿನ ಮಹಾರಾಜ ಏಕಾ ಏಕಿ ತನ್ನ ಕಾರಿನಲ್ಲಿ ಅಲ್ಲಿಗೆ ಬಂದಿಳಿದ. 'ಇಲ್ಲೇನು ಕೆಲಸ ಈ ಮಹಾರಾಜರಿಗೆ?' ಎಂದುಕೊಂಡರು ಜನ. ಆತ ಆಜಾನುಬಾಹು. ಸಾದಾ ಉಡುಪಿನಲ್ಲಿದ್ದ.

ಆತ ನೇರವಾಗಿ ಚಿತ್ತರಂಜನ ದಾಸರಿದ್ದಲ್ಲಿಗೆ ಅವರ ನಿವಾಸದೆದುರು ಹೋಗಿ ನಿಂತುಕೊಂಡು ತಾನು ಬಂದಿರುವ ವಿಷಯವನ್ನು ಹೇಳಿ ಕಳಿಸಿದ. ಬ್ರಿಟಿಶ್ ನ್ಯಾಯಾಲಯದ ಕಟ್ಟೆ ಹತ್ತುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೇನೆಂಬುದು ನಾಲ್ಕು ವರ್ಷಗಳಿಂದಲೂ ದೇಶದ ಜನ ಬಲ್ಲರು. ನಿಮಗಿದು ಗೊತ್ತಿಲ್ಲವೆ?" ಎಂದು ಪ್ರಶ್ನಿಸಿದರು.

"ತಾವು ವೈಸ್‌ರಾಯರೆದುರು ಈ ಕುರಿತು ವಾದಿಸಬೇಕಾಗಿರುವುದರಿಂದ ಒಪ್ಪಿಕೊಳ್ಳಿ. ದಯವಿಟ್ಟು ನನ್ನ ಮಾನ ಉಳಿಸಿರಿ" ಎಂದು ಮಹಾರಾಜ ಮೊರೆಯಿಟ್ಟ.

"ಊಹುಂ. ನಾನು ನನ್ನ ಪ್ರತಿಜ್ಞಾಭಂಗ ಮಾಡಲಾರೆ. ದಯವಿಟ್ಟು ನೀವು ಹೋಗಬಹುದು" ಎಂದರು ದಾಸ್.

ಆಗಿನ ಕಾಲಕ್ಕೆ ತನ್ನ ಮಾನ ಉಳಿಸಿಕೊಳ್ಳಲು ೫೦ ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲು

# ದಾಸ್ ಬಿಟ್ಟುಕೊಟ್ಟ ಅರ್ಧಕೋಟಿಯ ಕೇಸು

ಉ. ರಾ. ಕಿಮಾನೇಕರ

ಇಂದೂರಿನ ಮಹಾರಾಜನೇಕೆ ತನ್ನನ್ನು ಕಾಣಲು ಬಂದಿದ್ದಾನೆಂಬುದು ಸಿ. ಆರ್. ದಾಸರಿಗೆ ಗೊತ್ತಾಗಿ ಹೋಯಿತು. ತಾವು ಆತನ ಪರವಾಗಿ ವಕಾಲತ್ತು ವಹಿಸಬೇಕೆಂಬ ಮಹಾರಾಜನ ಉದ್ದೇಶವನ್ನರಿತುಕೊಂಡುಬಿಟ್ಟರು ದಾಸ್. ಒಳಗೆ ಬರ ಹೇಳಿದರು.

ಮಹಾರಾಜ ಬಂದವನೇ, ಬಂದ ಉದ್ದೇಶವನ್ನು ಹೇಳಿ, "ಈ ಕೇಸನ್ನು ನೀವು ದಯವಿಟ್ಟು ನಡೆಸಿರಿ. ಮುಂಗಡವಾಗಿ ೨೫ ಲಕ್ಷ ರೂಪಾಯಿ ತಂದಿದ್ದೇನೆ ತೊಗೊಳ್ಳಿ. ಕೇಸು ಗೆದ್ದ ಮೇಲೆ ಮತ್ತೆ ೨೫ ಲಕ್ಷ ರೂಪಾಯಿಗಳನ್ನು ಕೊಡುವೆ," ಎಂದ.

ದಾಸ್, "ಸ್ವರಾಜ್ಯ ಸಿಗುವವರೆಗೂ ನಾನು ಇಂದೂರಿನ ಆ ಮಹಾರಾಜ ಸಿದ್ಧನಿದ್ದನೆಂದರೆ ಆ ಕೇಸು ಎಂಥದು? ಮಹಾರಾಜನ ಅಪರಾಧವೇನು?

ಮುಂಬಯಿಯಲ್ಲಿ ಬಾವಲಾ ಎಂಬೊಬ್ಬ ಸೇವಕನನ್ನು ಕೊಲೆ ಮಾಡಿಸಿದ ಆರೋಪ ಮಹಾರಾಜನ ಮೇಲಿತ್ತು. ಆ ಕೊಲೆಯ ಘಟನೆಯ ಹಿಂದಿನ ಕಥೆಯೂ ಆಗಿನ ಕಾಲಕ್ಕೆ ಜನಜನಿತವಾಗಿತ್ತು.

ಮನಸ್ಸಿಗೆ ಬಂದದ್ದನ್ನು ಎಷ್ಟೇ ಖರ್ಚು ಬಂದರೂ ಪೂರೈಸಿಕೊಳ್ಳುವ ಹುಚ್ಚು ಛಲದ ಆ ಮಹಾರಾಜನಿಗೆ ಒಂದು ಆಮಿಷ ವಿಷವರ್ತುಲವಾಗಿ ಪರಿಣಮಿಸಿತು.

ಕರಾಚಿಯಲ್ಲೊಮ್ಮೆ ಕುದುರೆ ರೇಸ್‌ನಲ್ಲಿ ಹಣ

ಕಟ್ಟಿ ಓಡುವ ಕುದುರೆಗಳ ಹೆಜ್ಜೆ ಎಣಿಸುತ್ತಿದ್ದ ಹಾಗೆಯೆ ಒಂದೆಡೆ ಆತನ ಕಣ್ಣು ನೆಲೆ ನಿಂತಿತು. ಅಲ್ಲೊಬ್ಬ ಸುಂದರ ತರುಣಿ ಕುಳಿತಿದ್ದಳು. ತಾನು ನೋಡಿದವರಿಗಿಂತಲೂ ಆಕೆ ಪರಮ ಸುಂದರಿ.

ಸರಿ, ಆಕೆ ಯಾರು ಏನು ಎಂಬುದನ್ನರಿಯಲು ಬಂಟರನ್ನು ಬಿಟ್ಟ. "ಆಕೆ ಮುಮತಾಜ ಬೇಗಂ ಎಂಬ ಹೆಸರಿನ ವೇಶ್ಯೆ. ಮುಂಬಯಿಯಲ್ಲಿರುತ್ತಾಳೆ. ಮುಂಬಯಿಯ ಮೇಯರ್ ಆಕೆಯನ್ನು ಕಾಯಂ ಆಗಿ ಇಟ್ಟುಕೊಂಡಿದ್ದಾನೆ," ಎಂಬ ಸಂಗತಿಗಳನ್ನು ಹೊತ್ತು ತಂದರು ಮಹಾರಾಜನ ಬಂಟರು. ವೇಶ್ಯೆ ಎಂದ ಕೂಡಲೇ ಬಾಯಿ ಅಗಲಿಸಿದ ಮಹಾರಾಜ ಆಕೆಯ ಲಕ್ಷ್ಯ ಸೆಳೆಯಲು ಬಹುವಾಗಿ ಯತ್ನಿಸಿದ. ತನ್ನೊಂದಿಗೆ ತನ್ನ ಅರಮನೆಯಲ್ಲಿ ಬಂದುಳಿದರೆ ಲಕ್ಷಾಂತರ ಬೆಲೆಯ ನಗನಾಣ್ಯ ಆಕೆಯ ಸೊತ್ತಾಗುವುದೆಂದು ಹೇಳಿ ಕಳಿಸಿದ.

ಮುಮತಾಜ ಬೇಗಂ ನಿಷ್ಠಾವಂತೆ. ತನ್ನನ್ನಿಟ್ಟುಕೊಂಡವರಿಗೆ ದ್ರೋಹ ಬಗೆಯಲು ಎಂದೂ ಯೋಚಿಸಿದವಳಲ್ಲ. ಇಂದೂರಿನ ಮಹಾರಾಜ ತೋರಿಸಿದ ಆಮಿಷಕ್ಕೆ ಆಕೆ ಮಿಸುಗಲಿಲ್ಲ, ನಿರಾಕರಿಸಿಬಿಟ್ಟಳು. ಮಹಾರಾಜನಿಗಿದು ಭಾರಿ ಅವಮಾನವೆನಿಸಿತು. ಹೇಗಾದರಾಗಲಿ ಅವಳ ಅಂಗ ಸಂಗ ಪಡೆಯಬೇಕೆಂದಾತ ನಿರ್ಧರಿಸಿಬಿಟ್ಟ. ಅದಕ್ಕೇನು ದಾರಿ? ಮುಮತಾಜಳನ್ನು ಹಾರಿಸಿಕೊಂಡು ತರುವುದು.

ಕೂಡಲೇ ಅದನ್ನು ಕಾರ್ಯರೂಪಕ್ಕೆ ತರಲು ಆತ ಉದ್ಯುಕ್ತನಾದ. ನಾಲ್ವರು ಗುಂಡಾಗಳನ್ನು ತನ್ನ ಒಂದು ಮೋಟಾರ್ ಕಾರಿನಲ್ಲಿ ಮುಂಬಯಿಗೆ ಕಳಿಸಿದ. ಅವಳ ಚಲನವಲನವನ್ನು ಗಮನಿಸಿ, ಅವಳು ಒಬ್ಬಂಟಿಯಾಗಿರು-ವಾಗ ಎತ್ತಿಕೊಂಡು ಕಾರಿನಲ್ಲಿ ಹಾಕಿಕೊಂಡು ನೇರವಾಗಿ ಇಂದೂರಿಗೆ ಬಂದುಬಿಡಬೇಕೆಂದು ನಿರ್ದೇಶಿಸಿದ್ದ.

ಮುಂಬಯಿಗೆ ಬಂದ ಗುಂಡಾಗಳು ಆಕೆಯ ಹೆಜ್ಜೆ ಎಣಿಸಿದರು. ಪ್ರತಿ ರವಿವಾರ ಮಲಬಾರ್ ಹಿಲ್ ಗಾರ್ಡನ್ನಿಗೆ ಹೋಗುವಳೆಂದರಿತರು. ಆ ವೇಳೆಗೆ ಅವರ ಕಾರು ಗಾರ್ಡನ್ನಿನಲ್ಲಿ ಹಾಜರಾಯಿತು.

ಮುಮತಾಜ ಬೇಗಂ ತನ್ನ ಅಂಗರಕ್ಷಕ ಬಾವಲಾ ಎಂಬ ಕಟ್ಟುಮಸ್ತಿನ ಆಸಾಮಿಯೊಂದಿಗೆ ಗಾರ್ಡನ್ನಿಗೆ ಬಂದಳು. ಆಕೆ ತನ್ನ ಕಾರಿನಿಂದಿಳಿಯುತ್ತಲೇ ಈ ನಾಲ್ವರು ಆಕೆಯ ಮೇಲೆ ಎರಗಿ ತಮ್ಮ ಕಾರಿನೆಡೆ ಎಳೆದೊಯ್ಯುತ್ತಿರುವಾಗ ಬಾವಲಾ ಅಡ್ಡ ಬಂದ. ಗುಂಡಾಗಳಲ್ಲೊಬ್ಬ ಹಾರಿಸಿದ ಗುಂಡು ಬಾವಲಾನನ್ನು ಗತಪ್ರಾಣನನ್ನಾಗಿಸಿತು.

ಇದನ್ನೆಲ್ಲ ಗಮನಿಸುತ್ತಿದ್ದ ಒಬ್ಬ ಸೈನ್ಯಾಧಿಕಾರಿ ಗಾಳಿಯಲ್ಲಿ ಗುಂಡು ಹಾರಿಸಿದಾಗ ಹೆದರಿ ಕಂಗಾಲಾದ ಗುಂಡಾಗಳು—ಆ ವೇಳೆಗೆ ಸಾಕಷ್ಟು ಜನ ಈ ಗಲಾಟೆ ಕೇಳಿ ಗುಂಪುಗೂಡಿದ್ದರಿಂದ—ಮುಮತಾಜಳನ್ನು ಬಿಟ್ಟುಕೊಟ್ಟು ಓಡಬೇಕೆಂಬಷ್ಟರಲ್ಲಿ ಪೋಲೀಸರು ಹಾಜರಾದರು. ಕಾರು ಸಹಿತ ಗುಂಡಾಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು.

ಮರುದಿನದ ಪತ್ರಿಕೆಗಳಲ್ಲಿ ಬಂದ ಈ 'ಅಪಹರಣ ಯತ್ನ' ಮತ್ತು 'ಕೊಲೆ'ಯ ಸುದ್ದಿ ದೇಶಕ್ಕೆಲ್ಲ ಹಬ್ಬಿತು.

ಇಂದೂರಿನ ಮಹಾರಾಜ ಎದೆಗುಂದಿದ. ಆತನ ರಾಜಪದವಿಗೆ ಕುತ್ತು ಒದಗಿತ್ತು. ಅದನ್ನುಳಿಸಿಕೊಳ್ಳಬೇಕೆಂದರೆ ವೈಸ್‌ರಾಯರೆದುರು ವಾದ ಮಾಡಿ ತಾನು ನಿರಪರಾಧಿ ಎಂಬುದನ್ನು ಸಾಬೀತುಪಡಿಸಿಕೊಳ್ಳಬೇಕು. ತನ್ನ ಪರವಾಗಿ ವಾದಿಸಬಲ್ಲ ಯೋಗ್ಯತೆಯವರೆಂದರೆ ಚಿತ್ತರಂಜನ ದಾಸ್ ಮಾತ್ರ ಎಂದರಿತೇ ಅವರ ಮನವೊಲಿಸಲು ಬಂದಿದ್ದ.

ಚಿತ್ತರಂಜನ ದಾಸ್ ೧೯೧೦ರ ದಶಕದ ಸೋವಿ ಕಾಲದಲ್ಲಿಯೂ ತಿಂಗಳಿಗೆ ೪೦ ರಿಂದ ೫೦ ಸಾವಿರ ರೂಪಾಯಿ ಸಂಪಾದನೆಯ ಬ್ಯಾರಿಸ್ಟರರಾಗಿದ್ದರು. ಕೋಟ್ಯಾಧಿಶರು ಮತ್ತು

ಸಂಸ್ಥಾನಿಕರ ಕೇಸುಗಳನ್ನು ಮಾತ್ರ ನಡೆಸುತ್ತಿದ್ದ ದಾಸ್, ತಮ್ಮ ವರಮಾನದಿಂದ ಕಲಕತ್ತಾದಲ್ಲಿ ೭೦೦-೮೦೦ ವಿದ್ಯಾರ್ಥಿಗಳ ಊಟ-ವಸ್ತ್ರದ ಖರ್ಚು ಪೂರೈಸುತ್ತಿದ್ದರು. ಯೋಗ್ಯ ಕೆಲಸಗಳಿಗೆ ದಾನ ನೀಡುತ್ತಿದ್ದುದರಿಂದಲೂ ಅವರು ಪ್ರಸಿದ್ಧರಾಗಿದ್ದರು. ಆದರೆ ೧೯೨೦ ರಲ್ಲಿ ಕಾಂಗ್ರೆಸ್ ಸೇರಿದ್ದರಿಂದ ಬ್ರಿಟಿಶ್ ಕೋರ್ಟುಗಳನ್ನು ಬಹಿಷ್ಕರಿಸುವ ಶಪಥವನ್ನು ಸಾರ್ವಜನಿಕ ಸಭೆಯೊಂದರಲ್ಲಿ ಕೈಗೊಂಡಿದ್ದರು.

ದಾಸರಿಂದ ನಿರಾಕರಿಸಲ್ಪಟ್ಟ ಮಹಾರಾಜ, ಮಹಾತ್ಮಾಜಿಯಿಂದ ಹೇಳಿಸಿದರೆ ದಾಸ್ ಕೇಳಿಯಾರೆಂಬ ಆಸೆಯಿಂದ ಗಾಂಧೀಜಿಯ ಬಳಿ ಹೋದ. ತನ್ನ ಪರಿಚಯ, ತಾನು ಬಂದ ಉದ್ದೇಶವನ್ನೆಲ್ಲ ಹೇಳಿಕೊಂಡ. ಹೇಗಾದರೂ ಮಾಡಿ ಚಿತ್ತರಂಜನ ದಾಸರು ಒಪ್ಪುವಂತೆ ಮಾಡಿ ತನ್ನ ಮಾನ ಉಳಿಸಬೇಕೆಂದು ವಿನಂತಿಸಿಕೊಂಡ.

"ಚಿತ್ತರಂಜನ ದಾಸರು ಏನೆಂದರು?" ಗಾಂಧೀಜಿ ಕೇಳಿದಾಗ ಮಹಾರಾಜ ಹೇಳಿದ.

"ಅವರು ಸ್ವಯಂಸ್ಫೂರ್ತಿಯಿಂದ ಕೈಗೊಂಡ ಪ್ರತಿಜ್ಞೆಯನ್ನು ನಾನು ಮುರಿಯುವಂತೆ ಅವರಿಗೆ ಹೇಳಿ ಪಾಪಕ್ಕೆ ಗುರಿಯಾಗಲೆ?" ಎಂದು.

"ಆದರೆ ಮಹಾತ್ಮರೆ, ಕಾಂಗ್ರೆಸ್ಸಿಗೆ ಹಣದ ಅಡಚಣೆ ಇರುವ ಈ ಸಂದರ್ಭದಲ್ಲಿ ನಾನು ಕೊಡುವ ಹಣವನ್ನು ಪಕ್ಷಕ್ಕೆ ಬಳಸಿಕೊಳ್ಳಬಹುದಲ್ಲ."

"ಕಾಂಗ್ರೆಸ್ಸಿಗೆ ಪಾಪದ ಹಣದ ಒಂದೂ ಪೈಸೆ ಬೇಡ, ತಿಳಿಯಿತೆ? ನೀವಿಲ್ಲಿಂದ ಇನ್ನು ಹೋಗಬಹುದು," ಎಂದುಬಿಟ್ಟರು ಮಹಾತ್ಮಾಜಿ ಕೋಪದಿಂದ.

ಆ ಸಮಯದಲ್ಲಿ ಆರೋಪಿತ ಸಂಸ್ಥಾನಿಕರನ್ನು ಸಾಮಾನ್ಯ ಆರೋಪಿಯಂತೆ ಕೋರ್ಟುಗಳಲ್ಲಿ ಹಾಜರುಪಡಿಸಲಾಗುತ್ತಿರಲಿಲ್ಲ. ಯಾಕಂದರೆ ಈ ಸಂಸ್ಥಾನಿಕರೆಲ್ಲ ಬ್ರಿಟಿಶ್ ಸರಕಾರದ ಮಾಂಡಲಿಕ ಸರದಾರರಾಗಿದ್ದರಲ್ಲದೆ ಅವರಿಗೆ K. C. I. E. - G. C. S. I. ವಗೈರೆ ಉದ್ದುದ್ದ ಬಿರುದುಗಳಿರುತ್ತಿದ್ದವು. ಇಂಥವರ ಮೇಲಿನ ಕೇಸುಗಳನ್ನು ಬ್ರಿಟಿಶ್ ಚಕ್ರವರ್ತಿಯ ಪ್ರತಿನಿಧಿಯಾದ ವೈಸ್‌ರಾಯನೇ ವಿಚಾರಿಸಿ ನಿರ್ಣಯ ನೀಡಬೇಕಾಗಿತ್ತು. ಆರೋಪ ಸಿದ್ಧವಾದಲ್ಲಿ ವೈಸ್‌ರಾಯ್, ಮಹಾರಾಜನನ್ನು ಪದಚ್ಯುತಗೊಳಿಸಿ ಆತನ ವಾರಸುದಾರನನ್ನು ಸಿಂಹಾಸನದ ಮೇಲೆ ಕೂಡಿಸುತ್ತಿದ್ದ. ಇದೇ ಆತನಿಗೆ ಒದಗುವ ಶಿಕ್ಷೆ. ದಂಡವಾಗಲಿ ಸೆರೆಮನೆವಾಸವಾಗಲಿ ಆತನ ಅಪರಾಧಕ್ಕೆ ಶಿಕ್ಷೆಗಳಾಗುತ್ತಿರಲಿಲ್ಲ. ಆದರೆ ತನ್ನ ಸಂಸ್ಥಾನದಲ್ಲಿ ಮನ ಬಂದಂತೆ ಮೆರೆದಾಡಿ, ಅಮಾನವೀಯ ಕಾರ್ಯಗಳಲ್ಲಿ ತೊಡಗಿದ್ದರೂ ಪ್ರಜೆಗಳಿಂದ ಬಹುಪರಾಕು ಹೇಳಿಸಿಕೊಳ್ಳುತ್ತಿದ್ದ 'ಮಹಾರಾಜ'ನಿಗೆ ಪ್ರಜೆಗಳೆದುರೇ ಹೀಗೆ ಅವಮಾನವಾದರೆ? ಅವನ ಪಾಡು ಯಾರಿಗೂ ಬೇಡ, ಅಲ್ಲವೆ?

ಚಿತ್ತರಂಜನ ದಾಸ್ ಹಾಗೂ ಮಹಾತ್ಮಾಜಿಯಿಂದ 'ಇಲ್ಲ' ಅನಿಸಿಕೊಂಡು ಮರಳಿದ ಮಹಾರಾಜನು ನಂತರ ಮುಂಬಯಿಯ ಪ್ರಸಿದ್ಧ ಬ್ಯಾರಿಸ್ಟರ್ ಆಗಿದ್ದ ಸರ್ ಚಿಮಣಲಾಲ ಸೆಟಲವಾಡರನ್ನು ನೇಮಿಸಿಕೊಂಡು ತನ್ನ ಕೇಸನ್ನು ನಡೆಸಿದನಾದರೂ ಪ್ರಯೋಜನವಾಗಲಿಲ್ಲ. ವೈಸ್‌ರಾಯರೆದುರು ಆತನ ಮೇಲಿನ ಆರೋಪ ಸಿದ್ಧವಾಯಿತು. ಪದಚ್ಯುತಿ ಹೊಂದಿದ ಮೇಲೆ ಸಾಮಾನ್ಯ ಪ್ರಜೆಯಂತೆ ಇಂದೂರಲ್ಲಾಗಲಿ, ಭಾರತದ ಬೇರೆ ಎಲ್ಲಿಯೇ ಆಗಲಿ ಇರಲು ಮರ್ಯಾದೆ ಸಾಲದೆಯೇ ದೇಶ ಬಿಟ್ಟು ಪ್ಯಾರಿಸ್ಸಿಗೆ ಹೋಗಿ ನೆಲೆಸಿದ. ಅಲ್ಲಿಯೇ ಕೊನೆ ಉಸಿರೆಳೆದ.

✡



ಹಿಮಾಲಯದಲ್ಲಿ ಹೆಪ್ಪುಗಟ್ಟಿಸುವ ಅನುಭವ

# ಇದು ಪುನರ್ಜನ್ಮವೆ?

ಯುವಜನರಲ್ಲಿ ಸಾಹಸ ಪ್ರವೃತ್ತಿಯನ್ನು ಉತ್ತೇಜಿಸಲೋಸುಗ ಭಾರತದ ಯುಥ್ ಹಾಸ್ಟೆಲ್ಸ್ ಅಸೋಶಿಯೇಶನ್ ಕಳೆದ ಸಪ್ಟಂಬರ್-ಅಕ್ಟೋಬರಿನಲ್ಲಿ ಹಿಮಾಲಯ ಪರ್ವತಾರೋಹಣವನ್ನು ಏರ್ಪಡಿಸಿತ್ತು. ಅದರಲ್ಲಿ ಪಾಲ್ಗೊಂಡು ಆಕಸ್ಮಾತ್ತಾಗಿ ಪಡೆದ ಅಸಾಮಾನ್ಯ ಅನುಭವದ ಚಿತ್ರಣವಿದು.

**ಸೀತಾರಾಮ ಪಾಟೀಲ**

ಭಾರತೀಯ ಸಂಸ್ಕೃತಿಯ ನಿರಂತರತೆಯ ಮರ್ಮದ ಅರಿವಾಗಬೇಕಿದ್ದರೆ ನೀವು ಒಮ್ಮೆಯಾದರೂ ಹಿಮಾಲಯಕ್ಕೆ ಹೋಗಿಬರಬೇಕು. ಭಾರತದ ಬಯಲು ಸೀಮೆಯ ಅಥವಾ ಇನ್ನಾವುದೇ ಗಿರಿಕಂದರಗಳ ಯಾವುದೇ ಸ್ಥಳಕ್ಕೆ ಹೋದರೂ ಹಿಮಾಲಯದಲ್ಲಿ ದೊರೆಯುವಂತಹ ಅನುಭವ ನಿಮಗೆ ಸಿಕ್ಕದು. ಬದರಿ, ಕೇದಾರಗಳಂಥ ಕ್ಷೇತ್ರಗಳಲ್ಲದೆ ಮಾನಸ ಸರೋವರದಂತಹ ಅಪರೂಪ ನಿಸರ್ಗ ರಮಣೀಯ ಸ್ಥಳಗಳು ಹಿಮಾಲಯದ ಮಡಿಲಲ್ಲಿವೆ. ಭಾರತದ ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಹಿಮಾಲಯ ಹಾಸುಹೊಕ್ಕಾಗಿ ಬೆರೆತುಕೊಂಡು ಬಂದಿವೆ. ಪುರಾಣ ಕಾಲದಲ್ಲಿ ದೇವ-ದೇವತೆಗಳ ಗಂಧರ್ವ-ಕಿನ್ನರ ನಾಡೆಂದು ಹೆಸರಾಗಿದ್ದ ಹಿಮಾಲಯ ಇಂದಿಗೂ ನಿಸರ್ಗದ ಚೊಚ್ಚಿಲುಗೂಸಿನಂತೆಯೇ ಕಂಗೊಳಿಸುತ್ತಿದೆ. ಕಾಲಿದಾಸನನ್ನೊಳಗೊಂಡು ಕವಿಗಳನೇಕರು ಈ ಪರ್ವತ ಶ್ರೇಣಿಯ ಸೊಬಗಿನಲ್ಲಿ ಮೈಮರೆತಿದ್ದಾರೆ.

ನನ್ನ ಅನುಭವವನ್ನು ಕಾಲಿದಾಸನ ಎತ್ತರಕ್ಕೇರಿ ಅದಕ್ಕೆ ಶಬ್ದಕವಚ ತೊಡಿಸಬಲ್ಲ ಸಾಮರ್ಥ್ಯ ನನ್ನಲ್ಲಿರಲಿಕ್ಕಿಲ್ಲ. ಆದರೂ ಮುದ್ದಣನಂತೆ 'ಹೃದ್ಯಮಪ್ಪ ಗದ್ಯ'ದಲ್ಲಿ ಆ ಅನುಭವದ ಗಾಢತೆಯನ್ನು ವಿವರಿಸುತ್ತಿದ್ದೇನಷ್ಟೆ.

ಕುಮಾಂವ್ ಹಿಮಾಲಯದ ಶ್ರೇಣಿಗಳಲ್ಲೊಂದು. ಅಲ್ಲಿ ಪಿಂಡರಿ ಎಂಬುದೊಂದು ಹಿಮನದಿ. ಈ ಪ್ರದೇಶದಲ್ಲಿ ಪರ್ವತಾರೋಹಣ ಶಿಬಿರವನ್ನು ಭಾರತದ ಯುಥ್ ಹಾಸ್ಟೆಲ್ಸ್ ಅಸೋಸಿಯೇಶನ್ ಕಳೆದ (೧೯೮೫) ವರ್ಷ ಸಪ್ಟಂಬರ್-ಅಕ್ಟೋಬರಿನಲ್ಲಿ ನಡೆಸಿತು. ಸಪ್ಟಂಬರ್ ೨೫ ರಿಂದ ಅಕ್ಟೋಬರ್ ೧೫ರ ವರೆಗಿನ ಅವಧಿಯಲ್ಲಿ ಸುಮಾರು ೨೫ ಜನರ ಒಂದೊಂದು ಗುಂಪು ೧೧,೭೦೦ ಅಡಿ ಎತ್ತರದಲ್ಲಿರುವ ಫೂರ್ಕಿಯಾದತ್ತ ಮೂಲ ಶಿಬಿರವಾದ ಕಾಪಕೋಟೆ (೩,೫೦೦ ಅಡಿ)ಯಿಂದ ನಿತ್ಯ ಹೊರಡುತ್ತಿತ್ತು. ನಮ್ಮ ಈ ಪರ್ವತಾರೋಹಣದಲ್ಲಿ ಕಾಪಕೋಟೆಯಿಂದ ಫೂರ್ಕಿಯಾವರೆಗೆ ಐದು ಶಿಬಿರಗಳಿದ್ದವು. ಈ ಶಿಬಿರಗಳನ್ನು ಬ್ಯಾಂಕ್ ಆಫ್ ಬರೋಡಾದ ಅಧಿಕಾರವರ್ಗದ-

ವರೇ ಹೆಚ್ಚಾಗಿ ಇದ್ದರು. ಈ ಬ್ಯಾಂಕು ಯುವಕರ ಪರ್ವತಾರೋಹಣಕ್ಕೆ ಅನೇಕ ವರ್ಷಗಳಿಂದ ಉತ್ತೇಜನ ನೀಡುತ್ತ ಬಂದಿದೆ. ಆದರೆ ಆ ತಂಡದಲ್ಲಿ ಕರ್ನಾಟಕದವರು ಮೂವರು ಮಾತ್ರ-ಡಾ. ಅನಿತಾ, ಸುಮತಿ ಮತ್ತು ನಾನು. ಶ್ರೀ ನರೇಶ ಪಾಲನ್ ಕ್ಯಾಂಪ್ ಲೀಡರ್ ಆಗಿದ್ದು ಅವರ ಸಹಾಯ ಸಹಕಾರವನ್ನು ನೆನೆಯಲೇ ಬೇಕು.

ದಿಲ್ಲಿಯಿಂದ ಬಸ್ಸಿನಲ್ಲಿ ನಾವೆಲ್ಲ ಬಾಗೇಶ್ವರಕ್ಕೆ ಬಂದಿಳಿದೆವು. ಇಲ್ಲಿಂದ ೨೨ ಕಿ. ಮೀ. ಅಂತರ ದಲ್ಲಿರುವ ಕಾಪಕೋಟೆ ಸರಿಯೂ ನದಿಯ ದಂಡೆಯ ಮೇಲಿದೆ. ಇಲ್ಲಿಯ ವರೆಗೂ ಉತ್ತರ ಪ್ರದೇಶ ಸರಕಾರದ ಬಸ್ ಸೌಕರ್ಯ ಲಭ್ಯವಿದೆ. ಇಲ್ಲಿ ಸರಯೂ ದಡದ ಮೇಲೆಯೇ ಪರ್ವತಾರೋಹಿಗಳಿಗಾಗಿ ತಾತ್ಕಾಲಿಕ ಡೇರೆ ಗಳನ್ನು ಹೊಡೆದಿರುತ್ತಾರೆ. ಇದೇ ಮೂಲ ಶಿಬಿರ. ಒಂದು ತಂಡದ ಆರೋಹಿಗಳಿಗೆ ಮೂಲ ಶಿಬಿರ ದಿಂದ ಹೊರಟು ಪಿಂಡರಿ ಹಿಮನದಿಯನ್ನು ತಲಪುವ ಮುನ್ನ ೧೦,೨೦೦ ಅಡಿಗಳೆತ್ತರದಲ್ಲಿಯ ಫೂರ್ಕಿಯಾದ ವರೆಗಿನ ಆರೋಹಣ ಮತ್ತು ಅಲ್ಲಿಂದ ಮರಳಿ ಮೂಲ ಶಿಬಿರವನ್ನು ತಲಪುವ ವರೆಗಿನ ಅವರೋಹಣ ಕಾಲದಲ್ಲಿ ಅಗತ್ಯವಾದ ಆಹಾರ ಸಾಮಗ್ರಿಗಳನ್ನು, ಔಷಧಗಳನ್ನು ಈ ಮೂಲ ಶಿಬಿರದಲ್ಲೇ ಶೇಖರಿಸಿಡಲಾಗಿರುತ್ತದೆ. ಪರ್ವತಾರೋಹಿಗಳಿಗೆ ಇಲ್ಲಿಂದ ಮೇಲಕ್ಕೇರಿ ಪಿಂಡರಿ ಹಿಮನದಿಯ ಉಗಮಕ್ಕೆ ಇಲ್ಲವೆ ಸಾಧುವಿನ ಗವಿಯೆಂದು ಹೆಸರಾಂತ ಮಾರ್ತೋಲಿಗೆ ಹೋಗಲು ಅನುಮತಿ ಇರುವುದಿಲ್ಲ. ಅಲ್ಲಿ ಹೋಗಬೇಕಿದ್ದರೆ ಸಂಗಡ ಹಿಮಾಲಯವನ್ನು ನಿಕಟವಾಗಿ ಬಲ್ಲ ಮಾರ್ಗದರ್ಶಿಗಳು ಇರಲೇ ಬೇಕೆಂಬ ನಿಯಮವಿದೆ. ಅದಕ್ಕೆ ಕಾರಣವೆಂದರೆ, ಅದೆಷ್ಟೋ ಸಲ ಹಿಮನದಿಯನ್ನು ಗಟ್ಟಿ ನೆಲದ ಮೇಲೆ ಶೇಖರವಾಗಿರುವ ಹಿಮದಿಂದ ಬೇರ್ಪಡಿಸಲು ಸಾಮಾನ್ಯರಿಗೆ ಆಗುವುದಿಲ್ಲ. ಗಟ್ಟಿ ಬರ್ಫವೆಂದು ಕಾಲಿಟ್ಟಾಗ ಅದು ಟಳ್ಳನೆ ಒಡೆದು ಹಿಮನದಿಯಲ್ಲೇ ಬಿದ್ದು ಬಿಡುವ ಅಪಾಯ ಸಾಕಷ್ಟಿರುತ್ತದೆ.

ಸರಯೂ ನದಿಯ ಗುಂಟವೇ ಸಾಗುವ ಕಾಲುದಾರಿಯನ್ನು ಸುಮಾರು ೧೬ ಕಿಲೋಮೀಟರುಗಳಷ್ಟು ದೂರದಲ್ಲಿ ೫,೭೫೦ ಅಡಿಗಳೆತ್ತರದಲ್ಲಿ ಲೋಹಾರಖೇಟ ಬರುತ್ತದೆ. ಇಲ್ಲಿಂದ ಮುಂದೆ ಹೋಗಬೇಕಾದ ಪರ್ವತಾರೋಹಿಗಳು ಮಾತ್ರ ಅವರಿಗೆ ತಜ್ಞರು ನೀಡುವ ಸೂಚನೆ ಗಳನ್ನು ಅಕ್ಷರಶಃ ಪಾಲಿಸಬೇಕಾಗುತ್ತದೆ. ಇಲ್ಲಿಂದ ಮುಂದೆ ಹೋಗಬೇಕಿರುವುದು ೮,೫೦೦ ಅಡಿ ಎತ್ತರವಿರುವ ಧಾಕೋರಿಗೆ. ಇಲ್ಲಿಗೆ ಬರ ಬೇಕಾದರೆ ೯,೮೦೦ ಅಡಿಗಳಷ್ಟು ಮೇಲಕ್ಕೆ ಹೋಗಿ ಕೆಳಕ್ಕಿಳಿಯಬೇಕಾಗುತ್ತದೆ. ಈ ಪ್ರದೇಶ ಘನಘೋರ ಅರಣ್ಯದಿಂದಾವೃತವಾಗಿದ್ದು ಇಲ್ಲಿ ದಾರಿ ತಪ್ಪಿಸಿಕೊಂಡರೆ ಪರಮಾತ್ಮನೇ ಕಾಪಾಡ ಬೇಕು. ಧಾಕೋರಿ ಕೊಳ್ಳವನ್ನು (೯,೫೦೦ ಅಡಿ) ಹಾಯುವಾಗ ಯಾತ್ರಿಕರಿಗೆ ಮೊಟ್ಟ ಮೊದಲ ಬಾರಿ ಹಿಮಾವೃತ ಶಿಖರಗಳ ದರ್ಶನವಾಗು ತ್ತದೆ. ಉತ್ತರಕ್ಕೆ ಹಿಮಗಿರಿಗಳು ಕಂಡರೆ ಕೆಳಕ್ಕೆ ಘನ ಗಂಭೀರವಾಗಿ ಗರ್ಜಿಸುತ್ತ ಹರಿಯುವುದು ಸರಯೂ ನದಿ. ಆ ನೋಟವನ್ನು ಮೊದಲ ಬಾರಿ ಕಂಡವನ ಪ್ರಥಮ ಪ್ರತಿಕ್ರಿಯೆಯೆಂದರೆ ಆ ಭವ್ಯತೆಯಿಂದಲೇ ಎದೆ ಹೆಪ್ಪುಗಟ್ಟಿದಂತಾ ಗುವುದು. ಆದರೆ ಮರುನಿಮಿಷದಲ್ಲೇ ಆ ಶೀತಲ ಸೌಂದರ್ಯದಿಂದ ರೋಮಾಂಚಿತನಾಗುತ್ತಾನೆ.

ಧಾಕೋರಿ ಇರುವುದು ಇನ್ನು ಸ್ವಲ್ಪ ಕೆಳಗೆ. ೮,೫೦೦ ಅಡಿಗಳಷ್ಟು ಎತ್ತರದಲ್ಲಿ. ಲೋಹಾರ ಖೇಟದಿಂದ ಇಲ್ಲಿಗೆ ಬಂದು ತಲಪುವ ದಾರಿ ಯೆಂದರೆ ನಿಬಿಡಾರಣ್ಯವೇ. ಈ ದುರ್ಗಮ ಅರಣ್ಯದಲ್ಲಿಯೇ ದಾರಿಯನ್ನರಸಿಕೊಂಡು ಕಣಿವೆಯ ಮೂಲಕ ಇಳಿದು ಬಂದು ಧಾಕೋರಿ ಯನ್ನು ತಲಪಬೇಕು. ಈ ಕಣಿವೆಯಲ್ಲೇ ಒಂದು ಗುಡಿಯಿದ್ದು ಅದರ ಮೇಲೆ ತ್ರಿಶೂಲದ ಚಿಹ್ನೆ ಯಿದೆ. ಅಲ್ಲಿಂದ ೧೦ ಕಿಲೋಮೀಟರ್ ದೂರದಲ್ಲಿ ೭,೩೦೦ ಅಡಿಯೆತ್ತರದಲ್ಲಿ ಖಾತಿಯೆಂಬ ಹಳ್ಳಿ ಯಿದೆ. ಇದೇ ಪಿಂಡರಿ ಹಿಮನದಿಗೆ ಹೋಗುವ ಮಾರ್ಗದಲ್ಲಿ ಕೊನೆಯ ಜನವಸತಿಯುಳ್ಳ ಗ್ರಾಮ. ಇಲ್ಲಿಂದ ೧೧ ಕಿಲೋಮೀಟರ್ ಆಚೆ ಇರುವುದು ದ್ವಾಲಿ. ಇಲ್ಲಿ ಪಿಂಡರಿ ಮತ್ತು ಕಫನಿ ಹಿಮನದಿಗಳ ಸಂಗಮವಿದೆ. ಕಫನಿ ಹಿಮ ನದಿಯ ಮೂಲಕ್ಕೆ ಹೋಗುವ ಮಾರ್ಗ ಇಲ್ಲಿಂ

ದಲೇ ಆರಂಭವಾಗುತ್ತದೆ. ನಮ್ಮ ಗುರಿ ಪಿಂಡರಿ ಹಿಮನದಿಯ ಉಗಮ ಸ್ಥಾನವೆಡೆ ಸಾಗುವುದಿತ್ತು. ಕಫನಿ ನದಿಯ ಉಗಮ ಇಲ್ಲಿಂದ ಮೇಲಕ್ಕೆ ೧೩ ಕಿ. ಮೀ. ಅಂತರದಲ್ಲಿ ೧೪,೦೦೦ ಅಡಿ ಎತ್ತರದಲ್ಲಿದೆ. ಪಿಂಡರಿ ಹಿಮನದಿಯ ಉಗಮಕ್ಕೆ ಹೋಗುವ ಮಾರ್ಗ ಫೂರ್ಕಿಯಾ ಮೂಲಕ ಹಾಯುತ್ತದೆ.

ಫೂರ್ಕಿಯಾ ೧೦,೭೦೦ ಅಡಿಗಳೆತ್ತರದಲ್ಲಿದೆ. ಇಲ್ಲೊಂದು ಡಾಕ್ ಬಂಗಲೆಯಿದೆ. ಇಲ್ಲಿಂದ ಐದು ಕಿ. ಮೀ. ಅಂತರದಲ್ಲಿ ಮಾರ್ತೊಲಿಯಿದೆ. ಇದನ್ನು ಶೂನ್ಯಬಿಂದುವೆಂದು ಗುರುತಿಸುತ್ತಾರೆ. ಇಲ್ಲಿಂದ ಮೂರು ಕಿ. ಮೀ. ದೂರದಲ್ಲಿ ನಂದಾಖೋಟ ಮತ್ತು ನಂದಾಖೋಟ ಶಿಖರಗಳ ಮಧ್ಯದಲ್ಲಿ ಪಿಂಡರಿ ಹಿಮನದಿಯ ಉಗಮ ಗೋಚರಿಸುತ್ತದೆ. ಇಲ್ಲಿ ಪರ್ವತಾರೋಹಿಯು ಮೊಟ್ಟಮೊದಲ ಬಾರಿಗೆ ನಿಸರ್ಗದ ನಗ್ನ ಸೌಂದರ್ಯವನ್ನು ಅನುಭವಿಸುತ್ತಾನೆ. ಆತನು ನಿಂತ ನೆಲದಲ್ಲಿ ಎಲ್ಲೂ ಸಸ್ಯವೆಂಬುದೇ ಇಲ್ಲ. ಎದುರಿಗೆ ಭವ್ಯ ಶುಭ್ರ ಹಿಮಶಿಖರಗಳು. ಸಾಮಾನ್ಯ ಪರ್ವತಾರೋಹಿಗಳು ಈ ಶೂನ್ಯ ಬಿಂದುವನ್ನು ದಾಟಿ ಮುಂದೆ ಹೋಗಲಾರರು. ಯಾಕೆಂದರೆ, ಇಲ್ಲಿಂದ ಮುಂದೆ ಹಿಮಾವೃತದೇಶದಲ್ಲಿ ಪರ್ವತಾರೋಹಣಕ್ಕೆ ವಿಶೇಷ ತರಬೇತಿ ಬೇಕಾಗುವುದಲ್ಲದೆ ಮಾರ್ಗದರ್ಶಕರ ಅಗತ್ಯವೂ ಇದೆ. ಇಲ್ಲಿಂದಲೇ ಪ್ರಕೃತಿಮಾತೆಗೆ ವಂದಿಸಿ ವಿಶ್ರಾಂತಿ ಪಡೆದು ಮೂಲ ಶಿಬಿರದೆಡೆ ಮರಳಬೇಕು. ಮರಳುವಾಗ ಮಾತ್ರ ದಾರಿಯಲ್ಲಿ ಸ್ವಲ್ಪ ಮಾರ್ಪಾಟು ಮಾಡಿಕೊಂಡು ಕಫನಿಯ ಮಾರ್ಗವಾಗಿ ಸಾಗುವುದೆಂದು ಯೋಜಿಸಲಾಗಿತ್ತು.

## ದಾರಿ ತಪ್ಪಿದಾಗ

ಸುಮಾರು ೧೦,೦೦೦ ಅಡಿಗಳೆತ್ತರದಿಂದ



ಫೂರ್ಕಿಯಾದಾಬೆಯಿಂದ ಕಾಣುವ ಸುಂದರ ನೋಟ. ಇಲ್ಲಿ ಎಡಗಡೆಯ ಶಿಖರ ನಂದಾಖೋಟ ಮತ್ತು ಬಲಗಡೆ ನಂದಾಖೋಟ. ಇವುಗಳ ಮಧ್ಯದ ಕೊಳ್ಳದಲ್ಲಿ ಪಿಂಡರಿಯ ಉಗಮವಿದೆ.

ಮೇಲೆ ಸಸ್ಯ ಸಂಪತ್ತು ವಿರಲವಾಗುತ್ತ ಹೋಗಿ ಮುಂದೆ ಬರಡು ಗುಡ್ಡಗಳು ಬಂದ ನಂತರ ಹಿಮ ಸಾಮ್ರಾಜ್ಯದ ಮೇರೆಯನ್ನು ತಲಪುತ್ತದೆ. ಅಲ್ಲಿಂದ ಮುಂದೆ ಪರ್ವತಾಗ್ರದ ಮೇಲೆಲ್ಲ ಬರ್ಫ, ಹಿಮ. ಆದರೆ ಹಿಮಾಲಯದ ಕೆಳಗಿನ ಸ್ತರದಲ್ಲಿ ಘನಘೋರ ಅರಣ್ಯ ಗಳಿದ್ದು ಅಲ್ಲಿಯೂ ಅಲ್ಲಲ್ಲಿಯ ಹವಾಮಾನವನ್ನು ಅನುಸರಿಸಿ ಹಿಂಸ್ರ ಪಶುಗಳೂ ಇವೆ. ಇಲ್ಲಿ ನಾಗ ರಿಕ ಜಗತ್ತಿನಲ್ಲಿರುವಂತೆ ಸಂಚಾರಕ್ಕೆ ಸಿದ್ಧ ರಸ್ತೆ ಗಳೆಲ್ಲೂ ಸಿಗುವುದಿಲ್ಲ. ಕಾಲುದಾರಿಗಳು ಕೆಲ ವೊಮ್ಮೆ ಸಿಗುವವಾದರೆ ಇನ್ನನೇಕ ಸಲ ಅವೂ ಇರುವುದಿಲ್ಲ. ಇಂಥಲ್ಲಿ ಹಾದಿ ತಪ್ಪಿದರೆ......

ನಮ್ಮ ಗುಂಪಿನಲ್ಲಿದ್ದವರು ೨೩ ಜನ. ಥಾಕೋರಿಯಿಂದ ಖಾತಿಗೆ ಹೋಗಬೇಕಿತ್ತು. ಆದರೆ ಇಲ್ಲಿ ಬಯಲು ಸೀಮೆಯಲ್ಲಿರುವಂತೆ ಗುಂಪು ಕಟ್ಟಿ ಕೊಂಡು ಹೋಗಲಾಗುವುದಿಲ್ಲ. ಮೂರು ನಾಲ್ಕು ಜನರ ಒಂದೊಂದು ಗುಂಪು ಮಾಡಿಕೊಂಡು ಹರಟುತ್ತ ಸಾಗುವುದು ಪರಿಪಾಠ. ನನ್ನೊಂದಿಗೆ ಒಬ್ಬ ಬಂಗಾಲಿ (ಗೌತಮ ಸಂನ್ಯಾಲ) ಮತ್ತೊಬ್ಬ ಮರಾಠಿ (ರೋಹಿತ ಧಾರವಾಡಕರ) ಮಿತ್ರರಿದ್ದರು. ದಾರಿ ತುಳಿಯುತ್ತಿರುವಾಗ ಸಮಾನಾ ಸಕ್ತಿಗಳುಳ್ಳ ನಮ್ಮಲ್ಲಿ ಸಾಮಾನ್ಯವಾಗಿ ಚರ್ಚೆಗೆ ಬರುತ್ತಿದ್ದ ವಿಷಯಗಳೆಂದರೆ ದೇಶದ ರಾಜಕಾ ರಣ—ವಿಶೇಷತಃ ಬಂಗಾಲದ ರಾಜಕಾರಣ. ನಾವು ಮಾತಾಡುತ್ತಲೇ ಕಾಡಿನಲ್ಲಿ ಎಲ್ಲೋ ಬಂದುಬಿಟ್ಟೆವು. ಆದರೆ ನಾವು ದಾರಿ ತಪ್ಪಿಸಿ ಕೊಂಡು ಎಲ್ಲಿಯೋ ಬಂದು ಬಿಟ್ಟದ್ದು ನಮಗೆ ಬಹಳ ಹೊತ್ತಿನ ವರೆಗೆ ಗೊತ್ತಾಗಲೇಯಿಲ್ಲ. ನಮ್ಮ ಹಿಂದಾಗಲಿ ಮುಂದಾಗಲಿ ನಮ್ಮ ಗುಂಪಿಗೆ ಸೇರಿದವರಾರೂ ಕಾಣದಿದ್ದಾಗ ನಾವು ಮೂವರೂ ಒಂದು ಕ್ಷಣ ಹೌಹಾರಿದೆವು. ಈಗ ನಾವು ಬಂದಿದ್ದಲ್ಲಿ ಕಾಲುದಾರಿ ಕೂಡ ಎಲ್ಲೂ ಕಾಣಲಿಲ್ಲ. ನಮ್ಮ ಸುತ್ತ ಎಲ್ಲಿ ನೋಡಿದರೂ ಬರಿ ಮರಗಳು—ಹೆಮ್ಮರಗಳು. ಆ ಹಸಿರನ್ನುಳಿ ದರೆ ಅಲ್ಲಿ ಜೀವಂತಿಕೆಯ ಯಾವ ಲಕ್ಷಣಗಳೂ ತೋರುತ್ತಿಲ್ಲ. ಖಾತಿಗೆ ಇನ್ನು ಹೋಗಿ ತಲುಪುವ ದಾರಿಯೇನೆಂದು ನಮಗಾರಿಗೂ ತಿಳಿಯದು. ಥಾಕೋರಿಗೆ ಮರಳಿ ಹೋದೇವೆಂದರೆ ಆ ದಾರಿ ಯಾವುದೆಂದೂ ಈಗ ಕಾಣದು. ಯಾಕೆಂದರೆ, ಮಾತಿನ ಭರದಲ್ಲಿ ನಾವು ಮೂವರು ಈ ಘೋರಾರಣ್ಯದ ಒಳಗಡೆ ಎಲ್ಲೋ ಬಂದು ಬಿಟ್ಟಿದ್ದೇವೆ. ಈ ಅವಸ್ಥೆಯಲ್ಲಿ ನಾವು ಎಲ್ಲಿಂದ ಬಂದೆವೆಂಬುದೂ ನಮಗೆ ತಿಳಿಯದು. ಎಲ್ಲಿಗೆ ಹೋಗಬೇಕೆಂಬುದೂ ತಿಳಿಯದು. ತ್ರಿಶಂಕು ಸ್ವರ್ಗದಲ್ಲಿದ್ದೇವೆಯೋ ಎಂಬ ಭಾವನೆ ನಮ್ಮ ನ್ನಾವರಿಸಿತು. ಅಲ್ಲದೆ ಈ ಘೋರಾರಣ್ಯದಲ್ಲಿ ಆ ಕ್ಷಣಕ್ಕೆ ನಾವಿದ್ದುದು ಎಲ್ಲಿ ಎಂದು ಸಹ ನಮಗೂ ತಿಳಿಯದು, ಇನ್ನಿತರರೂ ಊಹಿಸ ಲಾರರು.

ನಾವು ನಿಂತಲ್ಲಿಂದ ಇನ್ನೆಷ್ಟು ಮಾರ್ಗವನ್ನು ಸವೆಸಿದರೆ ನಾವು ಎಲ್ಲಿ ಹೋಗಿ ತಲಪಬಹುದು ಅಥವಾ ಎಲ್ಲಿಯೂ ನಾಗರಿಕ ಜಗತ್ತನ್ನೇ ನಾವು ಸೇರಲಿಕ್ಕಿಲ್ಲವೇ ಎಂಬಂಥ ಬಗೆಬಗೆಯ ಯೋಚನೆ ಗಳು ಮನಸ್ಸನ್ನು ಮುತ್ತತೊಡಗಿದವು. ಈ ಎತ್ತರದಲ್ಲಿ ಸೂರ್ಯಾಸ್ತ ಬಹು ಬೇಗ ಆಗಿ ಬಿಡುವುದರಿಂದ ಅಲ್ಲಿಯ ನಮ್ಮ ಸಂಚಾರ ಕಾರ್ಯವನ್ನು ಬಲು ಬೇಗ ಪೂರಯಿಸಬೇಕಾಗು ತ್ತಿತ್ತು. ಅಂತೆಯೆ ನಸುಕಿನಲ್ಲೇ ನಮ್ಮ ಥಾಕೋರಿ ಯಿಂದ ಹೊರಟಾಗಿತ್ತು. ಈಗ ಸಮಯ ಎಂಟು ಗಂಟೆ. ನಾವು ಮೂವರು ಮುಂದಿನ ಒಂದು ತಾಸು ಮಾರ್ಗ ಶೋಧನೆಯಲ್ಲಿ ತೊಡಗಿ ಏನೂ ಗೋಚರಿಸದಿದ್ದಾಗ ನಿರಾಶೆಯಿಂದ ಕೈಚೆಲ್ಲಿದೆವು. ಆದರೆ ಈ ದಟ್ಟಡವಿಯಲ್ಲಿ ಯಾರಿಂದ ನಾವು ಸಹಾಯ ಯಾಚಿಸಬೇಕು ಎಂಬುದು ಭೂತಾಕಾ ರದ ಪ್ರಶ್ನೆಯಾಗಿ ಎದ್ದು ನಿಂತಿತು.

ಇಲ್ಲಿ ಹೆಮ್ಮರಗಳು ಮತ್ತು ಅವುಗಳ ನಡು ವಿನ ಅಷ್ಟಿಷ್ಟು ಗೋಚರವಾಗುವ ಸೂರ್ಯ ಇಷ್ಟನ್ನುಳಿದರೆ ನಮ್ಮ ಕಣ್ಣುಗಳಿಗೆ ಏನೂ ಕಾಣದಾಗಿತ್ತು, ಹೊಳೆಯದಾಗಿತ್ತು. ನನಗೆ ತಟ್ಟನೆ ಚಕ್ರವ್ಯೂಹದ ನೆನಪಾಗಿ ನನ್ನಲ್ಲೇ ನಕ್ಕೆ. ತುಸು ಹೆದರಿದೆನು ಕೂಡ. ನನ್ನ ಬಳಿ ಇದ್ದುದು ಎಂದರೆ ಒಂದೆರಡು ಸೇಬು, ಒಂದೊಂದು ಬಿಸ್ಕಿಟು ಪೊಟ್ಟಣ.

ಅಲ್ಲದೆ ಇದೇ ಸುಮಾರಿಗೆ ನನ್ನ ಬಂಗಾಲಿ ಮಿತ್ರನ ಕಾಲಿಗೆ ಏನೋ ನೋವಾಗಿ ಆತ ನರಳುತ್ತ ಕುಳಿತ. ಮರಾಠಿ ಮಿತ್ರನೋ ಅವನ

ನೆರವಿಗೆ ಹೋದುದರಿಂದ ಅವರಿಬ್ಬರೂ ಒಂದು ಮರದ ಕೆಳಗೆ ಯೋಚನಾಮಗ್ನರಾಗಿ ಕುಳಿತರು. ನನ್ನ ಮಸ್ತಿಷ್ಕವೀಗ ವಿಚಾರಗಳ ತಿರುಗಣೆ ಮಡು ವಾಗಿಬಿಟ್ಟಿತ್ತು.

ಇಂಥ ಆಪತ್ಕಾಲವೇ ಮನುಷ್ಯ ಜೀವನದ ನೈಜ ಪರೀಕ್ಷಾಕ್ಷಣಗಳೆಂದು ಹೇಳುತ್ತಾರೆ. ಜೀವನ ನಶ್ವರವೆಂಬ ಜ್ಞಾನಿಗಳ ಮಾತು ನೆನಪಾಗಿ ದೈವದೆದುರು ಮನುಷ್ಯನೆಷ್ಟು ಕ್ಷುಲ್ಲಕ ಎಂಬುದರ ಸ್ಪಷ್ಟ ಕಲ್ಪನೆ ಬಂದು ಕ್ಷಣಾರ್ಧ ನಡುಗಿದೆ. ಮನೆಯಿಂದ ಸಾವಿರಾರು ಮೈಲು ದೂರ ಬಂದು ನನ್ನವರೆನ್ನುವವರು ನನ್ನ ಮೊರೆಯನ್ನು ಕೇಳುವು ದಿರಲಿ. ಕಲ್ಪಿಸಲು ಕೂಡ ಅಶಕ್ಯವಾಗಿರುವಂತಹ ಅವಸ್ಥೆ ನನ್ನನ್ನು ಇರಿಯುತ್ತಿತ್ತು. ಮನುಷ್ಯನ ಅಸಹಾಯತೆ ನನ್ನಲ್ಲೇ ಹುಚ್ಚೆದ್ದು ಕುಣಿಯುತ್ತಿ ದೆಯೇನೋ ಅನಿಸತೊಡಗಿತು. ಇಲ್ಲಿ ನಮ್ಮ ಅಳಲನ್ನು ಕೇಳಿದರೆ ಅದು ಪರಮಾತ್ಮನೊಬ್ಬನಿಗೆ ಮಾತ್ರ ಸಾಧ್ಯವೆಂಬ ಕಲ್ಪನೆ ಬಂದು ಇಲ್ಲಿಯೇ ನಾವು ಉಪವಾಸ ಸತ್ತರೂ ಅದರ ಸುಳಿವು ಕೂಡ ಬಾಹ್ಯ ಜಗತ್ತಿಗೆ ತಿಳಿಯುವ ಸಂಭವವೂ ನನಗೆ ಗೋಚರಿಸಲಿಲ್ಲ. ಈ ವ್ಯೂಹದಿಂದ ಸೂರ್ಯಾಸ್ತ ದೊಳಗೆಯೇ ಹೊರಬೀಳಲು ಶಕ್ಯವಾಗದಿದ್ದರೆ ಇದೇ ನಾವು ಮೂವರ ಕೊನೆಯೆಂದೆನಿಸಿ ಮನಸ್ಸು ತೀವ್ರ ವ್ಯಾಕುಲಗೊಂಡಿತು. ನಾವು ಮೂವರಲ್ಲಿ ಬಂಗಾಲಿ ಮಿತ್ರ ಗೌತಮ ಪರ್ವತಾರೋಹಣದಲ್ಲಿ ಹೆಚ್ಚು ಅನುಭವವಿದ್ದ ವ್ಯಕ್ತಿ. ಆ ಕ್ಷಣದಲ್ಲಿ ಆ ಮನುಷ್ಯನಮಗೆ ನಾಯಕನಾಗಿ ದಾರಿ ತೋರಬಲ್ಲ. ವನೆಂಬ ಭಾವನೆ ನನಗಿತ್ತು. ಆದರೆ ಅವನ ಮಾನ ಸಿಕ ಅವಸ್ಥೆ ನನಗಿಂತ ಶೋಚನೀಯವಾಗಿತ್ತೆಂದು ಅವನ ಮುಖ ನೋಡಿದರೇನೇ ವೇದ್ಯವಾಗು ತ್ತಿತ್ತು. ಆ ಕ್ಷಣಕ್ಕೇ ನನಗೆ ಭಗವದ್ಗೀತೆಯ ಒಂದು ಶ್ಲೋಕ ನೆನಪಾಗಿ ಮತ್ತೆ ಆತ್ಮವಿಶ್ವಾಸ ಮರುಕಳಿಸುವಂತಾಯಿತು.

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ
ಅವ್ಯಕ್ತ ನಿಧನಾನ್ಯೇವ ತತ್ರ ಕಾ ಪರಿದೇವನಾ॥

(ನಾವು) ಬಂದುದೆಲ್ಲಿಂದ ಎಂಬುದು (ನಮಗೆ) ಗೊತ್ತಿಲ್ಲ, ಮುಂದೆ ಹೋಗುವುದೆಲ್ಲಿಗೆಂಬುದು ತಿಳಿಯದು. (ಈ ಹಿಂದು ಮುಂದುಗಳ) ಕೇವಲ ಮಧ್ಯಾವಸ್ಥೆ ಮಾತ್ರ ನಮಗೆ ಗೊತ್ತು. ಇಂತಿರುವಾಗ ದುಃಖವೇತಕೆ ಪಾರ್ಥ? ಎಂದು ಪರಮಾತ್ಮ ಹೇಳಿದ್ದು ನನ್ನನ್ನು ಕುರಿತೇ ಇತ್ತೇನೋ ಅನಿಸಿದಾಗ ಮನದಲ್ಲಿರುವ ಅಳುಕು ತುಸು ಮನಸ್ಸಿಗೆ ನಿವಾರಣೆಯಾದಂತೆನಿಸಿದರೂ ಮತ್ತೆ ನನ್ನ ಪೂರ್ವಜರೆಲ್ಲರ ನೆನಪು ನನ್ನನ್ನು ಕಾಡತೊಡಗಿತು. ಅವರಲ್ಲಿ ಒಬ್ಬಿಬ್ಬರಾದರೂ ಇಲ್ಲಿಗೆ ಬಂದು ಹೋಗಿರಬೇಕೆಂದೂ ಒಮ್ಮೆ ಅನಿಸಿತು. ಮನುಷ್ಯ ಜೀವನ ಅದೆಷ್ಟು ಕ್ಷುದ್ರ ಎಂಬುದನ್ನು ಅನೇಕ ಎಡೆಗಳಲ್ಲಿ ಓದಿದ್ದೆನಾದರೂ ಅನುಭವಿಸಿರಲಿಲ್ಲ. ಇಂದು ಆ ಅನುಭವದ ಸಾಕ್ಷಾತ್ಕಾರವಾಗಿ ತಲ್ಲಣಿಸಿದೆ. ಕಿಂಕರ್ತವ್ಯ ಮೂಢನಾಗಿ ಅಲ್ಲಿಯೇ ಒಂದು ಗಿಡದ ಅಡಿಯಲ್ಲಿ ತಪ್ಪಗೆ ನಿಂತಕೊಂಡೆನು. ಸಂನ್ಯಾಲ ಕಾಲು ನೋವಿನಿಂದ ಬಳಲುತ್ತಿರುವಾಗ ಧಾರವಾಡಕರ ಅವನ ಬದಿಗೆ ಕುಳಿತು ಮೂಕ ಸಾಂತ್ವನ ಹೇಳುತ್ತಿದ್ದುದನ್ನು ಕಂಡು ಇನ್ನಷ್ಟು ಕಳವಳ




"ದೇವಾ, ಭೂಲೋಕದ ಕೆಲ ಸಂನ್ಯಾಸಿಗಳನ್ನು ಕರೆತರಲು ಕಷ್ಟ. ಅದಕ್ಕೇ ಮೊದಲು ನಾಲ್ಕಾರು ಕ್ಯಾಬರೇ ಹುಡ್ಗೀರನ್ನ ಕರೆ ತರೋಣ್ವಾ?"

ಗೊಂಡೆ– ನಮ್ಮೆಲ್ಲರ ಅಸಹಾಯಕ ಸ್ಥಿತಿಗೆ.

## ದಿಕ್ಸೂಚಿ

ಎರಡು ಗಂಟೆಗಳ ಕಾಲ ಈ ರೀತಿ ವಿಫಲಗೊಂಡು ನಿರಾಶೋನ್ಮತ್ತ ಸ್ಥಿತಿಯನ್ನು ಅನುಭವಿಸಿದ ನಂತರ ಏನೋ ಒಂದು ವಿಚಾರ ತಟ್ಟನೆ ಹೊಳೆಯಿತು. ನಾನು ಎದೆಗುಂದದೆ ಸ್ವಲ್ಪ ಶಾಂತ ರೀತಿಯಿಂದ ಯೋಚಿಸಬಲ್ಲೆನಾದರೆ... ಈ ಪರ್ವತ ಪ್ರದೇಶ ಅಕ್ಷರಶಃ ನಿರ್ಜನವಾಗಿ ತೋರಿದರೂ ಅಲ್ಲಲ್ಲಿ ಅಷ್ಟಿಷ್ಟು ಜನವಸತಿ ಇರುತ್ತದೆಂದು ಯಾವಾಗಲೊ ಓದಿದ್ದು ನೆನಪಾಯಿತು. ಅಲ್ಲದೆ ಈ ಜನಕ್ಕೆ ಆಧುನಿಕ ನಾಗರಿಕತೆಯ ಸೋಂಕೇ ಇಲ್ಲದ್ದರಿಂದ ಇವರು ಮೂಲತಃ ಪ್ರಾಮಾಣಿಕರು 'ಸಭ್ಯರು ಒಳ್ಳೆಯವರು ಎಂದು ನಾನು ಕೇಳಿದ್ದೆ. ಧಾಕೋರಿಯಿಂದ ಖಾತಿಗೆ ೧೦ ಕಿ. ಮೀ. ಅಲ್ಲದೆ ನಾವು ಧಾಕೋರಿಯನ್ನು ಬಿಟ್ಟ ನಂತರದ ಎರಡು ತಾಸುಗಳಲ್ಲಿ ನಡೆದದ್ದು ನಾಲ್ಕು ಕಿ. ಮೀ.ಗಿಂತ ಹೆಚ್ಚಿರಲಾರದು. ಕೊಳ್ಳವನ್ನು ಒಮ್ಮೆ ದಾಟಿದ ನಂತರ ಕಾಲುದಾರಿಯಂಥ ಚಿಕ್ಕ ದಾರಿಯಿದೆಯೆಂದೂ ಗೊತ್ತಿತ್ತು. ಅಂದಾಗ ಈಗಿದ್ದುದು ನಿಬಿಡಾರಣ್ಯವಾದರೂ ನಾವು ನಾಗರಿಕ ಜಗತ್ತಿನಿಂದ ಬಹಳ ದೂರವಿರಲಿಕ್ಕಿಲ್ಲವೆಂಬ ವಿಶ್ವಾಸ ಮೂಡಿತು. ಆ ಕ್ಷಣಕ್ಕೆ ನನ್ನ ಕಣ್ಣಿಗೆ ಬಿದ್ದಿದು ಒಂದೆರಡು ಕಡಿದ ಗಿಡಗಳು. ಪ್ರಾಯಶಃ ಇಲ್ಲೇ ಎಲ್ಲೊ ಇರಬಹುದಾದ ಗುಡ್ಡಗಾಡು ಜನ ಉರುವಲಿಗಾಗಿ ಈ ಗಿಡಗಳನ್ನು ಕಡಿದಿರಬೇಕು. ನನ್ನ ಯೋಚನಾಲಹರಿ ಈ ದಾರಿಯಲ್ಲೇ ಮುನ್ನಡೆಯುತ್ತಿದ್ದಂತೆಯೇ ಕಣ್ಣುಗಳು ಮತ್ತೇನನ್ನೋ ಅರಸುತ್ತಿದ್ದವು ಅಲ್ಲಿ ಗುಡ್ಡಗಾಡು ಕಟ್ಟಿಗೆ ಕಡಿದು ಕಟ್ಟಿದ ಪೆಂಡಿಯೊಂದು ಗೋಚರಿಸಿತು. ಸಮೀಪದಲ್ಲೆಲ್ಲೋ ಒಂದು ಗ್ರಾಮವಿರಲೇಬೇಕೆನಿಸಿ ನಾನು ಆ ಪರಿಸರವನ್ನು ಸೂಕ್ಷ್ಮವಾಗಿ ಅವಲೋಕಿಸತೊಡಗಿದೆ. ಶರ್ಲಾಕ್ ಹೋಮ್ಸ್‌ನಂತೆ ಕಣ್ತೆರೆದು ನೋಡುವವರಿಗೆ ಸತ್ಯ ಗೋಚರವಾಗುವುದೇನೋ. ನನಗೆ ಅಲ್ಲಿ ಪರ್ವತ ಪ್ರದೇಶದ ಕುದುರೆಗಳ ಹೆಜ್ಜೆ ಗುರುತುಗಳು ಕಂಡುಬಂದವು. ಸುದೈವಕ್ಕೆ ಆಗ ಮಳೆಯೂ ಆಗಿರಲಿಲ್ಲ, ಸೂರ್ಯನೂ ನೆತ್ತಿಯ ಮೇಲೆ ಬಂದಿದ್ದ. ನಾನು ತುಸು ದೂರ ಆ ಹೆಜ್ಜೆಗಳನ್ನೇ ಅನುಸರಿಸಿಕೊಂಡು ಹೋದಾಗ ಇನ್ನಷ್ಟು ಮುಂದೆ ಬಂದು ನಿಂತೆನು. ಸ್ವಲ್ಪ ಕಣ್ಣು ಬಿಟ್ಟು ನೋಡಿದಾಗ ದೂರದಲ್ಲಿ ಕೆಳಗಡೆ ಒಂದು ಮನೆ ಕಣ್ಣಿಗೆ ಬಿತ್ತು. ಆ ಕ್ಷಣಕ್ಕೆ ನನಗಾದ ಆನಂದಕ್ಕೆ ಸೀಮೆಯೆಂಬುದೇ ಇರಲಿಲ್ಲ. ನನ್ನ ಮಿತ್ರರಿಬ್ಬರನ್ನೂ ಕೈಮಾಡಿ ಕರೆದು ನನ್ನ ಶೋಧನೆಯನ್ನು ತೋರಿಸಿದಾಗ ಅವರೂ ಸಮಾಧಾನದ ನಿಟ್ಟುಸಿರು ಬಿಟ್ಟರು. ನಾನು ಇನ್ನಷ್ಟು ಕೆಳಗಿಳಿದು ಹೋಗಿ ದೂರದಿಂದಲೇ ನನ್ನ ಮಿತ್ರರಲ್ಲೊಬ್ಬರು ದೊಡ್ಡ ಧ್ವನಿಯಲ್ಲಿ ಕೂಗಿದರೂ ಆಚೆಯಿಂದ ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಕೊನೆಗೆ ಅಲ್ಲಿಯೇ ಹೋಗಿ ಅವರನ್ನು ಕಾಣಲು ನಿರ್ಧರಿಸಿದೆವು.



ಚಿತ್ರದಲ್ಲಿ ಎಡಗಡೆ ಇರುವ ಬಾಲಕನೇ 'ಮಾರ್ಗದರ್ಶಿ'

ನಾವು ಮನೆಯನ್ನು ತಲುಪಿದಾಗ ಅಲ್ಲಿ ನಾವು ಕಂಡದ್ದು ಇಬ್ಬರನ್ನು– ಒಬ್ಬ ಹೊರಗೆ ನೇಗಿಲು ಹೊಡೆಯುತ್ತಿದ್ದರೆ ಇನ್ನೊಬ್ಬ ಕಟ್ಟೆಯ ಮೇಲೆ ತೆಪ್ಪಗೆ ಕೂತು ನೋಡುತ್ತಿದ್ದ. ನಾವು ಅವರಿಗೆ ನಮಸ್ಕಾರ ಮಾಡಿ ಕುಡಿಯಲು ನೀರು ಕೇಳಿ

ದೆವು. ಚಿಕ್ಕ ಬಾಲಕನೊಬ್ಬ ತಂದುಕೊಟ್ಟ ನೀರನ್ನು ಕುಡಿದಾದ ನಂತರ ನಮ್ಮಲ್ಲಿ ಮಾತಿಗಾರಂಭ.

ನಮಗೆಲ್ಲ ತಿನ್ನಲೆಂದು ಶಿಬಿರದಲ್ಲಿ ಸಾಕಷ್ಟು ಚಾಕಲೇಟುಗಳನ್ನು ಕೊಟ್ಟಿರುತ್ತಿದ್ದರು. ನನಗೆ ಅದು ಅಷ್ಟಾಗಿ ಸೇರುವುದಿಲ್ಲವಾದ್ದರಿಂದ ಅವು ಜೇಬಿನಲ್ಲಿ ಸಂಗ್ರಹವಾಗಿದ್ದವು. ಅಲ್ಲದೆ ಈ ಪರ್ವತ ನಿವಾಸಿಗಳಿಗೆ ತುಂಬ ಪ್ರಿಯವಾದ ಬೀಡಿ ಕಟ್ಟುಗಳನ್ನು ನಾನು ಇಂಥ ಆಕಸ್ಮಿಕಗಳಲ್ಲಿ ಪ್ರಯೋಜನಕ್ಕೆ ಬಂದರೆ ಇರಲೆಂದು ಇಟ್ಟುಕೊಂಡಿರುತ್ತಿದ್ದೆ. ಆ ಯಜಮಾನರೆದುರಿಗೆ ನಮ್ಮ ಪೇಚಾಟವನ್ನು ವಿವರಿಸಿ ಖಾತಿಗೆ ಹೋಗುವ ದಾರಿಯನ್ನು ನಮಗೆ ತೋರಬೇಕಾಗಿ ಬಿನ್ನವಿಸಿದೆವು. ಅವರು ಮಾತಾಡುವುದು ಹಿಂದಿಯೇ ಆದರೂ ಅದು ಆ ಭಾಷೆಯದೇ ಒಂದು ಒಳಭೇದ. ಅದನ್ನು ಕುಮಾಂವ್ ಭಾಷೆಯೆಂದೇ ಕರೆಯೋಣ. ನಮಗಾರಿಗೂ ಪೂರ್ತಿ ಅರ್ಥವಾಗುತ್ತಿರಲಿಲ್ಲ. ನಾವು ದಾರಿ ತಪ್ಪಿದ್ದನ್ನು ಮನಗಂಡು ಆ ಯಜಮಾನ ಒಂದು ಕಡೆಗೆ ಬೆರಳು ತೋರಿಸಿ ಹಾಗೆಯೇ ನೇರವಾಗಿ ಹೋದರೆ ಸಮೀಪದಲ್ಲೇ ದಾರಿ ಸಿಕ್ಕುವುದಾಗಿ ಹೇಳಿದ. ನಾನು ಆ ಇಬ್ಬರು ವಯಸ್ಕರಿಗೂ ಒಂದೊಂದು ಬೀಡಿ ಕಟ್ಟು ಕೊಟ್ಟು ಮಾರ್ಗದರ್ಶನಕ್ಕೆಂದು ಯಾರಾದರೂ ಬಂದರೆ ಉಪಕಾರವಾಗುತ್ತದೆಂದೆ. ಅವನು ಏಳೆಂಟು ವರ್ಷದ ಆ ಬಾಲಕ(ನಮಗೆ ನೀರು ತಂದುಕೊಟ್ಟವ)ನನ್ನು ಕರೆದು ನಮಗೆ ದಾರಿ ತೋರಿಸಿ ಬರುವಂತೆ ಅಪ್ಪಣೆ ಮಾಡಿದ. ಅವರಿಗೆಲ್ಲ ಒಂದಿಷ್ಟು ಚಾಕಲೇಟು ಕೊಟ್ಟು ಅವರನ್ನು ಬೀಳ್ಕೊಂಡು ನಾವೆಲ್ಲರೂ ಆ ಬಾಲಕನ ಹಿಂಬಾಲಕರಾಗಿ ನಡೆದೆವು. ಅಲ್ಲಿಂದ ಸುಮಾರು ಅರ್ಧ ಕಿಲೋಮೀಟರ್ ಹೋಗುವಷ್ಟರಲ್ಲೇ ಖಾತಿಗೆ ಹೋಗುವ ಮಾರ್ಗ ನಮಗೆ ಗೋಚರಿಸಿದಾಗ ನಾವೆಲ್ಲ ಐದು ನಿಮಿಷ ಅಲ್ಲಿಯೇ ನಿಂತು ಭಗವಂತನಿಗೆ ಮೌನ ಕೃತಜ್ಞತಾರ್ಪಣ ಮಾಡಲು ಮಾತ್ರ ಮರೆಯಲಿಲ್ಲ. ಪ್ರಾಯಶಃ ಭಗವಂತ ಈ ಬಾಲಕನ ರೂಪದಲ್ಲಿ ಬಂದು ಅಂಥ ಕಡು ಕತ್ತಲಲ್ಲಿ ನಮಗೆ ಬೆಳಕಿನ ಕಿರಣವನ್ನು ತೋರಿಸಬೇಕು. ನಾಗರಿಕ ಜಗತ್ತಿನಿಂದ ನಾವು ಅಷ್ಟೇನೂ ದೂರವಾಗಿಲ್ಲವೆಂಬ ವಿಶ್ವಾಸ ನಮ್ಮಲ್ಲಿ ಮೂಡಿತು. ಸಮೀಪದಲ್ಲೆಲ್ಲಾದರೂ ಚಹ ಸಿಗಬಹುದೇನೆಂದು ನಮ್ಮ ಮಿತ್ರನೊಬ್ಬ ಕೇಳಿದಾಗ ಖಾತಿಯ ದಾರಿಯಲ್ಲಿ ತುಸು ಮುಂದೆ ಹೋದರೆ ಅಂಗಡಿ ಇದೆಯೆಂದು ಬಾಲಕ ಹೇಳಿದ. ಅಲ್ಲಿಯವರೆಗೂ ಅವನನ್ನು ಕರೆದುಕೊಂಡು ಹೋಗಿ ಅವನಿಗೂ ಚಹ ಕುಡಿಸಿ ನಾವೂ ಕುಡಿದಾಗ ಕಾಯುವ ದೇವರು ಎಲ್ಲಿದ್ದರೂ ಕಾಯುತ್ತಾನೆಂಬ ಅನುಭವದ ಪಾಠ ನಮ್ಮ ಹೃದಯಗಳಲ್ಲಿ ಅಚ್ಚಳಿಯದಂತೆ ಮೂಡಿತ್ತು. ನಮ್ಮ ಮಾರ್ಗದರ್ಶಿಯಾಗಿ ಬಂದ ಆ ಹುಡುಗನಿಗೆ ಮತ್ತಷ್ಟು ಚಾಕಲೇಟುಗಳನ್ನು ಕೊಟ್ಟಾಗ ಆತನ ಕಂಗಳಲ್ಲಿ ಮೂಡಿದ ಆನಂದವನ್ನು ನಾವು ಸಂತೃಪ್ತಿಯಿಂದ ಕಣ್ತುಂಬ ನೋಡಿ ಅನುಭವಿಸಿದೆವು. ಪರ್ವತಾರೋಹಣ ಕಾಲದಲ್ಲಿ ಸಂಗಡ ಹಣವಿಟ್ಟುಕೊಳ್ಳುವುದಕ್ಕೆ ಪ್ರತಿಬಂಧವಿದೆಯಾದರೂ ನಾನು ಸಾಕಷ್ಟು ಹಣವನ್ನು ನನ್ನ ಬಳಿ ಇರಿಸಿಕೊಂಡಿರುತ್ತಿದ್ದೆ. ಅದು ನೆನಪಾಗಿ ಆ ಬಾಲಕನ ಕೈತುಂಬ ಹಣ ನೀಡಿ ಕಳಿಸಿಕೊಟ್ಟೆವು. ನಮ್ಮ ಮಿತ್ರ ನೆನಪಿಗಿರಲೆಂದು ಆ ಮುಗ್ಧ ಬಾಲಕನ ಫೋಟೋವೊಂದನ್ನು ಕೂಡ ಕೆಮರಾದಲ್ಲಿ ಸೆರೆಹಿಡಿದಿದ್ದಾನೆ.

ಆ ಅರಣ್ಯ ಮಧ್ಯದಲ್ಲಿ ಅತ್ಯಸಹಾಯಕರಾಗಿ ಉಪಾಯಗಾಣದೆ ನಮ್ಮ ಕಥೆ ಮುಗಿಯಿತೆಂದೇ ನಾವು ಭಾವಿಸಿದ್ದ ಕ್ಷಣಗಳು ನೆನಪಾಗಿ ಈಗ ನಮಗೇ ಆಶ್ಚರ್ಯವಾಯಿತು. ಪುರುಷಪ್ರಯತ್ನವೆಲ್ಲ ಮುಗಿದಾದ ನಂತರವೇ ದೇವರು ತನ್ನ ಅಸ್ತಿತ್ವವನ್ನು ಇಂತು ತೋರುತ್ತಿರಬೇಕಲ್ಲವೆ? ✵



# ಲಕೀನಾ ಮಾದರಿ:

## ಆಡಳಿತ ಸುಧಾರಣೆಯಲ್ಲೊಂದು ಮೈಲುಗಲ್ಲು

ರಾಮಕೃಷ್ಣ ಬಡಶೇಷಿ

ಪ್ರಜೆಗಳ, ಪ್ರಜೆಗಳಿಗಾಗಿ ಮತ್ತು ಪ್ರಜೆಗಳಿಂದಲೇ ನಡೆಯುವಂಥದು ನಮ್ಮ ಸರಕಾರ ಎಂಬುದು ಭಾರತ ಸಂವಿಧಾನದ ವ್ಯಾಖ್ಯೆ. ಆದರೆ ಇಂದು ಸರಕಾರಿ ಕಚೇರಿಗಳಿಗೆ ಬರುವ ಶ್ರೀಸಾಮಾನ್ಯ ತನಗೋಸ್ಕರ ಇರುವ ಕಚೇರಿಯಲ್ಲಿ ಜವಾನನಿಂದ ಹಿಡಿದು ಮೇಲಧಿ-ಕಾರಿಯವರೆಗೆ ಎಲ್ಲರ ಮರ್ಜಿ ಕಾಯಬೇಕು.



ಅನಿಲಕುಮಾರ ಲಕೀನಾ

ಅವರು ಬಯಸಿದ ಕಾಣಿಕೆ ನೀಡಿ ಕೆಲಸ ಆದರೆ ಮಾಡಿಸಿಕೊಂಡು ಹೋಗಬೇಕು. ತಮ್ಮಿಂದಲೇ ನಡೆಯುವ ಸರಕಾರದಲ್ಲಿ ಪ್ರಜೆ ಅನುಭವಿಸಬೇಕಾದ ಬವಣೆ ಇದು. ಈ ಪದ್ಧತಿಗೆ ಮಂಗಳ ಹಾಡಿ ನಮ್ಮ ಆಡಳಿತ ಇರುವುದು ಜನರಿಗಾಗಿ, ಅದು ಸುಲಭಗೊಳ್ಳಬೇಕು, ಜನರ ಕೆಲಸ ಸುಲಲಿತವಾಗಿ ಸಾಧ್ಯವಾಗಬೇಕು ಎಂದು ಚಿಂತಿಸಿದ ಆಗಿನ ಅಹಮದನಗರ ಜಿಲ್ಲಾಧಿಕಾರಿ ಶ್ರೀ ಅನಿಲಕುಮಾರ ಲಕೀನಾ ತಮ್ಮ ಕಚೇರಿಯ ಕಾರ್ಯಕಲಾಪಗಳನ್ನು ಸರಳಗೊಳಿಸಿ ಜನರಿಗೆ ಅದರ ಪ್ರಯೋಜನ ಸುಲಭವಾಗಿ ದೊರೆಯುವ ಏರ್ಪಾಡು ಮಾಡಿದರು. ಹಾಗೂ ತಮ್ಮ ಸಿಬ್ಬಂದಿಯ ಕೆಲಸವನ್ನು ಹಗುರ ಮಾಡಿದರು. ದೇಶದಾದ್ಯಂತ ಈ ವಿಷಯ ಚರ್ಚೆಯ ಮಾತಾಯಿತು. ಅವರ ಏರ್ಪಾಡು 'ಲಕೀನಾ ಮಾದರಿ' ಎಂದೇ ಪ್ರಸಿದ್ಧಗೊಂಡಿತು. ಇವರಿಂದ ಸ್ಫೂರ್ತಿಗೊಂಡ ಕರ್ನಾಟಕದ ಚಿಕ್ಕಮಗಳೂರಿನ ಜಿಲ್ಲಾ ಕಚೇರಿ ತಾನೂ ಈ ದಿಶೆಯಲ್ಲಿ ಹೆಜ್ಜೆ ಇಟ್ಟು ಪ್ರಗತಿ ಸಾಧಿಸಿತು. ಜನಮೆಚ್ಚಿಗೆ ಪಡೆಯಿತು. ಈ ಪ್ರಗತಿ ಏನು ಎಂದರಿಯಲು ನಾನು ಮಹಾರಾಷ್ಟ್ರದ ಅಹಮದ ನಗರ ಹಾಗೂ ಕರ್ನಾಟಕದ ಚಿಕ್ಕಮಗಳೂರು ಜಿಲ್ಲಾ ಕಚೇರಿಗಳಿಗೆ ಇತ್ತೀಚೆಗೆ ಭೇಟಿ ನೀಡಿದಾಗ

'ಇದು ಈಗ ಪ್ರಜಾ ಸರಕಾರ' ಎಂಬ ಭಾವನೆ ಮೂಡಿಬಂತು. ಈ ಕಚೇರಿಗಳಲ್ಲಿ ಮನಸೆಳೆಯುವ ವಾತಾವರಣದೊಂದಿಗೆ ಕೆಲಸ ಮಾಡುವ ವೈಖರಿ ಕಂಡು ಅಚ್ಚರಿಪಟ್ಟೆ. ಈ ಎರಡೂ ಕಚೇರಿಗಳಲ್ಲಿ ಜಾರಿಗೆ ತಂದಿರುವ ಆಡಳಿತ ಸುಧಾರಣೆಯ ಪರಿಚಯ ಹೀಗಿದೆ.

ಜಿಲ್ಲಾ ಕಚೇರಿಗಳಲ್ಲಿ ಕೆಲಸಗಾರರಲ್ಲಿ ಹೆಚ್ಚಿನ ಸಂಖ್ಯೆ ಗುಮಾಸ್ತರದು. ಜನ ಬಂದವರೇ ತಮ್ಮ ಕೆಲಸಕ್ಕಾಗಿ, ನೇರವಾಗಿ ಗುಮಾಸ್ತರ ಬಳಿ ಹೋಗುತ್ತಾರೆ. ಅವರ ಸ್ಥಿತಿಯು ದೇವರಿಗೇ ಪ್ರೀತಿ. ಪಾಲಿಶ್ ಕಂಡಿರದ ಮುರುಕು ಮೇಜು, ಅದರ ಮೇಲೆ ಫೈಲುಗಳ ರಾಶಿ, ನಾಲ್ಕೂ ಬದಿಗೆ ಗೋಡೆಗಳ ಸುತ್ತ ಬೀರುಗಳ ಸಾಲು, ಅವುಗಳ ಮೇಲೆ ಮಾಡು ಮುಟ್ಟುವ ವರೆಗೆ ಫೈಲುಗಳ ಕಟ್ಟು, ಧೂಳಿನ ಪದರು ಆವರಿಸಿದ ಕಾಗದ ಪತ್ರಗಳು, ಕತ್ತಲೆ ತುಂಬಿದ ಗಾಳಿಯಾಡದ ಸ್ಥಳ. ಇವುಗಳ ಮಧ್ಯೆ ಕೈ ಮುರಿದ ಕುರ್ಚಿಯ ಮೇಲೆ ಗುಮಾಸ್ತ, ಇದು ಆತನ ಸ್ಥಿತಿ. ಜನ ಆತನಿಗೆ ಏನಾದರೂ ಮಾಹಿತಿ ಕೇಳಿದರೆ ಆತ ಆ ಪ್ರಚಂಡ ಕಾಗದಗಳ ರಾಶಿಯಿಂದ ಅದನ್ನು ಹುಡುಕಿ ತೆಗೆಯುವ ಬಗೆ ಹೇಗೆ? ಆದುದರಿಂದಲೇ ಕೆಲವು ಇದ್ದ, ಇರದಿದ್ದ ಅಪೂರ್ಣ ಮಾಹಿತಿಗಳ ಆಧಾರದಿಂದ ಆತ ಕಡತ ತಯಾರಿಸುತ್ತಾನೆ. ಅಧಿಕಾರಿಗಳು ಅದರ ಮೇಲೆ ನಿರ್ಣಯ ಕೈಗೊಳ್ಳುತ್ತಾರೆ.



ಬಿ. ಪಾರ್ಥಸಾರಥಿ

ಲಕೀನಾ ಈ ದುಸ್ಥಿತಿಗೆ ಪೂರ್ಣವಿರಾಮ ಹಾಕಿದರು. ಹೊಸ ಆಯಾಮವನ್ನು ಜಾರಿಗೆ ತಂದರು. ಆ ಆಯಾಮ ಅಹಮದನಗರದ ನಂತರ ಚಿಕ್ಕಮಗಳೂರಿಗೂ ಪಾದಾರ್ಪಣ ಮಾಡಿತು. ನಂತರ ಚಿಕ್ಕಮಗಳೂರಿನ ಜಿಲ್ಲಾಧಿಕಾರಿಗಳಾದ ಶ್ರೀ ಪಾರ್ಥಸಾರಥಿಯವರು ಲಕೀನಾ ಮಾದರಿಯನ್ನನುಸರಿಸಿದರು. ತಮ್ಮ ಕಚೇರಿಗಳ ಸಿಬ್ಬಂದಿಯ ಸಹಕಾರದೊಂದಿಗೆ ಕಾಗದಗಳ ರಾಶಿಯನ್ನು ಆರಿಸಿ ವ್ಯವಸ್ಥಿತವಾಗಿ ಅವುಗಳನ್ನು ಬೇರ್ಪಡಿಸಿದ ನಂತರ ಅನವಶ್ಯಕವಾದವುಗಳನ್ನು ತೆಗೆದುಹಾಕಿ ಅವಶ್ಯವಿದ್ದ ವಸ್ತುಗಳನ್ನು ಓರಣವಾಗಿ ಜೋಡಿಸುವ ಚಳುವಳಿ ಆರಂಭಿದರು. ಈ ಕೆಲಸವನ್ನು ಕಚೇರಿಯ ಕೆಲಸದ ವೇಳೆಯ ನಂತರ ಆರಂಭಿಸಲಾಗುತ್ತಿತ್ತು. ಈ ಇಬ್ಬರೂ ಜಿಲ್ಲಾಧಿಕಾರಿಗಳು ಇದರಲ್ಲಿ ಸ್ವತಃ ಪಾಲ್ಗೊಳ್ಳುತ್ತಿದ್ದುದರಿಂದ ಅಲ್ಲಿಯ ಸಿಬ್ಬಂದಿಗೆ ಈ ಕಾರ್ಯವನ್ನು ವೇಗವಾಗಿ ಹಾಗೂ ಅಚ್ಚುಕಟ್ಟಾಗಿ ಮಾಡಲು ಉತ್ಸಾಹ ಸಿಗುತ್ತಿತ್ತು. ಅಹಮದನಗರ ಜಿಲ್ಲಾ ಕಚೇರಿಯ ರಿಕಾರ್ಡ್ ಕೋಣೆಯ ಪುನರುಜ್ಜೀವನ ಮಾಡಿದಾಗ ನಾಶಮಾಡಲು ಯೋಗ್ಯವಾದ ೪೬೦೦ ಕಡತಗಳು ಹೊರತೆಗೆಯಲ್ಪಟ್ಟವು. ೧೯ ಟನ್ ಭಾರದ ಈ ರದ್ದಿ ಕಾಗದಗಳನ್ನು ಮಾರಿದಾಗ ಬಂದ ೨೩೦೦೦ ರೂಪಾಯಿಗಳು ಸರಕಾರಿ ಖಜಾನೆ ಸೇರಿದವು. ಚಿಕ್ಕಮಗಳೂರಿನಲ್ಲಿ ನಡೆದ ಈ ಕಾರ್ಯದಲ್ಲಿ ಬೇಡವಾದ ೨೨೦೦೦ ಕಾಗದಪತ್ರಗಳು ರದ್ದಿ ಅಂಗಡಿ ಸೇರಿ ೮೭೨೪ ರೂಪಾಯಿಗಳು ಸರಕಾರದ ಬೊಕ್ಕಸಕ್ಕೆ ಸೇರಿದವು.

ಗುಮಾಸ್ತರ ಕೆಲಸ ಸುಲಭವಾಗಿ ಸಾಗಬೇಕಿದ್ದರೆ, ಆಯಾ ವಿಭಾಗದಲ್ಲಿ ಆಗುವ ಕೆಲಸ, ಅದಕ್ಕೆ ಬೇಕಾದ ನಿಯಮಗಳು, ಅನುಸರಿಸುವ ವಿಧಾನಗಳು ಇವೆಲ್ಲ ಅವರಿಗೆ ತಿಳಿದಿರುವದು

ಅವಶ್ಯ. ಅದಕ್ಕಾಗಿಯೇ ಈ ಎರಡೂ ಕಚೇರಿಗಳಲ್ಲಿ ಜಾಬ್ ಚಾರ್ಟ್ ಪದ್ಧತಿಯನ್ನು ಜಾರಿಗೆ ತರಲಾಗಿದೆ. ಪ್ರತಿಯೊಂದು ಮೇಜಿನ ಮೇಲೆ ಆಗಬೇಕಾದ ಕೆಲಸಗಳು, ಅವುಗಳನ್ನು ಪರಿಷ್ಕರಿಸುವ ವಿಧಾನ ಮುಂದಿನ ಮಟ್ಟಗಳಿಗೆ ಕಳಿಸುವ ಪದ್ಧತಿ ಇತ್ಯಾದಿಗಳ ವಿವರಗಳುಳ್ಳ ಪಟ್ಟಿ ಪ್ರತಿ ಗುಮಾಸ್ತನ ಬಳಿ ಇರುವ ಸ್ಟ್ಯಾಂಡಿಂಗ್ ಆರ್ಡರ್ ಫೈಲಿನಲ್ಲಿ ಇರುತ್ತದೆ. ಇದರಿಂದ ಯಾವುದೇ ಗುಮಾಸ್ತ ಯಾವುದೇ ಮೇಜಿನ ಮೇಲೆ ಕಾರ್ಯ ನಿರ್ವಹಿಸಲು ಸಾಧ್ಯವಿದೆ. 'ಇಂದು ಅವರು ರಜೆಯಲ್ಲಿದ್ದಾರೆ, ನಾಳೆ ಬನ್ನಿ' ಇತ್ಯಾದಿ ಸಬೂಬುಗಳ ಕಾಟ ಇಲ್ಲ. ವರ್ಕ್ ಸ್ಟಡಿ ಆಧಾರದಿಂದ ವಿಭಾಗದಲ್ಲಿಯ ಕಡತಗಳು ಹೇಗೆ ಚಲಿಸುತ್ತವೆ, ಯಾರಿಂದ ಯಾರಿಗೆ ಹೋಗುತ್ತವೆ ಎಂಬುದನ್ನು ಅಭ್ಯಸಿಸಿ 'ಫ್ಲೋ-ಪ್ರೊಸೆಸ್ ಚಾರ್ಟ್'ಗಳನ್ನು ತಯಾರಿಸಿ ಅವುಗಳ ಆಧಾರದಿಂದ ಕಡತಗಳು ಅತಿ ಕಡಿಮೆ ಚಲಿಸುವಂತೆ ಸಿಬ್ಬಂದಿ ವರ್ಗದ ಆಸನ ವ್ಯವಸ್ಥೆಯನ್ನು ಈ ಪದ್ಧತಿಯಲ್ಲಿ ಮಾಡಲಾಗಿದೆ.

ನೋಡುಗರು ಮೆಚ್ಚಬೇಕು, ಕೆಲಸಮಾಡುವವರು ಇನ್ನೂ ಉತ್ಸಾಹಿಗಳಾಗಿ ಕೆಲಸ ಮಾಡಬೇಕು. ಆ ರೀತಿ ಕಚೇರಿಗಳಲ್ಲಿ ವ್ಯವಸ್ಥೆಯನ್ನು ರೂಪಿಸಲಾಗಿದೆ. ಅದರಂತೆ ಯಾವುದೇ ನಾಗರಿಕ ತನ್ನ ಕೆಲಸ, ಕಾರ್ಯಗಳಿಗಾಗಿ ಈ ಕಚೇರಿಗಳ ಗುಮಾಸ್ತರನ್ನು ಸಂಪರ್ಕಿಸುವಂತಿಲ್ಲ. ಆತ ನೇರವಾಗಿ ಸಂಬಂಧಿತ ಅಧಿಕಾರಿಗಳನ್ನು ಕಾಣುವ ವ್ಯವಸ್ಥೆ ಮಾಡಲಾಗಿದೆ. ಗುಮಾಸ್ತನಿಗೆ ನಿರ್ದೇಶನ ಸಿಗುವುದು ಆತನ ಮೇಲಧಿಕಾರಿಯಿಂದ ಮಾತ್ರ. ಸ್ನೇಹಿತರೊಂದಿಗೆ ಹರಟೆ, ಬೇಕು ಬೇಡದ ಜನ ಕಚೇರಿ ಪ್ರವೇಶಿಸಿ ಕಚೇರಿ ಕೆಲಸಗಳಿಗೆ ಅಡೆತಡೆ ಒಡ್ಡುವ ಕಾರ್ಯಗಳಿಗೆ ಈ ಕಚೇರಿಗಳು ಪೂರ್ಣವಿರಾಮ ಹಾಕಿವೆ. ಕಚೇರಿ ಸಮಯದಲ್ಲಿ ಸಿಬ್ಬಂದಿ ತನ್ನ ಕೆಲಸದ ಹೊರತು ಬೇರೇನೂ ಮಾಡುವಂತಿಲ್ಲ. ಹೀಗಾಗಿ ದಕ್ಷತೆ ತನ್ನಿಂದ ತಾನೇ ಇಲ್ಲಿ ಕಂಡು ಬರುತ್ತಿದೆ. ಸಿಬ್ಬಂದಿಗಳ ಆಸನ ವ್ಯವಸ್ಥೆ ಸಹ ಕಣ್ಸೆಳೆಯುವಂತಹದ್ದು. ಎಲ್ಲ ಪೀಠೋಪಕರಣಗಳನ್ನು ಖರೀದಿಸುವುದು ಸಾಧ್ಯವಿರಲಿಲ್ಲವಾದ್ದರಿಂದ ಇದ್ದ ಎಲ್ಲಾ ಮೇಜುಗಳ ಅಳತೆ ಮಾಡಿಸಿ, ಒಂದೇ ಅಳತೆಯ ಮೇಜುಗಳನ್ನು ಒಂದೊಂದು ವಿಭಾಗಕ್ಕೆ ಹಂಚಲಾಗಿದೆ. ಎಲ್ಲಾ ಮೇಜುಗಳಿಗೂ ರೆಕ್ಸಿನ್ ಹಾಕಿಸಲಾಗಿದೆ. ಪ್ರತಿಯೊಬ್ಬ ಗುಮಾಸ್ತನಿಗೂ ಮೇಜಿನ ಮೇಲಿರುವ ಗಾಜಿನ ಹಾಗೆ, ಪೆನ್‌ಸ್ಟ್ಯಾಂಡ್, ಪೇಪರ್ ಟ್ರೇ ಇತ್ಯಾದಿ ಅವಶ್ಯಕ ಸಲಕರಣೆಗಳನ್ನು ಒದಗಿಸಲಾಗಿದೆ. ಹಳೆಯ ಕುರ್ಚಿಗಳನ್ನು ತೆಗೆದು ಹೊಸ ಉಕ್ಕಿನ ಕುರ್ಚಿಗಳನ್ನು ಹಾಕಿಸಲಾಗಿದೆ. ಪ್ರತಿಯೊಬ್ಬ ಗುಮಾಸ್ತ ವಿಶಾಲವಾದ ಕೋಣೆಯಲ್ಲಿ ಸಾಲಾಗಿ ಕುಳಿತುಕೊಳ್ಳುವ ವ್ಯವಸ್ಥೆ ಮಾಡಲಾಗಿದೆ. ಗಾಳಿ, ಬೆಳಕು ಸಾಕಷ್ಟು ಸಿಗುವಂತೆ ನೋಡಿಕೊಳ್ಳಲಾಗಿದೆ. ಪ್ರತಿ ಗುಮಾಸ್ತನ ಎಡ ಪಕ್ಕದಲ್ಲಿ ಒಂದೊಂದು ಚಿಕ್ಕ ಕಪಾಟನ್ನು ಇಡಲಾಗಿದ್ದು ಅವುಗಳಲ್ಲಿ ವಿಲೇವಾರಿ ಮಾಡಲು ಬಾಕಿಯಿರುವ ಕಾಗದ ಪತ್ರಗಳು, ಕಾದಿರಿಸಿದ ಕಡತಗಳು, ನಿಯತ ಕಾಲಿಕಗಳು, ಸುತ್ತೋಲೆಗಳ ಕಡತ, ಅಭಿಲೇಖಾಲಯಕ್ಕೆ ಕಳುಹಿಸಿ ಕೊಡಬೇಕಾದ ಕಡತಗಳು ಹಾಗೂ 'ಡ' ವರ್ಗದ ಕಾಗದಪತ್ರಗಳನ್ನು ಇಡಲು ಆರು ಭಾಗಗಳನ್ನು ಮಾಡಿ ಆಯಾ ಭಾಗಕ್ಕೆ ಸಂಬಂಧಿತ ಹೆಸರಿನ ಚೀಟಿ ಅಂಟಿಸಲಾಗಿದೆ. ಚಿಕ್ಕಮಗಳೂರಿನಲ್ಲಿ 'ಡ' ವರ್ಗ ವಿಭಾಗ ಒಂದನ್ನು ಹೊರತುಪಡಿಸಿ ಈ ವ್ಯವಸ್ಥೆಯನ್ನು ಉಳಿಸಿಕೊಳ್ಳಲಾಗಿದೆ. ಮೇಜಿನ ಮೇಲೆ ಸಂಬಂಧಿತ ಗುಮಾಸ್ತನ ಹೆಸರು ಹಾಗೂ ಹುದ್ದೆ ಇರುವ ಚಿಕ್ಕ ಬೋರ್ಡ್ ಇಡುವ ವ್ಯವಸ್ಥೆ ಕಲ್ಪಿಸಲಾಗಿದೆ. ಬೆರಳಚ್ಚುಗಾರರಿಗಾಗಿ ವಿಶಾಲವಾದ ಪ್ರತ್ಯೇಕ ಕೋಣೆಯನ್ನು ಮೀಸಲಿಡಲಾಗಿದ್ದು ಅಲ್ಲಿ ಕೇವಲ ಆ ಶಬ್ದದ ಹೊರತು ಬೇರೇನೂ ಕೇಳುವಂತಿಲ್ಲ. ಆಯಾ ವಿಭಾಗದ ಹಿರಿಯ ಅಧಿಕಾರಿಗೆ ತನ್ನ 'ಕೇಬಿನ್'ನಿಂದಲೇ ಕೋಣೆಯಲ್ಲಿ

ರುವ ಸಿಬ್ಬಂದಿಗಳ ಮೇಲೆ ಸಹಜವಾಗಿ ಗಮನ ವಿಡುವ ಏರ್ಪಾಡು ಮಾಡಲಾಗಿದೆ. ಪ್ರತಿಯೊಂದು ವಿಭಾಗದಲ್ಲಿಯೂ ಭೇಟಿಗೆ ಬರುವವರ ಸಂಖ್ಯೆಯನ್ನು ಆಧರಿಸಿ ಆ ವಿಭಾಗದ ಅಧಿಕಾರಿಯ ಕೇಬಿನ್ನಿನಲ್ಲಿ ಆಸನ ವ್ಯವಸ್ಥೆ ರೂಪಿಸಲಾಗಿದೆ.

ಗುಮಾಸ್ತರ ಕೆಲಸ ಸುಗಮವಾಗಿ ಸಾಗಬೇಕಿದ್ದರೆ ಕೇವಲ ಅವರ ಸ್ಥಳ ಹಾಗೂ ಕೋಣೆ ವ್ಯವಸ್ಥಿತವಾಗಿದ್ದರೆ ಸಾಲದು. ಅವರಿಗೆ ಬೇಕಾಗುವ ದಾಖಲೆಗಳು ವಿಳಂಬವಿಲ್ಲದೆ ಸಿಗುವಂತಿರಬೇಕು. ಯಾವ ದಾಖಲೆಗಳನ್ನು ಎಷ್ಟು ವರ್ಷ ಕಾದಿಡಬೇಕು ಎಂದು ತಿಳಿಸುವ ಸರಕಾರದಿಂದ ನಿರ್ಧರಿಸಲ್ಪಟ್ಟ ಅ, ಬ, ಕ, ಡ, ವರ್ಗೀಕರಣ ಪದ್ಧತಿಯನ್ನು ಅಹಮದನಗರ ಜಿಲ್ಲಾ ಕಚೇರಿಯ ರಿಕಾರ್ಡ್ ಕೋಣೆಯಲ್ಲಿ ಜಾರಿಯಲ್ಲಿಡಲಾಗಿದೆ. ಇಷ್ಟೇ ಅಲ್ಲದೇ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ವಾಚನಾಲಯಗಳಲ್ಲಿರುವಂತೆ 'ಇಂಡೆಕ್ಸ್ ಹಾಗೂ ಕೆಟಲಾಗ್' ಪದ್ಧತಿಯನ್ನು ಇಲ್ಲಿ ಜಾರಿಗೆ ತರಲಾಗಿದೆ. ಪ್ರತಿಯೊಂದು ಕಡತಕ್ಕೂ ಇಂಡೆಕ್ಸ್ (ಸೂಚಕ ಸಂಖ್ಯೆ) ಕೊಟ್ಟಿದ್ದಾರೆ. ಆ ದಫ್ತರಿನಲ್ಲಿ ಯಾವ ಕಡತಗಳಿವೆ ಎಂಬುದನ್ನು ಹೊರಗಿಟ್ಟಿರುವ ಕ್ಯಾಟಲಾಗ್ ಬೀರುವಿನಲ್ಲಿರುವ ಕಾರ್ಡುಗಳಿಂದ ಸುಲಭವಾಗಿ ತಿಳಿಯಬಹುದು. ಈ ಕಚೇರಿಯಿಂದಲೇ ಮಾರ್ಗದರ್ಶನ ಪಡೆದ ಚಿಕ್ಕಮಗಳೂರು ಜಿಲ್ಲಾ ಕಚೇರಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅನಿರ್ದಿಷ್ಟ ಕಾಲದ ವರೆಗೆ ಕಾದಿಡಬೇಕಾದ ಕಡತಗಳು, ಮೂವತ್ತು ವರ್ಷ ಕಾದಿಡಬೇಕಾದ ಕಡತಗಳು, ಹತ್ತು ವರ್ಷ ಕಾದಿಡಬೇಕಾದ ಕಡತಗಳು, ಐದು ವರ್ಷ ಕಾದಿಡಬೇಕಾದ ಕಡತಗಳು, ಹಾಗೂ ಒಂದು ವರ್ಷ ಕಾದಿಡಬೇಕಾದ ಕಡತಗಳನ್ನು ಅ, ಬ, ಕ, ಡ, ಮತ್ತು ಇ ಎಂದು ಹೆಸರಿಸಿ ಬೇರೆ ಬೇರೆ ಬಣ್ಣದ ಬಟ್ಟೆಗಳಲ್ಲಿ ಅವುಗಳನ್ನು ಕಟ್ಟಿಡಲಾಗಿದೆ. ಇಷ್ಟೇ ಅಲ್ಲದೇ ರಿಕಾರ್ಡ್ ರೂಮಿನಲ್ಲಿ ಸಿಗುವ ಕಡತಗಳ ಪಟ್ಟಿಯನ್ನು ಪ್ರತಿ ಗುಮಾಸ್ತನಿಗೂ ಒದಗಿಸಲಾಗಿದೆ. ಅವರೇ ತಮ್ಮ ಬಳಿ ಇರುವ ಪಟ್ಟಿಯನ್ನು ನೋಡಿ ತಮಗೆ ಬೇಕಿದ್ದ ಕಡತದ ಕೋಡ್ ನಂಬರ್ ಬರೆದು ಕಳಿಸುತ್ತಾರೆ. ಕೆಲ ನಿಮಿಷಗಳಲ್ಲೇ ಎಷ್ಟೇ ಹಳೆಯ ಕಡತ ಕೂಡ ಅವರ ಕೈ ಸೇರುತ್ತದೆ. ಹೀಗಿದೆ ಈ ಎರಡೂ ಕಚೇರಿಗಳ ರಿಕಾರ್ಡು ಕೋಣೆಯ ವ್ಯವಸ್ಥೆ.

ಜನಸಾಮಾನ್ಯರಿಗೆ ನೇರವಾಗಿ ಉಪಯೋಗವಾಗುವ ಇನ್ನೊಂದು ವ್ಯವಸ್ಥೆ 'ಕೌಂಟರ್ ಮತ್ತು ಟೋಕನ್' ವಿಧಾನ. ಅಹಮದನಗರ ಜಿಲ್ಲಾ ಕಚೇರಿಯಲ್ಲಿ ನಾವು ಅರ್ಜಿ ತುಂಬಿ ಕೊಟ್ಟೊಡನೆ ಟೋಕನ್ ಕೊಡುತ್ತಾರೆ. ಅದರ ಸಂಖ್ಯೆಯನ್ನು ಹಾಗೂ ಲೈಸೆನ್ಸ್ ಸಿದ್ಧವಾಗುವ ದಿನಾಂಕವನ್ನು ಒಂದು ರಜಿಸ್ಟರ್‌ನಲ್ಲಿ ನಮೂದಿಸಿ ಟೋಕನ್ ಕೊಡುವಾಗ ನಮಗೆ ತಿಳಿಸುತ್ತಾರೆ. ನಿಗದಿಪಡಿಸಿದ ದಿನ ಹೋಗಿ ನಾವು ಕೌಂಟರಿನಲ್ಲಿ ಟೋಕನ್ ಕೊಟ್ಟು ನಮ್ಮ ಲೈಸೆನ್ಸ್ ಪಡೆಯಬೇಕು. ಲೈಸೆನ್ಸ್ ಫೀಯನ್ನು ಅರ್ಜಿಯ ಜೊತೆಗೆ ಮೊದಲೇ ಪಡೆದಿರುತ್ತಾರೆ.

ಅಹಮದನಗರ ಜಿಲ್ಲಾಧೀಶರಾಗಿ ಶ್ರೀ ಲಕೀನಾ ಅವರಿಂದ ಇತ್ತೀಚೆಗೆ ಅಧಿಕಾರ ವಹಿಸಿಕೊಂಡ ಶ್ರೀ ರಾಜೀವ್ ಅಗ್ರವಾಲ್ ಸಂದರ್ಶನ ಕಾಲದಲ್ಲಿ ನನ್ನೊಂದಿಗೆ ಮಾತನಾಡುತ್ತಾ ತಾವು ಅಧಿಕಾರ ವಹಿಸಿಕೊಳ್ಳುವಾಗ ಪ್ರಚಲಿತ ಪದ್ಧತಿಯಿಂದಾಗಿ ಜಿಲ್ಲೆಯ ಹಾಗೂ ಕಚೇರಿಯ ಪರಿಚಯ ಮಾಡಿಕೊಳ್ಳುವುದು ತುಂಬಾ ಹಗುರವಾಯಿತೆಂದೂ ಈ ಪದ್ಧತಿ ತಮ್ಮ ಮೇಲೆ ತುಂಬಾ ಪ್ರಭಾವ ಬೀರಿದೆಯಾದ್ದರಿಂದ ಜಿಲ್ಲೆಯ ಎಲ್ಲಾ ೧೩ ತಾಲೂಕುಗಳಲ್ಲೂ ಈ ಕ್ರಮ ಅಳವಡಿಸಿಕೊಂಡಿರುವುದಾಗಿಯೂ ಹೇಳಿದರು. ಜಿಲ್ಲಾ ಕಚೇರಿಯ ಆಧುನೀಕರಣಕ್ಕೆ ಆರುಲಕ್ಷ ರೂಪಾಯಿ ಖರ್ಚು ಬಂದಿಯಂತೆ. ಈ ಕಚೇರಿಯ ಪ್ರತಿಯೊಬ್ಬರಲ್ಲೂ ಶಿಸ್ತು, ಸಾರ್ವಜನಿಕರೊಡನೆ ಆದರದಿಂದ ವರ್ತಿಸುವುದು ನಿಜಕ್ಕೂ ಮೆಚ್ಚಬೇಕಾದ ವಿಷಯ.

ಚಿಕ್ಕಮಗಳೂರಿನ ಜಿಲ್ಲಾ ಕಚೇರಿಯ ಹೊರಗಡೆ 'ಕಛೇರಿ ಸಂಪೂರ್ಣ ಕನ್ನಡಮಯವಾಗಿದೆ' ಎಂದು ಸಾರುವ ಹಾಗೂ ಕನ್ನಡಿಗರಾಗಿರುವ ನಮಗೆ ಕನ್ನಡವನ್ನೇ ಬಳಸಲು ಕರೆ ಕೊಡುವ ಫಲಕ ಸ್ವಾಗತಿಸುತ್ತದೆ. ಕಛೇರಿಯ ಒಳಗೆ ಹೋಗಬೇಕಾದರೆ ಸ್ವಾಗತಕಾರರನ್ನು ದಾಟಿಕೊಂಡೇ ಹೋಗಬೇಕು. ಅಹಮದನಗರದಲ್ಲಿ-ರುವಂತೆ ಇಲ್ಲಿಯೂ 'ಕೌಂಟರ್ ಹಾಗೂ ಟೋಕನ್' ವಿಧಾನ ಜಾರಿಯಲ್ಲಿದೆ. ಆದರೆ ಹೆಚ್ಚಿನ ಸಂದರ್ಭದಲ್ಲಿ ಈ ಸ್ವಾಗತಕಾರರೇ ನಮ್ಮ ಅರ್ಜಿ ಪೂರ್ಣವಾಗಿ ತುಂಬಲ್ಪಟ್ಟಿದೆಯೇ ಎಂದು ನೋಡಿ ಆ ಮೇಲೆ ಅದನ್ನು ತಾವೇ ಸ್ವೀಕರಿಸಿ ಟೋಕನ್ ಕೊಡುತ್ತಾರೆ. ಅದರಲ್ಲಿ ನಮಗೆ ಲೈಸೆನ್ಸ್ ಸಿಗುವ ದಿನಾಂಕ ತಿಳಿಸಲ್ಪಟ್ಟಿರುತ್ತದೆ. ಒಂದು ವೇಳೆ ಸಾರ್ವಜನಿಕರಿಗೆ ಮೇಲ-ಧಿಕಾರಿಗಳನ್ನು ಕಾಣಬೇಕಿದ್ದರೆ, ಸ್ವಾಗತಕಾರ ಅವರಿಗೆ ಮಾರ್ಗದರ್ಶನ ನೀಡುತ್ತಾರೆ. ಸಂತೆಯ ದಿನವಾದ ಬುಧವಾರದಂದು ಎರಡು ಗಂಟೆಗಳ ಕಾಲ ಸ್ವತಃ ಜಿಲ್ಲಾಧಿಕಾರಿಗಳೇ ಸ್ವಾಗತಕಾರರ ಸ್ಥಾನದಲ್ಲಿ ಕುಳಿತು ಸಾರ್ವಜನಿಕರ ಅಹವಾಲುಗಳನ್ನು ಸ್ವೀಕರಿಸುತ್ತಾರೆ.

ಕಚೇರಿ ಸಿಬ್ಬಂದಿಯ ಕೆಲಸಗಳನ್ನು ವಿವರಿಸುವ ಕಚೇರಿ ಕೆಲಸಗಳ ಮಾರ್ಗದರ್ಶಿ ಕೈಹೊತ್ತಗೆಯನ್ನು ಎಲ್ಲಾ ಸಿಬ್ಬಂದಿಗಳಿಗೂ ಕೊಡಲಾಗಿದ್ದು ಅದರಲ್ಲಿರುವ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಅವರಿಗೆ ಕೇಳಲಾಗಿದೆ.

ಭೇಟಿಯ ಕಾಲದಲ್ಲಿ ಸಂದರ್ಶನ ನೀಡಿದ ಚಿಕ್ಕಮಗಳೂರಿನ ಜಿಲ್ಲಾಧಿಕಾರಿ ಶ್ರೀ ಬಿ.-ಪಾರ್ಥಸಾರಥಿಯವರು ತಮ್ಮ ಕಚೇರಿಯನ್ನು ಆಧುನೀಕರಣಗೊಳಿಸಲು ಆರುವರೆ ಲಕ್ಷ ರೂಪಾಯಿ ಖರ್ಚು ತಗಲಿತು ಎಂದು ಹೇಳಿದರು. ಈ ಆಧುನೀಕರಣಕ್ಕೆ ಮುಂಚೆ ತಮ್ಮ ಕಚೇರಿಯ ಐದು ಜನರನ್ನು ಅಹಮದನಗರಕ್ಕೆ ಕಳುಹಿಸಿ ಅಲ್ಲಿ ಅನುಸರಿಸಿದ ಪದ್ಧತಿಯನ್ನು ತಿಳಿದುಕೊಂಡು ಅವರ ವರದಿಯ ಆಧಾರದ ಮೇಲೆ ಈ ಕ್ರಮವನ್ನು ಜಾರಿಗೆ ತರಲಾಗಿದೆ ಎಂದರು. ಆಡುಭಾಷೆಯಾದ ಕನ್ನಡಕ್ಕೆ ತಮ್ಮ ಕಚೇರಿಯಲ್ಲಿರುವ ಸ್ಥಾನವನ್ನು ವಿವರಿಸುತ್ತ ಜಿಲ್ಲಾಧಿಕಾರಿಗಳು, ಕೇಂದ್ರ ಸರಕಾರಕ್ಕೆ ಹಾಗೂ ಹೊರ ರಾಜ್ಯಗಳಿಗೆ ಕಳಿಸಬೇಕಾಗಿರುವ ಕಾಗದಪತ್ರಗಳ ಹೊರತು ಉಳಿದೆಲ್ಲ ವ್ಯವಹಾರವನ್ನು ಕನ್ನಡದಲ್ಲಿ ತಮ್ಮ ಕಚೇರಿ ನಡೆಸುವುದೆಂದೂ ಕೇವಲ ಮೇಲೆ ತಿಳಿಸಿದ ಉದ್ದೇಶಕ್ಕಾಗಿ ಒಂದೇ ಒಂದು ಇಂಗ್ಲಿಷ್ ಬೆರಳಚ್ಚು ಯಂತ್ರವನ್ನು ತಮ್ಮ ಕಚೇರಿಯಲ್ಲಿ ಉಳಿಸಿಕೊಂಡಿರುವುದಾಗಿಯೂ ಅವರು ಹೇಳಿ-ದರು. "ಇಂದಿನ ಸಮಾಜದಲ್ಲಿ ಪ್ರಮುಖ ಸಮಸ್ಯೆಯಾದ ಲಂಚದ ಹಾವಳಿ ತಮ್ಮ ಕಚೇರಿಯಲ್ಲಿ ಈ ಆಧುನೀಕರಣದಿಂದ ಸಂಪೂರ್ಣ ನಾಶಗೊಂಡಿದೆಯೇ?" ಎಂಬ ಪ್ರಶ್ನೆಗೆ ಪಾರ್ಥಸಾರಥಿಯವರು, "ಗೊತ್ತಿಲ್ಲ ಲಂಚ ನಿರ್ಮೂಲ-ನೆಗೆ ಸಾರ್ವಜನಿಕರು ಕಂಕಣ ತೊಡಬೇಕು. ಅವರೇ ಕೊಡದಿದ್ದರೆ ಈ ಸಮಸ್ಯೆ ತನ್ನಿಂದ ತಾನೇ ಇಲ್ಲವಾಗುತ್ತದೆ ಎಂದು ಅಭಿಪ್ರಾಯಪಟ್ಟರು. ಈ ಆಧುನೀಕರಣದಿಂದ ಮಧ್ಯಮವರ್ಗಗಳ ಹಾವಳಿ ಕಡಿಮೆಯಾಗಿದೆ. ಸಾರ್ವಜನಿಕರಿಂದ ಬರುವ ದೂರುಗಳು ಗಣನೀಯ ಪ್ರಮಾಣದಲ್ಲಿ ಇಳಿಮುಖವಾಗಿವೆ," ಇದು ಅವರ ಉತ್ತರ. ಇಲ್ಲಿಯ ವ್ಯವಸ್ಥೆಯನ್ನು ಕಣ್ಣಾರೆ ಕಂಡ ನಂತರ ಖಂಡಿತ ನಿಜ ಎನಿಸುತ್ತದೆ.

ಸಾರ್ವಜನಿಕರಿಗೆ ನೇರವಾಗಿ ನೆರವಾಗುವ ಹಾಗೂ ಸಿಬ್ಬಂದಿಗೂ ಅವರ ಕೆಲಸ ಹಗುರವಾಗಿ ನಡೆಯುವಂತಿರುವ ಈ ಪದ್ಧತಿ ರಾಜ್ಯದ ಎಲ್ಲಾ ಕಚೇರಿಗಳಲ್ಲೂ ಜಾರಿಗೆ ಬರಬೇಕು. ಅಧಿಕಾರಿಗಳು ಜನರಿಗಾಗಿ ತಾವಿದ್ದೇವೆ ಎಂಬುದನ್ನು ಅರಿತಲ್ಲಿ ಈ ಕೆಲಸ ಸುಲಭಸಾಧ್ಯ. ✡



# ಜೊಸೆಫ್ ಪುಲಿಟ್ಜರ್

## ಪತ್ರಿಕಾ ಪ್ರಪಂಚದ ಪ್ರಕಾಶಪುಂಜ

**ಟಿ. ವಿ. ನಾಗಳದ**

ಪ್ರತಿಷ್ಠಿತ ಮತ್ತು ಪ್ರತಿಭಾನ್ವಿತ ಸೇವೆ ಸಲ್ಲಿಸಿದ ಪತ್ರಿಕೆಗೆ, ಅತ್ಯುತ್ತಮ ವರದಿ ಸಲ್ಲಿಸಿದ ಶ್ರೇಶ್ಠ ವರದಿಗಾರನಿಗೆ, ನಿಷ್ಪಕ್ಷಪಾತ ಹಾಗೂ ನಿರ್ಭೀತ ಸಂಪಾದಕೀಯ ಬರೆದ ಸಂಪಾದಕನಿಗೆ, ಸೃಜನಶೀಲ ವ್ಯಂಗ್ಯಚಿತ್ರಕಾರನಿಗೆ, ಅತ್ಯುತ್ತಮ ಛಾಯಾಚಿತ್ರಕಾರನಿಗೆ, ಅಮೇರಿಕದ ಇತಿಹಾಸ ಕುರಿತಾದ ಶ್ರೇಷ್ಠ ಕೃತಿಕಾರನಿಗೆ ಪ್ರತಿ ವರ್ಷವೂ ಪುಲಿಟ್ಜರ್ ಬಹುಮಾನಗಳನ್ನು ಕೊಡಲಾಗುತ್ತದೆ. ಶ್ರೇಷ್ಠ ಕವಿಗಳನ್ನೂ ಸಂಗೀತಗಾರರನ್ನೂ ಈ ಬಹುಮಾನಿತರ ಪಟ್ಟಿಯಲ್ಲಿ ಸೇರಿಸುವುದಕ್ಕೆ ಮರೆಯುವುದಿಲ್ಲ. ಸ್ಕೂಲ್ ಆಫ್ ಜರ್ನಾಲಿಸಂ ಸಲಹಾ ಮಂಡಳಿಯ ಶಿಫಾರಸಿನ ಮೇರೆಗೆ ಕೋಲಂಬಿಯಾ ವಿಶ್ವವಿದ್ಯಾಲಯ ಟ್ರಸ್ಟಿಗಳಿಂದ ಈ ಪ್ರಖ್ಯಾತ ಬಹುಮಾನಗಳನ್ನು ಕೊಡಲಾಗುತ್ತದೆ.

ಈ ಅತ್ಯಾಕಾಂಕ್ಷಿತ ಬಹುಮಾನಗಳ ಹಿಂದಿರುವ ಚೇತನ ಜೋಸೆಫ್ ಪುಲಿಟ್ಜರ್. ಈತ ೧೯೦೩ ರಲ್ಲಿ ಕೋಲಂಬಿಯಾ ವಿಶ್ವವಿದ್ಯಾಲಯದಲ್ಲಿ ಸ್ಕೂಲ್ ಆಫ್ ಜರ್ನಾಲಿಸಂ ಸ್ಥಾಪಿಸಿ ಬಹುಮಾನಗಳನ್ನು ವ್ಯವಸ್ಥೆಗೊಳಿಸಿದ. ಕೈಯಲ್ಲಿ ಬಿಡಿಗಾಸೂ ಇಲ್ಲದೆ ತನ್ನ ಜೀವನ ಪ್ರಾರಂಭಿಸಿದ ಈತ ತನ್ನ ಸುತ್ತಲೂ ವರ್ತಮಾನ ಪತ್ರಿಕೆಗಳ ವಿಶಾಲ ಸಾಮ್ರಾಜ್ಯವನ್ನೇ ಕಟ್ಟುವುದರ ಮೂಲಕ ವೈಯಕ್ತಿಕ ಸಾಮರ್ಥ್ಯ, ಸಾಧನೆಯ ಖ್ಯಾತಿಯ ಶಿಖರವನ್ನೇರಿದ. ಕೇವಲ ಶ್ರಮ, ನಿರಂತರ ಸಾಧನೆ, ಕರ್ತವ್ಯದಲ್ಲಿ ಅಚಲ ನಿಷ್ಠೆಗಳಿಂದ ಸಾಧನೆ ಮತ್ತು ಸಂಪತ್ತಿನ ಶ್ರೇಷ್ಠತೆಯನ್ನೇ ಅಳೆದ ಈತ ಹಂಗೇರಿಯ ಮೇಕ್‌ನಲ್ಲಿ ೧೮೪೭ರ ಎಪ್ರಿಲ್ ೧೦ ರಂದು ಜನಿಸಿದ. ಈತನ ತಂದೆ ಒಬ್ಬ ಯಹೂದ್ಯ. ತಾಯಿ ಕ್ರಿಶ್ಚಿಯನ್. ತಂದೆ ತಾಯಿಗಳ ಕಡು ಬಡತನದಿಂದಾಗಿ ತನ್ನ ಜೀವನವನ್ನು ತಾನೇ ರೂಪಿಸಿಕೊಳ್ಳಬೇಕಾಯಿತು.

ಹದಿನೇಳು ವರ್ಷದ ಪುಲಿಟ್ಜರ್ ಸಣಕಲು ದೇಹದ ದುರ್ಬಲ ಯುವಕನಾಗಿದ್ದ. ಹೇಗಾದರೂ ಬದುಕಬೇಕೆಂಬ ಹತಾಶ ಹಂಬಲದಿಂದ ಲಂಡನ್ ಪಟ್ಟಣ ಸೇರಿದ. ಉದ್ಯೋಗಕ್ಕಾಗಿ ಅಲ್ಲಿಯ ಬೀದಿ ಬೀದಿ ಅಲೆದ. ಬ್ರಿಟಿಶ್ ಸೈನ್ಯಕ್ಕೆ ಭರ್ತಿಗೊಳ್ಳಲು ಸದೃಢ ಕಾಯದ ತರುಣರನ್ನು ಆಮಂತ್ರಿಸುವ ಪ್ರಕಟಣೆಯನ್ನು ಓದಿದ. ಕಚೇರಿಯೊಳಗೆ ನುಗ್ಗಿದ. ಸೈನ್ಯಕ್ಕೆ ಭರ್ತಿ ಮಾಡಿಕೊಳ್ಳುವ ಅಧಿಕಾರಿಗಳು ದೇಟಿನಂತೆ

ಬೆಳೆದ ತೆಳು ದೇಹದ ಈ ತರುಣನನ್ನು ಕಂಡು ನಕ್ಕರು. ಅವರಲ್ಲಿ ಒಬ್ಬನು, "ಏನಯ್ಯಾ, ಜೋರಾಗಿ ಗಾಳಿ ಬೀಸಿದರೆ ಹಾರುವುದಿಲ್ಲ ಎಂಬ ಭರವಸೆ ನಿನಗೆ ಇದೆಯಾ?" ಎಂದು ಗಟ್ಟಿಯಾಗಿ ನಕ್ಕ ಕೂಡಾ. ಅಧಿಕಾರಿಗಳು ಪುಲಿಟ್ಜರ್‌ನಿಗೆ ನೇರವಾಗಿ ಬಾಗಿಲನ್ನು ತೋರಿಸಿದರು.

ನೆಲೆ ತಪ್ಪಿದ ನಿರ್ಗತಿಕನಾಗಿ ಕೊನೆಗೆ ಅಮೇರಿಕ ಸಂಯುಕ್ತ ಸಂಸ್ಥಾನಕ್ಕೆ ಆಗಮಿಸಿದ. ಪ್ರಾಮಾಣಿಕತೆ, ಕಳಕಳಿ ಹಾಗೂ ಕರ್ತವ್ಯದ ಬಗ್ಗೆ ಲವಲವಿಕೆಯನ್ನು ಇವನಲ್ಲಿ ಗುರುತಿಸಿದ ಒಬ್ಬರ ಸಹಾಯದಿಂದ ಅಮೇರಿಕದ ಅಂತಃಕಲಹ ಸಂದರ್ಭದಲ್ಲಿ ಕಾರ್ಲ್ ಶುಚ್‌ನಿಂದ ಸ್ಥಾಪಿಸಲ್ಪಟ್ಟ ಮೊದಲನೆ ನ್ಯೂಯಾರ್ಕ್ ಅಶ್ವದಳದಲ್ಲಿ ಸಾಮಾನ್ಯ ನೌಕರನಾಗಿ ಸೇರಿಕೊಂಡ. ಅಂತಃಕಲಹ ಮುಗಿದ ಮೇಲೆ ಮತ್ತೆ ಪುಲಿಟ್ಜರ್‌ನನ್ನು ಹೊರ ಹಾಕಲಾಯಿತು. ಆ ತರುವಾಯ ಬದುಕಲು ಪುಲಿಟ್ಜರ್ ಪಟ್ಟ ಬವಣೆ ಎಂಥ ಕಡು ವೈರಿಗೂ ಬೇಡ.



"ಏ...ಮಾರಾಯ್ತಿ...ಪಾಪು ಪುಸ್ತಕಾ ಕಳ್ಕೊಂಡು ಬಂದಾನಂತ ನನ್ನ ಮುಂದ ಹೇಳಿದ್ರ ನಾನೇ-ನ್ಮಾಡ್ಲಿ ? ಇನ್ನೊಂದು ಕೇಳಿದ್ರ ಸಾಲ್ಯಾಗ ಕೊಡಂಗಿಲ್ಲ...ಕೊಂಡು ತಂದೇನಂದ್ರ ಅಂಗಡ್ಯಾಗ ಸಿಂಗಂಗಿಲ್ಲ...ಒಟ್ಟಿನ ಮೇಲ 'ನಾ ಕೊಡಂಗಿ' ಅಷ್ಟೇ..."

## ಶುಕ್ರದೆಶೆ

ನೊಂದು ನಿರಾಶನಾದ ಪುಲಿಟ್ಜರ್ ಮತ್ತೆ ಮತ್ತೆ ಕಾರ್ಲ್ ಶುಚ್‌ರ ಮೊರೆ ಹೊಕ್ಕ. ಕಾರ್ಲ್ ಶುಚ್ ಪುಲಿಟ್ಜರ್‌ನನ್ನು ತನ್ನ ಪತ್ರಿಕೆಯೊಂದರಲ್ಲಿ ವರದಿಗಾರನನ್ನಾಗಿ ನೇಮಕ ಮಾಡಿಕೊಂಡ. ಉತ್ಕೃಷ್ಟ ವರದಿಗಳಿಂದಾಗಿ ಕಾರ್ಲ್ ಶುಚ್‌ನ ವಿಶೇಷ ಮೆಚ್ಚುಗೆಗೆ ಪಾತ್ರನಾದ. ಅಲ್ಲಿಂದ ಆತನ ಶುಕ್ರದೆಶೆ ಪ್ರಾರಂಭವಾಯಿತೆಂದೇ ಹೇಳಬೇಕು. ಉಪಯುಕ್ತ ವರದಿ ಹಾಗೂ ವಿಶಿಷ್ಟ ಶೈಲಿಯಿಂದಾಗಿ ತ್ವರಿತಗತಿಯಲ್ಲಿ ಬಡ್ತಿ ಹೊಂದುತ್ತ ನಡೆದ. ಇತರ ಪತ್ರಿಕೆಗಳಿಗೆ ಲೇಖನ ಕೊಡಲು ಕಾರ್ಲ್ ಶುಚ್‌ನಿಂದ ಅನುಮತಿಯೂ ಸಿಕ್ಕಿತು. ಇದರಿಂದಾಗಿ ತನ್ನ ಲೇಖನಗಳಿಂದ ಬರುತ್ತಿದ್ದ ಸಂಭಾವನೆಯಿಂದ ಸ್ವಲ್ಪ ಹಣ ಸಂಗ್ರಹವಾಗಲು ಸಹಾಯಕವಾಯಿತು. 'ವೆಸ್ಟ್-ಲಿಚ್ ಪೋಸ್ಟ್' ಪತ್ರಿಕೆಯ ಭಾಗಶಃ ಮಾಲಿಕತ್ವ ಪಡೆದುಕೊಂಡಾಗ ಪುಲಿಟ್ಜರ್‌ನಿಗೆ ಕೇವಲ ೩೧ ವರ್ಷ ವಯಸ್ಸು. ತೀರಾ ಶೋಚನೀಯ ರೀತಿಯ ಆರ್ಥಿಕ ಮುಗ್ಗಟ್ಟಿನಲ್ಲಿದ್ದ ಪತ್ರಿಕೆಯನ್ನು ಮರು ಸಂಘಟನೆಗೊಳಿಸಿ ಪುನಶ್ಚೇತನಗೊಳಿಸುವುದರ ಮೂಲಕ ಒಂದೇ ವರ್ಷದಲ್ಲಿ ನಿರೀಕ್ಷೆ ಮೀರಿ ಲಾಭ ಗಳಿಸಿದ.

ಅಲ್ಪಾವಧಿಯಲ್ಲೇ ಆಂಗ್ಲ ಭಾಷೆಯ ಮೇಲೆ ಅಗಾಧ ಪ್ರಭುತ್ವ ಪಡೆದ. ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡ. ೧೮೬೯ ರಲ್ಲಿ ರಿಪಬ್ಲಿಕನ್ ಪಕ್ಷದಿಂದ ರಾಜ್ಯ ಶಾಸನ ಸಭೆಗೆ ಚುನಾಯಿತನಾದ. ಆ ತರುವಾಯ ಡೆಮಾ

ಕ್ರಟಿಕ್ ಪಕ್ಷ ಸೇರಿದ. ೧೮೭೪ ರಲ್ಲಿ ಕಾನೂನು ಪರೀಕ್ಷೆ ಪಾಸಾದ. ವಾಷಿಂಗ್ಟನ್ (ಡಿ. ಸಿ.) ನಲ್ಲಿ ವಕೀಲನಾಗಿ ಪ್ರಾಕ್ಟೀಸ್ ಪ್ರಾರಂಭಿಸಿದ. ಜೊತೆಗೆ 'ನ್ಯೂಯಾರ್ಕ್ ಸನ್' ಪತ್ರಿಕೆಗೆ ಪತ್ರಕರ್ತನಾಗಿ ಕೆಲಸ ಮಾಡುತ್ತಿದ್ದ.

೧೮೭೮ರಲ್ಲಿ 'ಸೇಂಟ್ ಲೂಯಿ ಪೋಸ್ಟ್' ಮತ್ತು 'ಇವನಿಂಗ್ ಪೋಸ್ಟ್' ಕೊಂಡುಕೊಂಡ. 'ಪೋಸ್ಟ್ ಡಿಸ್ಪ್ಯಾಚ್' ಪತ್ರಿಕಾಲಯವನ್ನು ಕೊಂಡುಕೊಂಡದ್ದೂ ೧೮೭೮ರಲ್ಲೇ. ಅಲ್ಲಿಂದ ಊರ್ಜಿತಾವಸ್ಥೆಗೊಂಡ ಪುಲಿಟ್ಜರ್, ೧೮೮೩ರಲ್ಲಿ 'ಜೆ ಗೌಲ್ಡ್' ಪತ್ರಿಕೆ ಮಾಲಕತ್ವ ವಹಿಸಿಕೊಂಡು. ಶಿಥಿಲಗೊಂಡಿದ್ದ ಅದರ ಪ್ರಸಾರವನ್ನು ಸ್ವಲ್ಪೇ ಅವಧಿಯಲ್ಲಿ ಚುರುಕುಗೊಳಿಸಿ ಜನಪ್ರಿಯಗೊಳಿಸಿದ. ಸರಕಾರದ ಲಂಚ, ಭ್ರಷ್ಟಾಚಾರದ ಹಗರಣಗಳನ್ನು, ತುಳಿತಕ್ಕೊಳಗಾದವರ ಶೋಷಣೆಯ ವಿರುದ್ಧ ಉಗ್ರವಾಗಿ ಪ್ರತಿಭಟಿಸುವ ಲೇಖನಗಳಿಗೆ ಈತನ ಪತ್ರಿಕೆಗಳಲ್ಲಿ ವಿಶೇಷ ಪುರಸ್ಕಾರ ದೊರೆಯುತ್ತಿತ್ತು.

## ಪರಿಶ್ರಮ ಜೀವಿ

೧೮೯೦ರ ತರುವಾಯ ಪುಲಿಟ್ಜರ್‌ನ ಆರೋಗ್ಯ ಕೆಡತೊಡಗಿತು. ದೃಷ್ಟಿಮಾಂದ್ಯ ಹೆಚ್ಚತೊಡಗಿತು. ಆದರೂ ತನ್ನ ಪತ್ರಿಕೆಗಳಿಗೆ ಸಂಪಾದಕೀಯ ಬರೆಯುವುದನ್ನು ಮಾತ್ರ ಕೈಬಿಡಲಿಲ್ಲ. ಆರೋಗ್ಯ ಮತ್ತಷ್ಟು ಹದಗೆಟ್ಟಾಗ ಪತ್ರಿಕೆಗಳ ನೇರ ವ್ಯವಸ್ಥಾಪಕ ಹೊಣೆಯನ್ನು ಬಿಟ್ಟು ಕೊಟ್ಟು ಕೇವಲ ಪತ್ರಿಕಾ ಧೋರಣೆ ನಿಯಂತ್ರಣ ನಿರ್ವಹಿಸತೊಡಗಿದ. ಕಡು ಬಡವನಾಗಿದ್ದ ಪುಲಿಟ್ಜರ್ ನಲವತ್ತನೆ ವಯಸ್ಸಿನಲ್ಲಿ ಕೋಟ್ಯಾಧೀಶನಾಗಿದ್ದ. ಪುಲಿಟ್ಜರ್ ಪೂರ್ಣ ಕುರುಡನಾದ ಮೇಲೆ ತನ್ನ ಪತ್ರಿಕೆಯ ನಿತ್ಯ ಕಾರ್ಯ ನಿರ್ವಹಣೆಗೆ ಕಾರ್ಯದರ್ಶಿ ಮಂಡಳಿಯನ್ನು ರಚಿಸಿಕೊಂಡ. ಅವರೇ ಅವನಿಗೆ ಕಣ್ಣಾಗಿದ್ದರು. ಆದರೆ ಮೆದುಳು ಮಾತ್ರ ಪುಲಿಟ್ಜರ್‌ನದೇ.

ಪುಲಿಟ್ಜರ್ ಸ್ವತಂತ್ರ ವಿಚಾರ ಮತ್ತು ಅಭಿವ್ಯಕ್ತಿಯ ಸ್ವಂತಿಕೆಯನ್ನು ಮಾತ್ರ ಬಲು ಜತನದಿಂದ ಉಳಿಸಿಕೊಂಡಿದ್ದ. ಈತನ ಕಾರ್ಯದರ್ಶಿ ಮಂಡಳಿ ಭಾರಿ ವಿದ್ವಾಂಸರನ್ನೊಳಗೊಂಡಿತ್ತು. ಅವರಲ್ಲಿ ಪ್ಯಾಟರ್ಸನ್ ಎಂಬ ಒಬ್ಬ ಕಾರ್ಯದರ್ಶಿಯಂತೂ ನಡೆದಾಡುವ ವಿಶ್ವಕೋಶವೇ ಆಗಿದ್ದ. ಪ್ರಪಂಚದ ಪ್ರತಿಯೊಂದು ದೇಶ ಕುರಿತಾದ ಮಾಹಿತಿಗಳನ್ನು ನಿರರ್ಗಳವಾಗಿ ನಿರಾಯಾಸವಾಗಿ ನೀಡಬಲ್ಲವನಾಗಿದ್ದ. ಘಟನೆ, ವರ್ಷಗಳನ್ನು ಚಾಚೂ ತಪ್ಪದೆ ಹೇಳಬಲ್ಲವನಾಗಿದ್ದ.

ಪುಲಿಟ್ಜರ್ ಸ್ವತಃ ಪರಿಶ್ರಮಜೀವಿ. ತಾನೂ ದುಡಿದ, ತನ್ನ ಸಂಗಾತಿಗಳನ್ನೂ ದುಡಿಸಿದ. ಪತ್ರಿಕಾ ಪ್ರಪಂಚದಿಂದ ಅವನು ಕೊಂಡದ್ದಕ್ಕಿಂತಲೂ ಕೊಟ್ಟದ್ದೇ ಹೆಚ್ಚು. ಅವನ ಜ್ಞಾನ ಅಪಾರ. ವಿಷಯವ್ಯಾಪ್ತಿ ಅಚ್ಚರಿ ಪಡುವಷ್ಟು ಅಗಾಧ.

೧೯೧೧ರ ಶರದೃತುವಿನಲ್ಲಿ ಪುಲಿಟ್ಜರ್‌ನ ಹಡಗು ದಕ್ಷಿಣದ ಕಡೆ ತೇಲುತ್ತಿತ್ತು. ಅಕ್ಟೋಬರ್ ೨೯ರ ಮುಂಜಾನೆ ದಕ್ಷಿಣದ ಕೆರೊಲಿನಾದ ಚಾರ್ಲ್‌ಸ್ಟನ್ ಬಂದರದಲ್ಲಿ ಹಡಗು ನಿಂತಿತು. ಪುಲಿಟ್ಜರ್‌ನ ಕಾರ್ಯದರ್ಶಿ ಅಲೀನ್ ಐರ್ಲಂಡ್ ಪತ್ರಿಕೆಗಳನ್ನು ಅವನಿಗಾಗಿ ಓದಿ ಹೇಳಿದ. ಪುಲಿಟ್ಜರ್ ತುಂಬಾ ಬಳಲಿದಂತೆ ಕಾಣುತ್ತಿದ್ದ. ಆದಾಗ್ಯೂ ಆಸಕ್ತಿಯಿಂದ ಪತ್ರಿಕಾ-ವರದಿಯ ಓದನ್ನು ಕೇಳಿದ. ಆ ತರುವಾಯ ವಿಶ್ರಾಂತಿ ಪಡೆಯಲು ಮಲಗಿದ ಪುಲಿಟ್ಜರ್ ಮತ್ತೆ ಮೇಲೇಳಲೇ ಇಲ್ಲ.

ಪುಲಿಟ್ಜರ್ ಪತ್ರಿಕಾ ಪ್ರಪಂಚದ ಪ್ರಕಾಶ ಪುಂಜ. ✡



# ಇದುವೆ ಜೀವ ಇದು ಜೀವನ

ನಾನು ತುಂಬ ದಿನಕ್ಕೆ ನನ್ನ ಸ್ನೇಹಿತೆಯ ಮನೆಗೆ ಹೋಗಿದ್ದೆ. ನನ್ನನ್ನು ನೋಡಿ ತುಂಬ ಸಂತೋಷಪಟ್ಟಳು. ಕುಳಿತುಕೊ ಈಗ ಬಂದೆ ಅಂತ ಹೇಳಿ ಅಡಿಗೆ ಮನೆ ಸೇರಿದಳು.

ನಾನು ಏನನ್ನೋ ನೋಡುತ್ತ ಅವಳ ಮನೆಯಲ್ಲಿದ್ದ ಕ್ಯಾಲೆಂಡರ್ ನೋಡಿ ಆಶ್ಚರ್ಯಪಟ್ಟೆ. ಸುಮಾರು ಕಡೆ ಚಡ್ಡಿ, ಲಂಗ, ಚಡ್ಡಿ, ಲಂಗ ಅಂತ ಬರೆದಿತ್ತು. ಒಂದೆರಡು ಕಡೆ ಸೀರೆ ಅಂತ ಬರೆದಿತ್ತು. ಏನಿರಬಹುದು ಅಂತ ಯೋಚನೆ ಮಾಡಿದೆ. ಸ್ನೇಹಿತೆ ಬಟ್ಟೆಗಳನ್ನೇನೋ ಮನೆಯಲ್ಲಿಯೇ ಹೊಲೆಯುತ್ತಾಳೆ ಹೌದು. ಆದರೆ ಕ್ಯಾಲೆಂಡರ್ ಮೇಲೆ ಬರೆಯುವ ಅಗತ್ಯ ಕಾಣುವದಿಲ್ಲ. ಏನೋ ನನಗ್ಯಾಕೆ ಅಂತ ಅಂದುಕೊಂಡರೂ ತುಂಬ ತವಕಪಟ್ಟೆ ಅನಿಸಿತು.

ನನ್ನ ಸ್ನೇಹಿತೆ ಬಿಸಿ ಬಿಸಿ ಕಾಫಿ ತಿಂಡಿ ತೆಗೆದುಕೊಂಡು ಬಂದಳು. "ಇಬ್ಬರೂ ಚೆನ್ನಾಗಿ ತಿಂದಿದ್ದಾಯ್ತು, ಇಷ್ಟೊತ್ತು ನಿನ್ನನ್ನೆ ಒಬ್ಬಳ್ನೇ ಕೂಡಿಸಿಬಿಟ್ಟೆ, ಬೋರಾಯ್ತೇನೋ ನಿನಗೆ" ಅಂದಳು. ಇಲ್ಲಮ್ಮ ಇನ್ನೂ ತವಕಪಟ್ಟೆ ಅನಿಸಿತು. ಗೋಡೆ ಮೇಲೆ ತೂಗಿ ಹಾಕಿರುವ ವಸ್ತುಗಳನ್ನೇ ನೋಡ್ತಾನೋಡ್ತಾ ಆ ಕ್ಯಾಲೆಂಡರ್ ಮೇಲಿರೋ ಚಡ್ಡಿ ಲಂಗ ಸೀರೆ ಅಂತ ಸುಮಾರು ಕಡೆ ಬರೆದಿರೋದು ನೋಡಿ ನಗು ಬಂತು. ಏನು ನಿನಗೆ ಜ್ಞಾಪಕ ಇರಲಿ, ಅಂತ ಬಟ್ಟೆ ಹೊಲಿಯೋದಕ್ಕೆ ಹಾಗೆ ಬರೆದಿದೀಯೋ? ಆದರೂ ನಿಂಗೇನೂ ಅಂತಹ ಮರೆವಿಲ್ಲ ಬಿಡು. ಮತ್ತೆ ಹೊಲದ್ದೊಲದು ಅದೆಷ್ಟು ಚಡ್ಡಿ ಲಂಗ ಹೊಲೀತಿಯಾ? ಮಧ್ಯ ಮಧ್ಯ ಸೀರೆ ಅಂತಲೂ ಇದೆ, ಏನದು?" ಅಂತ ಕೇಳಿದಾಗ ಅವಳು ಜೋರಾಗಿ ನಕ್ಕಳು. "ಹಾಲಿನ ಲೆಕ್ಕ ಕಣೆ, ಹಾಲು ಕೊಡುವವರು ಇಬ್ಬರು. ಅದರಲ್ಲಿ ಒಬ್ಬನು ಹಾಫ್ ಪ್ಯಾಂಟ್ ಹಾಕಿಕೊಳ್ಳುತಾನೆ. ಅವನಿಗೆ ಎಲ್ಲರೂ ಚಡ್ಡಿಯವನು ಅಂತಾರೆ. ಮತ್ತೊಂದು ಹುಡುಗಿ ಲಂಗದವಳು. ಮತ್ತೆ ಮಧ್ಯ ಕೆಲವು ಸಲ ಯಾರೋ ಬಂದಾಗ ಇನ್ನೊಬ್ಬಳಿಂದ ಹಾಲು ತೆಗೆದುಕೊಂಡೆ; ಅವಳು ಸೀರೆಯವಳು. ಹೀಗೆ ಹುಡುಗರಿಗೆ ಹಾಲಿನ ಲೆಕ್ಕ ಇಡಿ ಅಂತ ಒಪ್ಪಿಸಿದರೆ ಅವರ ಕೆಲ್ಸ ನೋಡು" ಅಂದಳು.

-ಬಿ. ಜಿ. ವಿಜಯ

ಬ್ಯಾಂಕ್ ಉದ್ಯೋಗಿಗಳಿಗೆ ವರ್ಗಾವಣೆ ಹಾಗೂ ಬಡ್ತಿ ಸರ್ವೇಸಾಮಾನ್ಯ. ನನಗೂ ೧೯೮೫ರ ಆರಂಭದಲ್ಲಿ ಬಡ್ತಿ ಸಿಕ್ಕಿ ಬೆಳಗಾವಿಯಿಂದ ದೂರದ ಪಂಜಾಬ್ ರಾಜ್ಯದ ಪತಿಯಾಲಕ್ಕೆ ವರ್ಗವಾಯಿತು. ಜೀವದ ಮೇಲಿನ ಆಸೆ ತೊರೆದು ಫೆಬ್ರುವರಿ ೬ ರಂದು ಕೆಲಸಕ್ಕೆ ಹಾಜರಾದೆನು.

ಅಮೃತಸರದ ಸ್ವರ್ಣದೇವಾಲಯದ ಮೇಲೆ ಸೈನಿಕ ಕಾರ್ಯಾಚರಣೆ. ಇಂದಿರಾ ಗಾಂಧಿಯವರ ಹತ್ಯೆ, ತದನಂತರ ದೆಹಲಿ ಮುಂತಾದ ಉತ್ತರ ಭಾರತದ ನಗರಗಳಲ್ಲಿ ಸಿಖ್ಖರ ಸಾಮೂಹಿಕ ನರಹತ್ಯೆಗಳು ಮನಸ್ಸಿನಲ್ಲಿ ಹಚ್ಚಹಸುರಾಗಿತ್ತು. ಬಸ್ಸಿನಿಂದ ಹಿಂದೂ ಪ್ರಯಾಣಿಕರನ್ನು ಇಳಿಸಿ ಗುಂಡಿಟ್ಟು ಕೊಂದ ಸಿಖ್ ಉಗ್ರಗಾಮಿಗಳ ಹೀನ ಕೃತ್ಯವೂ ನೆನಪಿನಿಂದ ಮಾಸಿರಲಿಲ್ಲ. ಹಾಗಾಗಿ ಸಿಖ್ಖರ ಮೇಲೆ ಒಂದು ರೀತಿಯ ಅಪನಂಬಿಕೆ ಉಂಟಾಗಿತ್ತು.

ಕೆಲಸಕ್ಕೆ ಹಾಜರಾದ ಎರಡನೆಯ ದಿನ ಅಂದರೆ ಫೆಬ್ರುವರಿ ೭ ರಂದು ನನ್ನ ಸಹೋದ್ಯೋಗಿಯೊಬ್ಬರ ಮನೆಯಲ್ಲಿ ರಾತ್ರಿಯ ಊಟವನ್ನು ಪೂರೈಸಿ, ತಾತ್ಕಾಲಿಕವಾಗಿ ವಾಸವಾಗಿದ್ದ ನಮ್ಮ ಶಾಖಾಧಿಕಾರಿಗಳ ಮನೆಯತ್ತ ಹೊರಟೆವು. ಆಗ ರಾತ್ರಿ ೮-೩೦ರ ಸಮಯ. ಅಂದು ನನ್ನೊಂದಿಗೆ ಹುಬ್ಬಳ್ಳಿಯಿಂದ ಬಡ್ತಿ ಹೊಂದಿ ಬಂದಿದ್ದ ನನ್ನ ಸಹೋದ್ಯೋಗಿಯೂ ಇದ್ದರು. ಅವರು ಸಹ ನನ್ನಂತೆಯೇ ಆ ಸ್ಥಳಕ್ಕೆ ಹೊಸಬರು. ರಾತ್ರಿಯ

ಸಮಯವಾದುದರಿಂದ ಶಾಖಾಧಿಕಾರಿಗಳ ಮನೆಗೆ ಹೋಗುವ ದಾರಿ ತಪ್ಪಿತು. ಜೊತೆಗೆ ನಾವು ರಾತ್ರಿಯ ಊಟವನ್ನು ಪೂರೈಸಿದ ನನ್ನ ಸಹೋದ್ಯೋಗಿಯ ಮನೆಗೆ ಹೋಗುವ ದಾರಿಯೂ ತಪ್ಪಿ ಹೋಯಿತು. ಅವರ ಮನೆಯ ವಿಳಾಸವೂ ಗೊತ್ತಿರಲಿಲ್ಲ.

ನಾವು ದಾರಿ ತಪ್ಪಿ ಸಿಕ್ಕಿಹಾಕಿಕೊಂಡಿದ್ದ ಸ್ಥಳದಲ್ಲಿ ಸಿಖ್ ಬಾಂಧವರೆ ಹೆಚ್ಚಾಗಿದ್ದರು. ಅಲ್ಲಿಯೇ ಅಡ್ಡಾಡುತ್ತಿದ್ದ ಒಂದಿಬ್ಬರು ಸಿಖ್ ಯುವಕರನ್ನು ಸಂಧಿಸಿ ಮನೆಯ ನಂಬರ್ ಹೇಳಿ ದಾರಿ ತೋರಿಸುವಂತೆ ಕೇಳಿದೆವು. ಅವರು ಪಂಜಾಬಿ ಮಿಶ್ರವಾದ ಹಿಂದಿಯಲ್ಲಿ ಒಂದು ದಿಕ್ಕಿಗೆ ಕೈ ತೋರಿಸಿದರು. ಜೊತೆಗೆ ಅವರ ಬಾಯಿಂದ ಕಟುವಾದ ಆಲ್ಕೊಹಾಲಿನ ವಾಸನೆಯು ಬರುತ್ತಿತ್ತು. ಹಾಗಾಗಿ ನಮ್ಮ ಎದೆಬಡಿತ ಜಾಸ್ತಿಯಾಗಿ ಅನಾವಶ್ಯಕ ಗಾಬರಿಯಾಗಿ ವಾತಾವರಣದ ಚಳಿಯಲ್ಲಿಯೇ ಹೆದರಿಹೋಗಿ ಮೈ ಬೆವರಲಾರಂಭಿಸಿತು. ನಂತರ ನಾವು ಜಾಗರೂಕರಾಗಿ ದಾರಿಯಲ್ಲಿ ಸಿಕ್ಕಿದ ಹಿಂದೂ ದಾರಿಹೋಕರನ್ನೇ ಪ್ರಶ್ನಿಸಲಾರಂಭಿಸಿದೆವು. ಹಾಗೂ ಹೀಗೂ ಮುಂದುವರಿದು ಮುಖ್ಯ ರಸ್ತೆಗೆ ಬಂದೆವು. ಆದರೆ ನಾವು ತಲಪಬೇಕಾದ ಸ್ಥಳಕ್ಕೆ ಹೋಗಲಾಗಲಿಲ್ಲ.

ವೇಳೆ ಸರಿಯುತ್ತಿತ್ತು. ಆ ದಿನಗಳಲ್ಲಿ ಇಡೀ ಪಂಜಾಬ್ ರಾಜ್ಯದಲ್ಲಿ ರಾತ್ರಿ ೧೦ ಗಂಟೆಯಿಂದ ಬೆಳಿಗ್ಗೆ ೬ ಗಂಟೆಯ ವರೆಗೆ ಕರ್ಫ್ಯೂ ಇದ್ದು ಜನಸಂಚಾರ ನಿಷಿದ್ಧವಾಗಿತ್ತು. ಕಾಯಿದೆಯನ್ನು ಉಲ್ಲಂಘಿಸಿದವರನ್ನು ಬಂಧಿಸಿ ಪೋಲಿಸ್ ಠಾಣೆಗೆ ಕರೆದುಕೊಂಡು ಹೋಗಿ ಮೂಳೆ ಮುರಿಯುತ್ತಿದ್ದರು. ಹಾಗಾಗಿ ನಮ್ಮ ತಳಮಳ ಇನ್ನೂ ಜಾಸ್ತಿಯಾಯ್ತು. ಸಮಯ ಕಳೆದು ರಾತ್ರಿ ೧೦ರ ವೇಳೆ ಸಮೀಪಿಸಿತು. ಅನಾವಶ್ಯಕವಾಗಿ ಪೋಲಿಸರಿಂದ ಹೊಡೆತ ತಿನ್ನಬೇಕಲ್ಲ ಎಂದು ದುಃಖವಾಯಿತು. ಆದರೆ ಆ ಸಮಯದಲ್ಲಿ ನಡೆದ ಒಂದು ಘಟನೆ ನನಗೆ ಸಿಖ್ಖರ ಮೇಲಿನ ಅಪನಂಬಿಕೆ ಹೊರಟುಹೋಗಿ ಆತ್ಮೀಯತೆ ಉಂಟಾಗುವಂತೆ ಮಾಡಿತು.

ಅದೇ ಸಮಯದಲ್ಲಿ ಪೋಲೀಸ್ ಜೀಪೊಂದು ಆ ಮಾರ್ಗದಲ್ಲಿ ಬರುತ್ತಿತ್ತು. ನಾವಿಬ್ಬರು ಕೈ ತೋರಿಸಿದಾಗ ಅವರು ಜೀಪನ್ನು ನಿಲ್ಲಿಸಿದರು. ಇಬ್ಬರು ಸಿಖ್ಖರು ಪೋಲೀಸ್ ಬಟ್ಟೆಯಲ್ಲಿ ಇದ್ದರು. ನಾವು ನಮ್ಮ ತೊಂದರೆಯನ್ನು ಅವರಿಗೆ ನಿವೇದಿಸಿ ನಾವು ದೂರದ ಬೆಂಗಳೂರಿನಿಂದ ಬಂದವರೆಂದೂ ಬ್ಯಾಂಕಿನಲ್ಲಿ ಆಫೀಸರ್ ಇದ್ದೇವೆಂದೂ ನಮ್ಮ ಶಾಖಾಧಿಕಾರಿಗಳ ಮನೆ ಎಷ್ಟು ಹುಡುಕಿದರೂ ಸಿಗಲಿಲ್ಲವೆಂದೂ ನಮಗೆ ಗೊತ್ತಿದ್ದ ಹರಕು-ಮುರುಕು ಹಿಂದಿಯಲ್ಲೇ ತಿಳಿಹೇಳಿದೆವು. ಅವರು ನಮ್ಮನ್ನು ಜೀಪ್ ಹತ್ತಲು ಹೇಳಿ, ಪೋಲೀಸ್ ಸಬ್ ಇನ್‌ಸ್ಪೆಕ್ಟರ್ ಸ್ವತಃ ಡ್ರೈವ್ ಮಾಡಲು ಶುರು ಮಾಡಿ, ಅದುವರೆಗೂ ಡ್ರೈವ್ ಮಾಡುತ್ತಿದ್ದ ಪೋಲೀಸರಿಗೆ ಹಿಂದೆ ಕೂಡುವಂತೆ ಹೇಳಿ, ಅಕ್ಕಪಕ್ಕದ ಮನೆಗಳ ಮೇಲೆ ನಿಗಾ ಇಟ್ಟು ನಂಬರ್ ನೋಡುವಂತೆ ಹೇಳಿದರು. ನನಗಿಂದು ಅವರ ಹೆಸರುಗಳು ಮರೆತುಹೋಗಿದೆ. ಆದರೆ ಅರ್ಧ ಗಂಟೆಯ ಹುಡುಕಾಟದ ಮೇಲೂ ಮನೆ ಸಿಗಲಿಲ್ಲ. ಕಡೆಗೆ ಅಲ್ಲಿಯೇ ಅಂಗಡಿಯಲ್ಲಿದ್ದ ಲಾಲಾಜಿಯೊಬ್ಬರನ್ನು ಕರೆದು ಮನೆ ಹುಡುಕುವಂತೆ ಆಜ್ಞೆ ಮಾಡಿದರು. ಆ ಲಾಲಾಜಿಯೇ ಗಾಬರಿಯಿಂದ ಅಂಗಡಿಯ ಬಾಗಿಲು ಹಾಕಿ, ಸೈಕಲ್ ಮೇಲೆ ಮನೆ ಹುಡುಕಲು ಹೊರಟರು. ಅವರಿಗೆ ಮನೆಯ ಸ್ಥಳ ಗೊತ್ತಾಯಿತು. ಕಡೆಗೆ ನಮ್ಮನ್ನು ಅವರ ಜೀಪಿನಲ್ಲಿಯೇ ಕರೆದುಕೊಂಡು ಬಂದು ನಾವು ಉಳಿದುಕೊಂಡ ಮನೆಯಲ್ಲಿ ಇಳಿಸಿದರು. ಕೊನೆಯಲ್ಲಿ ನಾವು Thanks ಹೇಳಿ ಹಸ್ತ ಲಾಘವನಿತ್ತಾಗ ಅದು ತಮ್ಮ ಕರ್ತವ್ಯವೆಂದೂ, ಅದರಲ್ಲೂ ದೂರದ ಮದ್ರಾಸಿಗಳ (ದಕ್ಷಿಣದವರೆಲ್ಲಾ ಅವರ ಪ್ರಕಾರ ಮದ್ರಾಸಿಗಳು) ಬಗ್ಗೆ ತಮಗೆ ಅಭಿಮಾನ ಉಂಟೆಂದೂ ತಿಳಿಸಿ ಹೊರಟು ಹೋದರು. —ರಮೇಶ್

**ಕಥೆ**

# [illegible]

**ಎಸ್. ನಟರಾಜ**

ಉಸ್sss...ಶಿವನೇ" ಅನುತ್ತಾ ನಂಜವ್ವ ಎತ್ತಲಾರದಂಥ ಹಸಿ ಹುಲ್ಲಿನ ಹೊರೆಯನ್ನು ದನದ ಕೊಟ್ಟಿಗೆಗೆ ಹಾಕಿ "ಒಂಚೊಂಬು ನೀರ್ ತತ್ತಾರ್ಲ ಸಿದ್ರಾಮು," ಎನ್ನುತ್ತ ಕಂಬವನ್ನೊರಗಿ ಕುಳಿತಳು. ಸೊಂಟದ ಮೂಳೆಗಳಿಂದ ಹೊರಟ ಕಟ ಕಟ ಶಬ್ದದೊಡನೆಯೇ ದೊಡ್ಡದಾದ ಉಸಿರೂ ಹೊರಬಿತ್ತು. ಬಹಳ ಹೊತ್ತಾದರೂ ಸಿದ್ರಾಮು ಬರದಿದ್ದಾಗ, "ಇದ್ರ ಸೊಲ್ಲಡಗ, ಎಲ್ಲಿ ಕುಣಿಯೊಕೋಗೈತೊ," ಎನ್ನುತ್ತ ತಾನೇ ಒಳಗೋಗಿ ಒಂದು ತಂಬಿಗೆ ನೀರು ಪೂರ್ತಿ ಎತ್ತಿದಾಗ ಸ್ವಲ್ಪ ನೀರು ಎದೆಯ ಮೇಲೂ ಚೆಲ್ಲಿ ಕೆಳಗಿಳಿದು ಒಂದು ರೀತಿ ತಣ್ಣಗಾಯಿತು.

ಸಂಜೆಯಾಗುತ್ತ ಬಂದದ್ದರಿಂದ ಊರ ದನಗಳು ಒಂದೊಂದಾಗಿ ಬರುತ್ತಿದ್ದವು. ಎಳೆಗರು ಇದ್ದ ಹಸುಗಳು 'ಅಂಬಾ' ಎನ್ನುತ್ತಲೇ ದಾಪು ಗಾಲು ಹಾಕಿಕೊಂಡು ಬರುತ್ತಿದ್ದವು. ನಂಜವ್ವನಿಗೆ ಎಮ್ಮೆ ಬಂದಾಕ್ಷಣ ಹಸಿ ಹುಲ್ಲಿಗೆ ರಾಪಾಡುವುದು ನೆನಪಾಗಿ ಕಾಲಿನ ಮೀನ ಖಂಡಗಳು ಇನ್ನೂ 'ತಟ-ತಿಟ' ಎನ್ನುತ್ತಿದ್ದರೂ ಒತ್ತಾಯವಾಗೇ ಎದ್ದಳು. "ಮುಚ್ಚಂಜೆ ಹೊತ್ನಾಗೆ ಇದೆಲ್ಲಿಗೋತೊ," ಎಂದು ಸಿದ್ರಾಮುನನ್ನು ಬಯ್ಯುತ್ತಲೇ ಹುಲ್ಲಿನ ಹೊರೆ ಬಿಚ್ಚಿ ಮಣ್ಣು ಕೊಡವಲಾರಂಭಿಸಿದಳು. ಗದ್ದೆ ಸಸಿ ಹಾಕಲು ಹೋಗಿದ್ದ ಮಗಳು ಗಂಗೆ ಇನ್ನೂ ಬಂದಿರಲಿಲ್ಲ. ವಯಸ್ಸಿಗೆ ಬಂದ ಮಗಳು ಹೀಗೆ ಕೂಲಿ-ನಾಲಿಗೆ ಕಳಿಸುವುದು ನಂಜವ್ವನಿಗೆ ಎಳ್ಳಷ್ಟೂ ಇಷ್ಟವಿರದಿದ್ದರೂ ನಿರ್ವಾಹವಿರಲಿಲ್ಲ. ಒಳ್ಳೆಯ ಗಂಡು ಬಂದರೆ ಬೇಗ ಲಗ್ನ ಮಾಡುವ ಆತುರವೂ ಇತ್ತು. ಅಷ್ಟೇ ಬೇಗ ಮೊಮ್ಮಗುವನ್ನು ಎತ್ತಿಕೊಳ್ಳುವ ಆಸೆ ಕೂಡ.

ಹೊರೆಯ ಮಧ್ಯದಲ್ಲಿದ್ದ ಕ್ಯಾಕರಿಕೆ ಹಣ್ಣು ದುಡು ದುಡು ಉರುಳಿ ಬಂತು. ಹಣ್ಣು ಚೆನ್ನಾಗಿ ಮಾಗಿ ಆಗಲೇ ಒಂದು ಕಡೆ ಬಿಚ್ಚಿಕೊಳ್ಳಲಾರಂಭಿಸಿತ್ತು. ಸಿದ್ರಾಮುನಿಗೆ ಕ್ಯಾಕರಿಕೆ ಹಣ್ಣು ಅಂದ್ರೆ ಜೀವ. ಕ್ಯಾಕರಿಕೆ ಹಣ್ಣುಗಳ ಗಿಡಗಳಿರುವುದು ಕಿಟ್ಟಪ್ಪ ಶೆಟ್ರ ತೋಟದಲ್ಲಿ ಮಾತ್ರ. ಶೆಟ್ರ ತೋಟ ಕಾಯುವ ಮಲ್ಲ,

ಹಣ್ಣಿಗೊಂದು ರೂಪಾಯಿಯಿಲ್ಲದೇ ಕೊಟ್ಟಾನೇ? ಸಿದ್ರಾಮನ ಆಸೆಯ ಕಣ್ಣುಗಳು ನಂಜವ್ವನನ್ನು ಹೇಗಾದರೂ ಮಾಡಿ ಹಣ್ಣೊಂದನ್ನು ಸಂಪಾದಿಸಲು ಪ್ರೇರೇಪಿಸಿದ್ದವು. "ಆನಗೊನೆ ಸೊಪ್ಪು ವೈನಾಗೇತೆ, ಸ್ವಲ್ಪ ಚಿಗುಟ್ಗತೀನಿ ಕಣ್ ಮಲ್ಲಣ್ಣೋ," ಎಂದು ಹೇಳಿ ತೋಟದೊಳಕ್ಕೆ ಪ್ರವೇಶ ಪಡೆದಿದ್ದಳು. "ಹಣ್‌ಗಿಣ್ ಕಿತ್ತೀಯಾ" ಎಂದು ಎಚ್ಚರಿಸಿಯೇ ಒಳಗೆ ಬಿಟ್ಟಿದ್ದ. "ಇಲ್ಕಣಣ್ಣೀಯಾ" ಎಂದು ತೋಟದೊಳಕ್ಕೆ ಹೋಗಿದ್ದರೂ ಉರುಳಾಡುತ್ತಿದ್ದ ಕ್ಯಾಕರಿಕೆ ಹಣ್ಣುಗಳು ಕಣ್ಣಿಗೇ ರಾಚಿದ್ದವು. ತಡೆಯಲಾರದೇ ಸುಮಾರಾಗಿ ದಪ್ಪಗಿದ್ದ ಹಣ್ಣೊಂದನ್ನು ಸೆರಗಿನಲ್ಲಿದ್ದ ಸೊಪ್ಪಿನೊಳಕ್ಕೆ ಸೇರಿಸಿದ್ದಳು.

"ಇದ್ರ ಸೊಲ್ಲಡಗ, ಇಷ್ಟೊತ್ತಾದ್ರೂ ಬರ್‍ಲೇ ಇಲ್ವಲ್ಲಾ," ಎನ್ನುತ್ತಲೇ, ಹೊರಗೆ ಬಂದು, "ಲೇ ಸಿದ್ರಾಮಾ" ಎಂದು ಕೊರಗಿದಳು.

ಐದಾರು ಪಡ್ಡೆ ಹುಡುಗರ ಜೊತೆ ಚಡ್ಡಿ ಬಿಚ್ಚಿ ಕುಳಿತು "ದುಂಡು ಮೇಜಿನ ಪರಿಷತ್ತು" ನಡೆಸುತ್ತಿದ್ದ ಸಿದ್ರಾಮನಿಗೆ ಅವ್ವನ ಕೂಗು ಕೇಳಿಸಿದರೂ 'ಪರಿಷತ್ತು' ಒಳ್ಳೆಯ ಕಾವೇರಿದ



ವಾತಾವರಣದಲ್ಲಿದ್ದುದರಿಂದ, "ಇನ್ನೂ ಆಗಿಲ್ಲ ತಡಿಯುವೋ," ಎಂದು ಅಲ್ಲಿಂದಲೇ ಕೂಗಿದ.

ದಿನವೂ ಸುಮಾರು ಎರಡು ಮೈಲಿ ದೂರದ ರಂಗಾಪುರಕ್ಕೆ ಶಾಲೆಗೆ ಹೋಗಿ ಬಂದ ನಂತರ ಸಿದ್ರಾಮ ೫-೬ ಹುಡುಗರು ಜೊತೆ ಸಂಜೆ "ಚೀಟಿಗೆ" ಹೊರಡುತ್ತಿದ್ದ. ವೀರಭದ್ರ ದೇವರ ಗುಡಿತಾವ ಇರೋ ಜಂ ನೇರಳೇಮರ, ಕೋಟಿ ಮೇಲಿರೋ ಕಾರೇ ಗಿಡಗಳು, ಅಂದಾನಪ್ಪನ ತೋಟದ ಕಾಡುಂಚೇ ಮರ ಎಲ್ಲಾ ತಾಕಲಾಡಿಕೊಂಡು ಬಂದು ಎಲ್ಲಿಯಾದರೂ ದುಂಡು ಮೇಜಿನ ಪರಿಷತ್ತು ನಡೆಸಿ ಬರುತ್ತಿದ್ದರು. ಅಧ್ಯಕ್ಷತೆ ಯಾವಾಗಲೂ ಸಿದ್ರಾಮನದೇ. ಕಾರಣ ರಂಗಾಪುರಕ್ಕೆ ಶಾಲೆಗೆ ಹೋಗುತ್ತಿರುವುದು ಆ ಗುಂಪಿನ ಹುಡುಗರಲ್ಲಿ ಅವನೊಬ್ಬನೇ. ರಂಗಾಪುರದ ಟೆಂಟಿಗೆ ಬಂದಿರುವ 'ಜಗದೇಕ ವೀರನ ಕತೆ,' ರಂಗಾಪುರದ ಸಂತೇಲಿ ಹಾವಾಡಿಗರವನು ಅಂಜನಾ ಹಾಕಿದ್ದು ಹೀಗೆ ಹಲವು ಹತ್ತು ವಿಷಯಗಳು ಅವನಿಗೆ ಸರವತ್ತಾಗಿ ಹೇಳಲು ಸಿಗುತ್ತಿದ್ದವು. ಎಲ್ಲಕ್ಕಿಂತ ಹೆಚ್ಚಾಗಿ ಶಾಸ್ತ್ರಿ ಮೇಷ್ಟ್ರು ಕೊಟ್ಟ ಪೆನ್ನಿನ ವಿಷಯ ಹೇಳುವುದು ಅವನಿಗೆ ತುಂಬಾ ಇಷ್ಟ. ದಿನಾ ಬೇಕೆಂದೇ ಸ್ವಲ್ಪ ಇಂಕನ್ನು ಕೈ ಬೆರಳಿಗೆ ಹಚ್ಚಿಕೊಂಡಿರುತ್ತಿದ್ದ. ಇವನೊಡನಾಡಿಗಳಲ್ಲಿ ಇಂಕು ಪೆನ್ನು ಬಳಸಲು ಅಧಿಕಾರವಿದ್ದುದು ಇವನೊಬ್ಬನಿಗೇ. ಉಳಿದವರೆಲ್ಲ ಮುರುಕು ಬಳಗಡವರೇ. ಅವರೆಲ್ಲ ಇವನ ಕೈ ಬೆರಳಿನ ಇಂಕನ್ನು ನೋಡಿ ಅಸೂಯೆಪಡುತ್ತಿದ್ದಾರೆಂದು ಸಿದ್ರಾಮನಿಗೆ ಗೊತ್ತಿತ್ತು. ಹಾಗಾಗಿ ಬೆರಳಿನಲ್ಲಿ ಇಂಕು ಸ್ವಲ್ಪ ದಟ್ಟವಾಗಿಯೇ ಇರುತ್ತಿತ್ತು.

ಹಳ್ಳಿ ಹುಡುಗರ ಒರಟು ಕೈಗಳಲ್ಲೂ ಕೆಂಪು ಬಣ್ಣ ಕಾಣಿಸುವಂಥ ಏಟುಗಳಿಂದ ಪ್ರಸಿದ್ಧರಾಗಿದ್ದ ಶಾಸ್ತ್ರಿ ಮೇಷ್ಟ್ರು ಸಿದ್ರಾಮನಿಗೆ ಪೆನ್ನು ಕೊಟ್ಟ ಘಟನೆಯೂ ಮಹತ್ವದ್ದೇ. ಸಿದ್ರಾಮ ೫ನೇ ಕ್ಲಾಸಿಗೆ ಸೇರಿದ ವರ್ಷ ಅಂದರೆ ಹೋದ ವರ್ಷ ಮಳೆಯಿರದೇ ಊರಲ್ಲಿ ಬರಗಾಲ ಕಾಲಿ-

ಕ್ಕಿತ್ತು. ಸಿದ್ರಾಮನ ಅಪ್ಪನಿಗೆ ಇಂತಹ ಪರಿಸ್ಥಿತಿಯಲ್ಲಿ ಅವನನ್ನು ರಂಗಾಪುರದ ಶಾಲೆಗೆ ಸೇರಿಸುವುದು ಕನಸಿನ ಮಾತೇ ಆಗಿತ್ತು. ಬೇಕಾದ ಪುಸ್ತಕ, ಬಟ್ಟೆ ಬರೆ ಹೊಚ್ಚುವುದರಲಿ, ಹೊಟ್ಟೆಗೆ ಮಾರ್ಗವಿಲ್ಲದಂತಾಗಿತ್ತು. ಹಳ್ಳಿಯ ಶಾಲೆಯಲ್ಲಿ ಎಲ್ಲರಿಗಿಂತ ಚೆನ್ನಾಗಿ ಓದುತ್ತಿದ್ದ ಸಿದ್ರಾಮ ಶಾಸ್ತ್ರಿ ಮೇಷ್ಟ್ರ ಪಟ್ಟ ಶಿಷ್ಯನಾಗಿದ್ದ.

ನಂಜವ್ವ, ಸಿದ್ರಾಮ, ಅವನಪ್ಪ ಮತ್ತು ಅಕ್ಕ ಗಂಗಿ ಇವರೆಲ್ಲರ ಸದ್ಯದ ಜೀವನಾಧಾರವಾಗಿದ್ದುದು ಒಂದೇ ಕರೆಯುವ ಎಮ್ಮೆ-ಹಣೆಚುಕ್ಕಿ! ಅದಕ್ಕೆ ಹಣೆಯಲ್ಲಿ ಬಿಳಿಯ ಚುಕ್ಕಿಯೊಂದಿದ್ದರಿಂದ ಅದನ್ನು 'ಹಣೆಚುಕ್ಕಿ' ಎಂದೇ ಕರೆಯುತ್ತಿದ್ದರು. "ವೈನಾಗಿ ಹಸೀ ಮೇದು ಒಂದ್ರೂ ಒಂದ್ ಹೊರೆ ಹುಲ್ಲು ತಿಂದ್ ಬಿಡುತ್ತೆ ಕಣಮ್ಮಿ, ಹಂಗೇ ಎರಡು ಸೇರು ಹಾಲೂ ಕರೆಯುತ್ತೆ ಬಿಡು," ಎಂದು ನಂಜಮ್ಮ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದಳು. ಆದರೆ ಇತ್ತೀಚೆಗೆ ಹೊರಗೆ ಸರಿಯಾಗಿ ಮೇವು ಸಿಗದೆ ಇದ್ದುದರಿಂದಲೋ ಏನೋ ಎರಡು ಸೇರು ಕರೆಯುತ್ತಿದ್ದ ಎಮ್ಮೆ ಒಂದು ಸೇರಿಗೆ ಬಂದಿತ್ತು. ಸಿದ್ರಾಮ ಪ್ರತಿ ದಿನವೂ ಶಾಸ್ತ್ರಿ ಮೇಷ್ಟ್ರ ಮನೆಗೆ ಹಾಲುಕೊಟ್ಟು, ಎಂದಾದರೂ ಮೇಷ್ಟ್ರ ಹೆಂಡತಿ ಕೊಡುತ್ತಿದ್ದ ಉಪ್ಪಿಟ್ಟು ತಿಂದು ಬರುತ್ತಿದ್ದ.

ಒಂದು ಸೇರು ಹಾಲು ಮಾರಿ ನಾಲ್ವರ ಹೊಟ್ಟೆ ತುಂಬದಾದಾಗ ಸಿದ್ರಾಮನ ಅಪ್ಪ ಬೇರೆ ರೀತಿ ಯೋಚಿಸುವಂತಾಗಿತ್ತು. ಮೆಂಗಸಂದ್ರದ ಗೊಲ್ಲರ ಪೂಜಪ್ಪನ ಹತ್ತಿರ ಎರಡು ಚೀಲ ರಾಗಿಗೆ ಒಂದು ವರ್ಷ ಸಿದ್ರಾಮನನ್ನು ಕುರಿ ಕಾಯಲು 'ಸಂಬಳ' ಇಡುವುದೆಂದು ಮಾತನಾಡಿಕೊಂಡು ಬಂದಿದ್ದ.

ನಾಲ್ಕನೇ ತರಗತಿಯಲ್ಲಿ ಪಾಸಾದ ಸಂತೋಷದ ಜೊತೆಗೆ ಶಾಸ್ತ್ರಿಮೇಷ್ಟ್ರಿಗೆ ರಂಗಾಪುರಕ್ಕೆ ವರ್ಗವಾದ ಸುದ್ದಿಯೂ ತಿಳಿದು ಸಿದ್ರಾಮನಿಗೆ ತುಂಬಾ ಖುಷಿಯಾಗಿತ್ತು. ಹೇಗೂ ಶಾಸ್ತ್ರಿ ಮೇಷ್ಟ್ರೆ ಮತ್ತೆ ಅಲ್ಲಿಯೂ ಇರುತ್ತಾರಲ್ಲ ಎಂದು ಸಮಾಧಾನವಾಗಿತ್ತು. ಮರುದಿನ ಮೇಷ್ಟ್ರ ಮನೆಗೆ ಹಾಲು ತೆಗೆದುಕೊಂಡು ಹೋದಾಗ ಮೇಷ್ಟ್ರ ಹೆಂಡತಿ ತಟ್ಟೆ ತುಂಬಾ ಉಪ್ಪಿಟ್ಟು ತಂದಿಟ್ಟು ಸಿದ್ರಾಮು, "ನಾಳೆ ನಾವು ಹೋಗ್ತೀವಪ್ಪಾ, ನಾಳೆಯಿಂದ ಹಾಲು ಬೇಡಾಂತ ನಿಮ್ಮವ್ವಂಗೇ ಹೇಳೋ," ಎಂದು ಹೇಳಿದ್ದರು. ಉಪ್ಪಿಟ್ಟು ಏಕೋ ಗಂಟಲಿನಲ್ಲಿ ಇಳಿಯಲು ಹಠ ಮಾಡುತ್ತಿತ್ತು. ಕಣ್ಣತುಂಬ ನೀರು ತುಂಬಿಕೊಂಡೇ ತಿನ್ನುತ್ತಿದ್ದ ಸಿದ್ರಾಮುನನ್ನು ನೋಡಿದ ಮೇಷ್ಟ್ರು, "ಯಾಕೊ? ಉಪ್ಪಿಟ್ಟು ಖಾರಾಗೇತೇನೋ?" ಎಂದು ಮೇಲೆ ಕೇಳಿದರೂ, ನಿಜವಾದ ಕಾರಣ ಅವರಿಗೂ ಗೊತ್ತಿತ್ತು.

ಹಳ್ಳಿಯಿಂದ ಹೊರಡುವಾಗ ಮೇಷ್ಟ್ರು ಸಿದ್ರಾಮನನ್ನು ಕರೆದು, "ಇಟ್ಕಳೋ ಇದ" ಎಂದು ತಾವು ಬಹಳ ವರ್ಷಗಳಿಂದ ಇಟ್ಟುಕೊಂಡಿದ್ದ ಪೆನ್ನನ್ನು ಕೊಟ್ಟು, "ಹೇಗೂ ರಂಗಾಪುರಕ್ಕೆ ಸ್ಕೂಲಿಗೆ ಬರ್ತಿಯಲ್ಲ," ಎಂದು ಹೇಳಿದ್ದರು.

ಆ ಪೆನ್ನನ್ನು ಇಡೀ ನಾಲ್ಕು ವರ್ಷ ಎಂತಹ ಆಸೆಯ ಕಣ್ಣುಗಳಿಂದ ಸಿದ್ರಾಮ ನೋಡಿದ್ದ ಎಂಬುದು ಮೇಷ್ಟ್ರಿಗೆ ಗೊತ್ತಿತ್ತು.



ಶಾಲೆ ಪ್ರಾರಂಭವಾಗುವುದು. ಇನ್ನೂ ಒಂದು ವಾರವಿತ್ತು. ಸಿದ್ರಾಮನಿಗೆ, ಮೇಷ್ಟ್ರ ಪೆನ್ನಿನಿಂದ ಎಂದು ಬರೆದೇನೋ ಎಂಬ ಕಾತರ ಹೆಚ್ಚು–ತ್ತಲೇ ಇತ್ತು. ಅಂದು ಪೆನ್ನಿನ ಎಲ್ಲ ಭಾಗ ಗಳನ್ನು ಕಳಚಿ ಎಲ್ಲ ನೀರಿಗೆ ಹಾಕಿ ತೊಳೆಯುತ್ತ ಕುಳಿತಿದ್ದಾಗ ಅಪ್ಪ ಬಂದು, "ಸಿದ್ರಾಮ ಮೆಂಗ್ಸಂವ್ರದ ಗೊಲ್ಲರ ಪುಂಜಪ್ಪನ ಹತ್ತಿರ ಸ್ವಲ್ಪ ದಿನ ಕುರಿ ಕಾಯಕ್ಕೇಂತ ನಿನ್ನ ಸಂಬ್ಳಕ್ಕಿಟ್ಟಿದೀನಿ ಕಣೋ, ಅದ್ಕೇ ನಿನಗೊಂದ್ಜೊತೆ ಬಟ್ಟೇನೂ ಹೊಲಿಸಿದೀನಿ ನೋಡು, ಹಾಕ್ಕೊಂಡು ಹೋಗಪ್ಪಾ," ಎಂದು ರಮಿಸುತ್ತಲೇ ಹೇಳಿದ್ದ. ಸಿದ್ರಾಮನಿಗೆ ಎದೆಯೊಳ್ಗೊ ಕಾರೇಗಿಡದ ಮುಳ್ಳು ಸಿಕ್ಕಿಕೊಂಡಂತಾಯಿತು. ಅವ್ವನ ಹತ್ತಿರ ಹೋಗಿ ಭೋರಾಡಿ ಅತ್ತಿದ್ದ. "ಅವ್ವೋ ನನ್ನ ಇಸ್ಕೂಲಿಗೆ ಸೇರಿಸ್ರವ್ವೋ, ಶಾಸ್ತ್ರಿ ಮೇಷ್ಟ್ರು ಹೇಳೌವ್ರೆ, ನಾನು ಚಂದಾಗಿ ಓದ್ತೀನಂತೆ, ಸೇರಿಸ್ರವ್ವೋ, ನನ್ನ ಸಂಬ್ಳಕ್ಕಿಡಬ್ಯಾಡ್ರವ್ವೋ," ಎಂದು ಅಳುತ್ತ ಬಿಕ್ಕಳಿಸಿ ಹಾಗೇ ನಿದ್ದೆ ಹೋಗಿದ್ದ.

*

ಶಾಲೆ ಪ್ರಾರಂಭವಾಗಿ ಹದಿನೈದು ದಿನ ಗಳಾದರೂ ಸಿದ್ರಾಮ ಶಾಲೆಗೆ ಸೇರದೇ ಇದ್ದುದು ಶಾಸ್ತ್ರಿ ಮೇಷ್ಟ್ರಿಗೆ ಮನಸ್ಸಿನ ಮೂಲೆಯಲ್ಲಿ ಕಾಡಲಾರಂಭಿಸಿತು. ತೊಂದರೆ ಇರಬಹುದು, ನಾಳೆ ಸೇರಿಸಬಹುದು, ನೋಡೋಣ ಎನ್ನುತ್ತಲೇ ಮತ್ತೊಂದು ವಾರವೂ ಕಳೆದು ಹೋಯಿತು. ರಂಗಾಪುರಕ್ಕೆ ಬಂದ ಮೇಲೆ ಒಳ್ಳೆಯ ಹಾಲು ಸಿಗದೆ ಕಾಫಿ ಅಷ್ಟು ಹಿತ ವೆನಿಸುತ್ತಿರಲಿಲ್ಲ. ಪ್ರತಿ ಸಾರಿ ಕಾಫಿ ಕುಡಿಯು–ವಾಗಲೂ, ಸಿದ್ರಾಮ ನಂಜವ್ವ ನೆನಪಿಗೆ ಬರುತ್ತಿದ್ದರು. ಮೇಷ್ಟ್ರ ಹೆಂಡತಿಯಂತೂ ಪ್ರತಿ ಸಾರಿ ಕಾಫಿ ಮಾಡುವಾಗಲೂ ಗೊಣಗುವುದೇ.

ಮತ್ತೊಂದು ವಾರ ಕಳೆದರೂ ಸಿದ್ರಾಮನ ಸುಳಿವೇ ಇಲ್ಲವಾದಾಗ, ಮೇಷ್ಟ್ರು ಭಾನುವಾರದ ದಿನ ತಾವೇ ಹಳ್ಳಿಯ ಕಡೆ ಹೊರಟರು. ಬಿಸಿಲಿನ ಝಳಕ್ಕೆ ಬರುತ್ತಿದ್ದ ಬೆವರನ್ನು ಹೆಗಲಿನ ಮೇಲಿನ ಶಲ್ಯದಿಂದ ಒರೆಸಿಕೊಳ್ಳುತ್ತ ಹೋಗುತ್ತಿದ್ದವರು "ಸಾರ್" ಎಂದು ಹತ್ತಿರದಲ್ಲೇ ಕೂಗಿದ್ದು ಕೇಳಿ ಗಕ್ಕನೇ ತಿರುಗಿದರು. ಸಣ್ಣ ಒಂಟಿ ಕಂಬಳಿಯನ್ನು ಹೊತ್ತುಕೊಂಡು ಒಂದು ದೊಡ್ಡ ಕೋಲನ್ನು ಹಿಡಿದು ಕಣ್ಣುತುಂಬಿ ನಿಂತಿದ್ದ ಸಿದ್ರಾಮನನ್ನು ಕಂಡು ಮೇಷ್ಟ್ರಿಗೆ ಕರುಳು ಕಿವಿಚಿದಂತಾಯ್ತು. ಕುರಿ, ಕಂಬಳಿ, ಕೋಲು ಎಲ್ಲ ಕತೆಯನ್ನೂ ಹೇಳಿದ್ದವು. ಮಾತನಾಡಲು ಇಬ್ಬರ ಗಂಟಲುಗಳೂ ಅವಕಾಶ ಕೊಡಲಿಲ್ಲ. ಏನೋ ನಿರ್ಧರಿಸಿಕೊಂಡ ಮೇಷ್ಟ್ರು, "ಸಂಜೀಕೆ ಊರಿಗೆ ಬಾ. ನಿಮ್ಮಪ್ಪಂಗೆ ಹೇಳಿರ್ತೀನಿ," ಎಂದಷ್ಟೇ ಹೇಳಿ, ಮತ್ತೆ ಅವನನ್ನು ಆ ಸ್ಥಿತಿಯಲ್ಲಿ ನೋಡಲಾಗದೆ ತಲೆ ತಗ್ಗಿಸಿ ಹಳ್ಳಿಯ ಕಡೆಗೆ ನಡೆದರು.

ಅಂದೇ ತಮ್ಮಲ್ಲಿದ್ದ ೧೦೦ ರೂಪಾಯಿಗಳನ್ನು ಸಿದ್ರಾಮನ ಅಪ್ಪನಿಗೆ ಕೊಟ್ಟು ಸಿದ್ರಾಮನನ್ನು ಸಂಬಳದಿಂದ ಬಿಡಿಸಿ ಶಾಲೆಗೆ ಸೇರಿಸಬೇಕೆಂದು, ಅವನ ಕೈಲೇ ಪ್ರತಿದಿನ ಒಂದು ಸೇರು ಹಾಲು ಕಳಿಸಬೇಕೆಂದೂ, ಹಾಲಿನ ದುಡ್ಡಿನಲ್ಲಿ ತಿಂಗಳೂ ಸ್ವಲ್ಪ ಸ್ವಲ್ಪ ತಮ್ಮ ಲೆಕ್ಕಕ್ಕೆ ಹಾಕಿಕೊಳ್ಳುವುದೆಂದೂ ಒಪ್ಪಿಸಿ ಬಂದಿದ್ದರು.

ಕುಣಿಯುತ್ತಾ ಶಾಲೆಗೆ ಹೊರಟ ಸಿದ್ರಾಮನ ಕೈಚೀಲಕ್ಕೆ ನಂಜವ್ವ ಒಂದು ರಾಗಿ ರೊಟ್ಟಿ ಮುರಿದು ಪುಸ್ತಕದ ಜೊತೆಗೇ ಇಟ್ಟು ಸಂತೋಷ ಪಟ್ಟಿದ್ದಳು.

*

ಕಾಮನಗುಂಡಿಯಲ್ಲಿ ನಿಂತಿದ್ದ ನೀರಿನಲ್ಲಿ 'ನೀರು ಮುಟ್ಟಿ' ಬಂದ ಸಿದ್ರಾಮನಿಗೆ ವಾಸನೆಯಿಂದಲೇ ಅವ್ವ ಕ್ಯಾಕರಿಕೆ ಹಣ್ಣು ತಂದಿರುವುದು ತಿಳಿಯಿತು. ಹೊರಬಾಗಿಲಿನಿಂದ ಒಂದೇ ನೆಗೆತಕ್ಕೆ ಒಳಗೆ ಹಾರಿದ, "ಕ್ಯಾಕರಿಕೆ ಹಣ್ಣು ತಂದಿದೀ ಏನವ್ವಾ?" ಎಂದು ಜೊಲ್ಲು ಸುರಿಸುತ್ತಲೇ ಕೇಳಿದ. ಕಾಯಿ ತುರಿಯುತ್ತಿದ್ದ ಅವ್ವ, "ಹೂಂ, ಎಲ್ಹೋಗಿದ್ದೆ ಇಷ್ಟೊತ್ತಂಕ?" ಎಂದು ಆಕ್ಷೇಪಿಸಿದಳು. ಕಾಯಿ ತುರಿಯುವಾಗ ಒಂದು ಸಾರಿ ಮಾತ್ರ ತಿನ್ನಲು ತೆಗೆದುಕೊಳ್ಳಲು

ಅವಕಾಶವಿದ್ದುದರಿಂದ ಜಾಸ್ತಿ ತೆಗೆದುಕೊಳ್ಳಲು ಹೋಗಿ ಇನ್ನಷ್ಟು ಬೈಸಿಕೊಂಡ. ಮಧ್ಯಾಹ್ನ ಆಸೆ ತಡೆಯಲಾರದೆ ಒಂದೊಂದೇ ಚೂರು ತಿಂದು ಮೂರು ಉಂಡೆ ಬೆಲ್ಲ ತಿಂದು ಮುಗಿಸಿದ್ದ ಕಳ್ಳ, ತನ ಪೊರಬೀಳುವ ಕಾಲ ತೀರ ಹತ್ತಿರ ವಾಗುತ್ತಿರುವ ಭಯವೂ ಕಾಡಲಾರಂಭಿಸಿತು. ಕಡೆಗೂ ಸಂಜವ್ವ, "ಬೆಲ್ಲದ ಡಬ್ಬಿ ತಗಳ್ಳೊ" ಅಂದಾಗ, "ನನಗೆ ನಿಲುಕಲ್ಲ ಕಣವ್ವೊ," ಎಂದ. ಡಬ್ಬಿ ತೀರಾ ಹಗುರವಾಗಿರುವುದನ್ನು ಕಂಡು ಸಂಜವ್ವ ಅನುಮಾನದಿಂದ ತೆಗೆದು ನೋಡಿ ದಾಗ ಇದ್ದ ಏಳೆಂಟು ಉಂಡೆ ಬೆಲ್ಲದಲ್ಲಿ ಮೂರುಂಡೆ ಬೆಲ್ಲ ಇಲ್ಲದಿದ್ದುದನ್ನು ಕಂಡು ನಖಶಿಖಾಂತ ಸಿಟ್ಟು ಬಂತು. "ನಿನ್ ಸೊಲ್ಲಡಗ, ಏಳು ಉಂಡೇಲಿ ಬರೇ ನಾಕುಂಡೇ ಬಿಟ್ಟಿದ್ದೀಯಾ, ನಿಂದೇನು ವಟ್ಟೇನೋ ವಾಡೇನೋ? ನಿಲುಕಲ್ಲ ಅಂತ ಯಾರೇ ಹೇಳ್ತಿಯಾ? ನಿಮ್ಮಪ್ಪ ಬರ್ಲಿ ತಡಿ, ನೀನಿವತ್ತು ಎಡಗಡೆ ಎದ್ದಿದೀಯಾ."

ಉಹುಂ, ಅವ್ವ ಬೆಳಗಿನ ಜಾವ ರಾಗಿ ಬೀಸುತ್ತ ಕೂತಿದ್ದಾಗ ಎದ್ದಿದ್ದವನು ಸ್ವಲ್ಪ ಹೊತ್ತು 'ಅಕ್ಕ-ಬುಕ್ಕರ' ಪಾಠ ಓದಿಕೊಳ್ಳುತ್ತಿದ್ದಂತೇ ಮತ್ತೆ ನಿದ್ದೆ ಹತ್ತಿ ಹಾಗೇ ಅವ್ವನ ತೊಡೆಯ ಮೇಲೇ ಮಲಗಿದ್ದ. ರಾಗಿ ಬೀಸುವುದು ಮುಗಿದಾಗ ಬೆಳಗಾಗಿತ್ತು. ಅವ್ವನ ತೊಡೆಯ ಮೇಲಿಂದ ಹಾಗೇ ಮೇಲಕ್ಕೆದ್ದಿದ್ದ ಎಡಕ್ಕೊ ಬಲಕ್ಕೊ ನೆನಪಾಗಲಿಲ್ಲ.

"ಆಚಾರ್ರು ಅಂಗಡಿಗೋಗಿ, ಈ ಕಾಯಿ ಕೊಟ್ಟು ಬೆಲ್ಲನೂ ಒಂದ್ ಸೀಸ ಸೀಮೆಣ್ಣೇನೂ ತಗಂಬಾ," ಎಂದು ಸಂಜವ್ವ ಒಂದು ತೆಂಗಿನಕಾಯಿ ಕೊಟ್ಟು, "ಹನ್ನೆಲ್ಡಾಣೆ ಕಡಿಮೆ ಕೊಡಬೇಡ,"



ಎಂದೂ ಎಚ್ಚರಿಸಿದಳು. ಎಷ್ಟೇ ಚೌಕಾಸಿ ಮಾಡಿದರೂ ಕಂತಾಚಾರಿ ಅರುವತ್ತು ಪೈಸೆಗಿಂತ ಜಾಸ್ತಿ ಕೊಡುವುದಿಲ್ಲ ಎಂದು ಖಡಾಖಂಡಿತವಾಗಿ ಹೇಳಿದಾಗ ಸುಮ್ಮನೇ ಕಾಯಿ ಹಿಡಿದು ವಾಪಸ್ಸು ಬಂದ ಸಿದ್ರಾಮು. "ಅರ್ವತ್ತು ಪೈಸಾಕ್ಯಾದ್ರೆ ತಗಂತಾರಂತೆ. ಇಲ್ದಿದ್ರೆ ಬ್ಯಾಡ್ವಂತೇ ಕಣವ್ವೋ," ಎನ್ನುತ್ತಲೇ ಒಳ ಬಂದ. ಆಗಲೇ ಪೂರ್ತಿ ಕತ್ತಲಾಗಿ, ಸೀಮೆ ಎಣ್ಣೆ ಮುಗಿದಿದ್ದಕ್ಕೇನೋ ಮನೆಯಲ್ಲಿ ಇನ್ನೂ ಬುಡ್ಡಿ ಹಚ್ಚಿರಲಿಲ್ಲ. ಕತ್ತಲಲ್ಲೇ ನುಗ್ಗಿದ. ಕಾಲಿಗೆ ಏನೋ ತೊಡರಿಕೊಂಡು ಕತ್ತಲಲ್ಲಿ ಕುಳಿತಿದ್ದ ಅವನಪ್ಪನ ಮೇಲೇ ಬಿದ್ದ. ಅಪ್ಪ ಏನೂ ಅನ್ನದೇ ಹಾಗೇ ಮೇಲೇಳಿಸಿ, "ಓಗ್ಲಿ, ಅಷ್ಟಕ್ಕೇ ಕೊಟ್ಬ್ಟಾ," ಅಂದದ್ದು ಸಿದ್ರಾಮುನಿಗೆ ಆಶ್ಚರ್ಯವೆನಿಸಿತು.

ಹಣ್ಣು ತಿನ್ನುವಾಗ ಅಪ್ಪ ಅವ್ವನ ಕೈಲಿ ಹೇಳುತ್ತಿದ್ದ. "ಹುಡುಗನೇನೋ ವೈನಾಗಿದಾನೆ. ಒಂದ್ ವಾಚು, ಸೈಕಲ್ಲು ಕೊಟ್ಟು ಮದ್ವೆ ಖರ್ಚೆಲ್ಲ ನಮ್ದೇಯಂತೆ. ಆಗ್ಲಿ ಅಂತ ಒಪ್ಗಂ-ಬಂದೀದೀನಿ." ಸಿದ್ರಾಮುನಿಗೆ ತಳ ಬುಡ ತಿಳಿಯಲಿಲ್ಲ. "ಯಾರಿಗವ್ವ ವಾಚು?" ಎಂದು ನಡುವೆ ಬಾಯಿ ಹಾಕಿದ.

"ಇವ್ನಂದೊಂದು ಭಂಗಾ. ಮಾತಾಡುವಾಗ ಭೇತಾಳಿನ ಕಾಟ ಅನ್ನೋ ಹಂಗೇ. ಹೇಳ್ತೀನಿ ಸುಮ್ಕಿರು," ಎಂದು ನಂಜವ್ವ ಗದರಿದಳು. ರಾತ್ರಿ ಊಟಕ್ಕೆ ಕುಳಿತಾಗ ನಂಜವ್ವ ಇನ್ನೂ ಮುದ್ದೆ ಕಟ್ಟುತ್ತಿರುವಾಗಲೇ ಗಂಗಿ ಊಟಕ್ಕೆ ನೀಡುತ್ತಿದ್ದಳು. ಅಪ್ಪ ಇನ್ನೂ ಹೇಳುತ್ತಲೇ ಇದ್ದ. ಇಷ್ಟೊತ್ತಿಗಾಗಲೇ ಸಿದ್ರಾಮುನಿಗೆ ಅವನ ಅಪ್ಪ ಗಂಗಿಗೆ ಮದುವೆ ಗೊತ್ತುಮಾಡಿಕೊಂಡು ಬಂದಿರುವುದೂ ಮುಂದಿನ ತಿಂಗಳು ಮದುವೆಯೆಂದೂ, ತಿಳಿದಿತ್ತು—ಮದುವೆ ಊಟ, ಓಡಾಟದ ಆಸೆಗಳು ನುಗ್ಗಿ ಬರಲಾರಂಭಿಸಿದವು.

ಬೆಳಗ್ಗೆ ಮೇಷ್ಟ್ರ ಮನೆಗೆ ಹಾಲು ತೆಗೆದುಕೊಂಡು ಹೋದಾಗ ಮೇಷ್ಟ್ರಿಗೆ ತನ್ನಕ್ಕನ ಮದುವೆ ವಿಷಯ ಹೇಳಬೇಕು ಎಂದುಕೊಂಡೇ ಹೋದ. ಆದರೆ ಅದಕ್ಕಿಂತ ಮೊದಲು ಮೇಷ್ಟ್ರ ಹೆಂಡತಿ, "ನಿಮ್ಮ ಮೇಷ್ಟ್ರಿಗೆ ತಿಪಟೂರಿಗೆ ವರ್ಗ ಆಗಿದೆಯಪ್ಪ. ಅದಕ್ಕೆ ಲಾರಿ ಗೊತ್ತು ಮಾಡಿ ಬರಲು



ಹೋಗಿದ್ದಾರೆ. ನಾಳೆಯಿಂದ ಹಾಲು ಬೇಡಪ್ಪ. ಹಂಗೇ ಇವತ್ತು ಮಧ್ಯಾಹ್ನ ಊಟಕ್ಕೆ ಇಲ್ಲಿಗೇ ಬಂದು ಬಿಡು. ಅಷ್ಟೊತ್ತಿಗೆ ಮೇಷ್ಟ್ರು ಬಂದಿರ್ತಾರೆ," ಎಂದರು. ಮೇಟಿ ಕಿತ್ತ ಕಣದಂತಾಗಿತ್ತು ಸಿದ್ರಾಮನ ಮನಸ್ಸು. ಶಾಲೆಗೆ ಬಂದರೂ ಒಳಗೆ ಹೋಗಲೂ ಮನಸ್ಸಾಗಲಿಲ್ಲ. ಒಲ್ಲದ ಮನಸ್ಸಿನಲ್ಲೇ ಪ್ರಾರ್ಥನೆಗೆ ನಿಂತುಕೊಂಡ. ಜೋಡಿ ಕಂಬದ ಪಕ್ಕದಲ್ಲಿ ಬಿಳೀ ಶುಭ್ರ ಪಂಜೆ ತೊಟ್ಟು ಹಣೆಗೆ ಸಣ್ಣಗೆ ಕುಂಕುಮ ಇಟ್ಟು ಸ್ವಲ್ಪ ದೊಗಳೆಯೇ ಅನ್ನುವಂತಹ ಶರ್ಟು ತೊಟ್ಟ ನಿಲ್ಲುತ್ತಿದ್ದ ಮೇಷ್ಟ್ರು ಇಂದು ಇರಲಿಲ್ಲ. 'ಸ್ವಾಮಿ ದೇವನೆ' ಹೇಳಲು ಪ್ರಾರಂಭಿಸುತ್ತಿದ್ದಂತೆ ಸಿದ್ರಾಮನಿಗೆ ಕಣ್ಣಾಲಿಗಳು ತುಂಬಿಕೊಳ್ಳಲಾರಂಭಿಸಿದವು. ಅದೇನೋ ಶಾಸ್ತ್ರಿ ಮೇಷ್ಟ್ರು ಅವನಿಗೆ ಬರೀ ಮೇಷ್ಟ್ರಾಗಿರಲಿಲ್ಲ, ಒಂದು ರೀತಿಯಲ್ಲಿ ಶಾಲೆಯೇ ಅವರಾಗಿದ್ದರು.

'ಜನಗಣಮನ' ಹೇಳಲು ಸಿದ್ರಾಮನಿಗೆ ಸಾಧ್ಯವಾಗಲಿಲ್ಲ. ಪೂರ್ತಿ ಗಂಟಲುಬ್ಬಿ ಬಂದಿತ್ತು. ನಂತರ ಹೆಡ್‌ಮೇಷ್ಟ್ರು ಬೀಳ್ಕೊಡುಗೆ ಸಮಾರಂಭದ ಬಗ್ಗೆ ಎಲ್ಲರಿಗೂ ತಿಳುವಳಿಕೆ ನೀಡಿದ್ದರು.

ಸಮಾರಂಭದ ನಂತರ ಮೇಷ್ಟ್ರು ಸಿದ್ರಾಮುನನ್ನೂ ಮನೆಗೆ ಕರೆದುಕೊಂಡು ಹೊರಟರು. ದಾರಿಯಲ್ಲಿ, "ನಾನಿನ್ನು ಇಲ್ಲಿರಲ್ಲಪ್ಪಾ, ನಿಗಾವಹಿಸಿ ಓದಿ ಮುಂದೆ ಬಾ. ದೇವರಿದ್ದಾನೆ," ಎಂದು ಹೇಳುತ್ತಲೇ ಹೋಗುತ್ತಿದ್ದರು. ಮೇಷ್ಟ್ರು, ಅವರ ಮಕ್ಕಳು ಹಾಗೂ ಸಿದ್ರಾಮ ಎಲ್ಲ ಒಟ್ಟಿಗೇ ಊಟಕ್ಕೆ ಕುಳಿತರು. ಶ್ಯಾವಿಗೆ ಪಾಯಸ ಸೊಗಸಾಗಿದ್ದರೂ ಮೇಷ್ಟ್ರಿಗೂ ಸಿದ್ರಾಮನಿಗೂ ಹೆಚ್ಚು ಸೇರಲಿಲ್ಲ.

ಅಂದು ಸಂಜೆ ಸಿದ್ರಾಮ ಊರಿಗೆ ಕಾಲೆಳೆದುಕೊಂಡು ಬರುವ ಹೊತ್ತಿಗೆ ಪೂರ್ತಿ ಸುಸ್ತಾಗಿದ್ದ. ಕತ್ತಲಾಗಿತ್ತು.

ಮದುವೆ ೧೫ ದಿನಗಳಷ್ಟೇ ಉಳಿದಿತ್ತು. ಮದುವೆಯ ಕೆಲವು ಸಣ್ಣ ಪುಟ್ಟ ಕೆಲಸಗಳು ಇವನಿಗೂ ಬೀಳುತ್ತಿದ್ದವು. ಹಾಗಾಗಿ ಸರಿಯಾಗಿ ಶಾಲೆಗೂ ಹೋಗಲಾಗಿರಲಿಲ್ಲ. ಶಾಲೆ ತಪ್ಪಿಸಿಕೊಂಡ ದಿನವೆಲ್ಲಾ "ನಿಗಾವಹಿಸಿ ಓದಿ ಮುಂದೆ ಬರಬೇಕಪ್ಪಾ. ದೇವರಿದ್ದಾನೆ," ಎಂಬ ಮೇಷ್ಟ್ರ ನುಡಿಗಳು ಮನಸ್ಸಿನಲ್ಲಿ ಧ್ವನಿಸುತ್ತಲೇ ಇರುತ್ತಿದ್ದವು. ಸಾಧ್ಯವಾದಷ್ಟು ತಪ್ಪಿಸಿಕೊಳ್ಳದೆ ಶಾಲೆಗೆ ಹೋಗಲಾರಂಭಿಸಿದ.

ಅಪ್ಪ ಮೊದಲಬಾರಿಗೆ ಹೊಲಿಸಿದ ಪೈಜಾಮ ಷರ್ಟು ತೊಟ್ಟು ಮದುವೆಯಲ್ಲಿ ಚಪ್ಪರದ ತುಂಬಾ ಓಡಾಡಿದ್ದ ಸಿದ್ರಾಮ. ಮದುವೆ ಮುಗಿದು ದಿಬ್ಬಣದ ಜೊತೆ ತಾನು ಹೋದರೆ ಶಾಲೆಗೆ ತೊಂದರೆಯಾದೀತೆಂದು ಹೋಗದೆ ಉಳಿದುಕೊಂಡ. ಅಪ್ಪನೂ ಹೆಚ್ಚು ಒತ್ತಾಯಿಸಲಿಲ್ಲ.

ನಾಲ್ಕು ದಿನದಿಂದ ಶಾಲೆಗೆ ಹೋಗದೆ ಇದ್ದುದರಿಂದ ಒಂದು ರೀತಿಯ ಕಾತರ ಜಾಸ್ತಿಯಾಗಿತ್ತು. ಬೇಗ ಎದ್ದು ರಾತ್ರಿಯ ತಂಗಳನ್ನೇ ತಿಂದು ಹೊರಡಬೇಕೆನ್ನುತ್ತಿರುವಾಗ ಗೊಲ್ಲರ ಪೂಜಪ್ಪ ಬಂದಿದನ್ನು ಕಂಡು, "ಅಪ್ಪೋ, ಪೂಜಪ್ಪ ಬಂದವ್ನೆ," ಎಂದು ಹೇಳಿ ಪಾಟಿ ಚೀಲಕ್ಕೆ ಪುಸ್ತಕ ಜೋಡಿಸಿಕೊಳ್ಳಲು ಹೊರಟ. "ನಿಮ್ಮಕ್ಕನ ಮದುವೆಗೇಂತ ಐದು ನೂರು ರೂಪಾಯಿ ಸಾಲ ತಂದಿವ್ನಿ. ನಿನ್ನ ಮೂರು ವರ್ಷ 'ಸಂಬಳ' ಕ್ಕಿಡ್ತೀನಿ ಅಂತಾ. ಪೂಜಪ್ಪನ ಜೊತೆ ಓಗು ಮಗಾ," ಎಂದ ಅಪ್ಪನ ನುಡಿಗಳು ಅವನನ್ನು ನಿಸ್ತೇಜನನ್ನಾಗಿಸಿದವು. ತಕ್ಷಣ ಶಾಸ್ತ್ರಿ ಮೇಷ್ಟ್ರು ನೆನಪಿಗೆ ಬಂದರು. ತಬ್ಬಿಕೊಂಡು ಅಳಲು ಅವ್ವನೂ ಇರಲಿಲ್ಲ. ಸುತ್ತಲೂ ನೋಡಿದ. ನೇತಾಡುತ್ತಿದ್ದ ಪಾಟಿ ಚೀಲವನ್ನೇ ಜಾಟಿ ತಬ್ಬಿಕೊಂಡ. ಪೂಜಪ್ಪ ಅವನನ್ನು ಮೆಲ್ಲಗೆ ಬಿಡಿಸಿಕೊಂಡು ಕೈ ಹಿಡಿದು ಹೊರಟ. ಹೆಜ್ಜೆ ಎತ್ತಿಟ್ಟಂತೆ ಕೆನ್ನೆ ಮೇಲಿನ ಹನಿಗಳು ದಳ ದಳ ಕೆಳಗೆ ಉದುರಿದವು. ಪಾಟಿ ಚೀಲ ತೂಗಾಡುತ್ತಿತ್ತು.

✡

# ನಕ್ಷತ್ರಲೋಕದಲ್ಲಿ ಅಗ್ರ ತಾಂಬೂಲ ಯಾರಿಗೆ?

ಜಿ. ಟಿ. ನಾರಾಯಣರಾವ್
ಚಿತ್ರಗಳು: ಕೆ. ಮುರಲೀಧರರಾವ್

ಅತ್ಯಂತ ಉಜ್ಜ್ವಲ ನಕ್ಷತ್ರ ಯಾವುದು?

ಹಣತೆಯನ್ನು ಕಣ್ಣಹತ್ತಿರವೂ ಉಜ್ಜ್ವಲ ವಿದ್ಯುದ್ದೀಪವನ್ನು ೧ ಕಿಮೀ ದೂರವೂ ಇರಿಸಿ ಯಾವುದು ಅಧಿಕ ಉಜ್ಜ್ವಲ ಎಂದು ಪ್ರಶ್ನಿಸಿದರೆ ನೇರ ಉತ್ತರ ನುಡಿಯುವುದು ಕಷ್ಟವಾಗುತ್ತದೆ. ನಿಜಕ್ಕೂ ವಿದ್ಯುದ್ದೀಪ ಉಜ್ಜ್ವಲತರವಾಗಿದ್ದರೂ 'ಇಲ್ಲಿ ನಿಂತಿರುವ ನಮಗೆ ಕಾಣುವಂತೆ' ಹಣತೆಯೇ ಅಧಿಕ ಉಜ್ಜ್ವಲವಾಗಿದೆ ಎಂಬ ಕಾನೂನುಸಮ್ಮತ ಉತ್ತರ ಕೊಡುತ್ತೇವೆ.

ನೆಲದ ಮೇಲಿನ ಈ ಸರಳ ಸೂತ್ರ ಆಕಾಶದ ಅಗಾಧ ದೂರಗಳಿಗೂ ಇಷ್ಟೇ ನೇರವಾಗಿ ಅನ್ವಯವಾಗುತ್ತದೆ. ಆದರೆ ನಮ್ಮ ದೃಷ್ಟಿಯು ಸೀಮಿತತೆಯಿಂದಾಗಿ ಆಕಾಶಕಾಯಗಳ ನಡುವಿನ ಊಹಾತೀತ ಅಂತರಗಳ ಅರಿವೇ ನಮಗಾಗುವುದಿಲ್ಲ. ಬದಲು, ಆ ಕಾಯಗಳು ಎಲ್ಲಿಯೇ ಇರಲಿ, ನಮ್ಮಿಂದ ಒಂದೇ ದೂರದಲ್ಲಿರುವ ಬಾನಗುಮ್ಮಟದ ಒಳಮಾಡಿಗೆ ಅಂಟಿಕೊಂಡಿರುವಂತೆ ಭಾಸವಾಗುತ್ತವೆ. ಆದ್ದರಿಂದ ನಕ್ಷತ್ರಗಳ ಉಜ್ಜ್ವಲತೆ ಕುರಿತಂತೆ ಎರಡು ಮಾನಕಗಳನ್ನು ನಿಗದಿಸುವುದು ಅನಿವಾರ್ಯ ಅಗತ್ಯ: ನೈಜ ಉಜ್ಜ್ವಲತೆ, ದೃಗ್ಗೋಚರ ಉಜ್ಜ್ವಲತೆ. ಮೊದಲನೆಯದರ ಅನ್ವೇಷಣೆ ಖಭೌತವಿಜ್ಞಾನಿಗಳ ತಾಂತ್ರಿಕ ಸಮಸ್ಯೆ. ಸದ್ಯ ನಮಗೆ ದೃಗ್ಗೋಚರ (ಕಣ್ಣಿಗೆ ಕಾಣುವ) ಉಜ್ಜ್ವಲತೆ ಸಾಕು.

ಹಾಗಾದರೆ ಕಣ್ಣಿಗೆ ಕಾಣುವಂತೆ ಪರಮೋಜ್ಜ್ವಲ ನಕ್ಷತ್ರ ಯಾವುದು?

ಈ ಪ್ರಶ್ನೆಗೆ ಸಾಧಾರಣವಾಗಿ ದೊರೆಯುವ ಉತ್ತರಗಳಿವು: ಧ್ರುವ ನಕ್ಷತ್ರ, ಶುಕ್ರ, ಗುರು, ಜ್ಯೇಷ್ಠಾ, ಸ್ವಾತೀ. ಇವೆಲ್ಲವೂ ತಪ್ಪು. ಸರಿಯಾದ ಉತ್ತರ ಹಾಸ್ಯಾಸ್ಪದವೆನಿಸುವಷ್ಟು ಸರಳ: ಅದು ಸೂರ್ಯ! ಇದು ನಮ್ಮ ಸಮೀಪತಮ ನಕ್ಷತ್ರವೂ ಹೌದು.

ನಕ್ಷತ್ರವೆಂದರೆ ಪ್ರಜ್ವಲಿಸುತ್ತಿರುವ ಪ್ಲಾಸ್ಮಾ ರಾಶಿ, ಹೈಡ್ರೊಜನ್ ಬಾಂಬುಗಳ ಪುಂಖಾನುಪುಂಖ ಆಸ್ಫೋಟನ ಕೇಂದ್ರ, ಸ್ವದಹನದಿಂದ ಆಕಾಶಕ್ಕೆ ಬೆಳಕು ಶಾಖ ಮುಂತಾದ ವಿಕಿರಣ ಪ್ರಕಾರಗಳನ್ನು ಮೊಗೆಯುತ್ತಿರುವ ದೈತ್ಯ ಸ್ಥಾವರ. ಆದ್ದರಿಂದ ಮೇಲಿನ ಯಾದಿಯಲ್ಲಿ ಶುಕ್ರ ಮತ್ತು ಗುರು ಎನ್ನುವ ಅನಕ್ಷತ್ರಗಳಿಗೆ ಹೇಗೂ ಸ್ಥಾನ ಇಲ್ಲ. ಇವು ಗ್ರಹಗಳು, ಸೂರ್ಯಪ್ರಕಾಶವನ್ನು ಪ್ರತಿಫಲಿಸಿ ಬೆಳಗುವ ಆಕಾಶಕಾಯಗಳು, ಗಗನ ದರ್ಪಣಗಳು.

ಉಜ್ಜ್ವಲತೆಯ ಮಾನಕದಲ್ಲಿ ಸೂರ್ಯನಿಗೆ ಅಗ್ರ ತಾಂಬೂಲ. ಸೂರ್ಯ ನಮ್ಮ ಖಾಸಾ ನಕ್ಷತ್ರವಾದ್ದರಿಂದ ಈ ಸ್ಥಾನ ಸಂಖ್ಯೆಯನ್ನು ೦ ಎಂದಿಟ್ಟುಕೊಳ್ಳುವುದು (೧ ಎಂದಲ್ಲ) ವಾಡಿಕೆ, ಇದೇ ಮಾನಕದಲ್ಲಿ ಮುಂದಿನ ಹತ್ತು ನಕ್ಷತ್ರಗಳಿವು: ಲುಬ್ಧಕ, ಅಗಸ್ತ್ಯ, ಕಿನ್ನರಪಾದ,

ಸ್ವಾತೀ, ಅಭಿಜಿತ್, ಬ್ರಹ್ಮಹೃದಯ, ವ್ಯಾಧ ಪೃಷ್ಠ, ಪೂರ್ವಶ್ವಾನ, ವೈತರಣೀಮುಖ, ಆರ್ದ್ರಾ. ಇವನ್ನು ಮತ್ತು ಇನ್ನೂ ಕೆಲವು ಉಜ್ಜ್ವಲ ತಾರೆಗಳನ್ನು ಗುರುತಿಸುವ ವಿಧಾನ ಈಗ ತಿಳಿಯೋಣ.

ಡಿಸೆಂಬರ್, ಜನವರಿ ತಿಂಗಳುಗಳ ರಾತ್ರಿಯ ಮೊದಲ ಜಾವದಲ್ಲಿ ಮಹಾವ್ಯಾಧ, ಮಹಾ-ಶ್ವಾನ ಮತ್ತು ವಿಜಯಸಾರಥಿ ಪುಂಜಗಳನ್ನು (ಚಿತ್ರ ೧) ಪೂರ್ವಾಕಾಶದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. (ವಾಸ್ತವವಾಗಿ ಸೂರ್ಯ ಮೇಷದಿಂದ ಮಿಥುನದ ವರೆಗೆ ಸರಿಯುವ ಮೂರು ತಿಂಗಳ ಹೊರತಾಗಿ ಬೇರೆ ಯಾವುದೇ ರಾತ್ರಿ ಈ ಪುಂಜಗಳನ್ನು ನೋಡುವುದು ಸಾಧ್ಯ.)

ಮಹಾವ್ಯಾಧದ ಆಕಾರ ಬೃಹತ್ ತ್ರಾಪಿಜ್ಯ-ದಂತಿದೆ. ಇದರ ಪಶ್ಚಿಮ ಮತ್ತು ಪೂರ್ವ ಬಾಹುಗಳು (ಮೊದಲು ಮೂಡುವ ಬಾಹು ಪಶ್ಚಿಮಾಭಿಮುಖವಾಗಿರುವುದರಿಂದ ಪಶ್ಚಿಮ ಬಾಹು, ತರುವಾಯ ಮೂಡುವ ಬಾಹು ಪೂರ್ವಾಭಿಮುಖವಾಗಿರುವುದರಿಂದ ಪೂರ್ವ ಬಾಹು) ದಕ್ಷಿಣೋತ್ತರವಾಗಿ ಚಾಚಿಕೊಂಡಿದ್ದು ಪರಸ್ಪರ ಸಮಾಂತರವಾಗಿವೆ. ಉತ್ತರ ಮತ್ತು ದಕ್ಷಿಣ ಬಾಹುಗಳು ಒಂದಕ್ಕೊಂದು ಸಮಾಂತರ ವಾಗಿಲ್ಲ. (ಮಹಾವ್ಯಾಧ ಪೂರ್ವಾಕಾಶದ ಚಡಾವು ಏರುತ್ತಿರುವಾಗ ನಮ್ಮ ಎಡಗಡೆಯದು ಉತ್ತರ ಬಾಹು, ಬಲಗಡೆಯದು ದಕ್ಷಿಣ ಬಾಹು. ಪಶ್ಚಿಮಾಕಾಶದ ಇಳಿಜಾರು ಇಳಿಯುತ್ತಿರುವಾಗ ತದ್ವಿರುದ್ಧ.) ನಾಲ್ಕು ಉಜ್ಜ್ವಲ ಮತ್ತು ವರ್ಣ ಭರಿತ ನಕ್ಷತ್ರಗಳು ರಚಿಸುವ ಈ ಚತುರ್ಭುಜದ ಶೃಂಗ ನಕ್ಷತ್ರಗಳಿವು (ಆವರಣಗಳ ಒಳಗಿನ ಸಂಖ್ಯೆ ಉಜ್ಜ್ವಲತೆಯ ಮಾನಕದಲ್ಲಿ ಆಯಾ ನಕ್ಷತ್ರದ ಸ್ಥಾನವನ್ನು ಸೂಚಿಸುತ್ತದೆ; ಸೂರ್ಯನ ಸ್ಥಾನ ೦) : ಈಶಾನ್ಯ ಆರ್ದ್ರಾ (೧೦) ವಾಯುವ್ಯ ವ್ಯಾಧಭುಜ (೨೫), ನೈರುತ್ಯ ವ್ಯಾಧ-ಪೃಷ್ಠ (೭). ಆಗ್ನೇಯ ವ್ಯಾಧಜಂಘಾ (೮೦).

ಮಹಾವ್ಯಾಧದ ಸುಂದರ ಗಣಿತಾಕೃತಿಯ ಒಳಗೆ ಮೂರು ಖಚಿತ ತಾರೆಗಳು ಏಕರೇಖಸ್ಥ ವಾಗಿವೆ, ತ್ರಾಪಿಜ್ಯದ ಒಂದು ಕರ್ಣದ ನೇರ ಇವು ಇರಬಾರದಿತ್ತೇ ಅನ್ನಿಸುವಂತೆ. ಈ ಸರಳ ರೇಖೆಗೆ ವ್ಯಾಧಮೇಖಲೆ ಅಥವಾ ನಡುಪಟ್ಟಿ ಎಂದು ಹೆಸರು. ಇದನ್ನು ಆಗ್ನೇಯಕ್ಕೆ ವಿಸ್ತರಿಸ ಬೇಕು. ಇದರ ಮೇಲೆ ಸಾಗುವಾಗ ಇದರಿಂದ ಕೊಂಚ ಪಶ್ಚಿಮಕ್ಕೆ ನೀಲವರ್ಣದ ಮಹೋಜ್ಜ್ವಲ ನಕ್ಷತ್ರವೊಂದು ಎದುರಾಗುತ್ತದೆ. ಸಕಲ ನಕ್ಷತ್ರಗಳ ಕಾಂತಿಯೂ ಇದರಲ್ಲಿ ಘನೀ ಭವಿಸಿದೆಯೋ ಎನ್ನುವ ದೃಶ್ಯ. ಇದು ಲುಬ್ಧಕ (೧), ಮಹಾಶ್ವಾನಪುಂಜದ ಸದಸ್ಯ. ಇಂಗ್ಲಿಷಿ-ನಲ್ಲಿ ಇದನ್ನು ಸಿರಿಯಸ್, ಡಾಗ್ ಸ್ಟಾರ್, ಆಲ್ಫಾ ಕೆನಿಸ್ ಮೆಜೋರಿಸ್ ಎಂದು ಹೇಳು ತ್ತಾರೆ.

ಲುಬ್ಧಕದಿಂದ ನೇರ ದಕ್ಷಿಣಕ್ಕೆ ದೃಷ್ಟಿರೇಖೆ ಹರಿಸಿದಾಗ ಇದರ ಅವಳಿಯೋ ಎನ್ನುವಂತೆ ಅಲ್ಲೊಂದು ಸಮಗಾತ್ರದ ಮತ್ತು ಸಮ




ಚಿತ್ರ ೨

ಪ್ರಕಾಶದ ನಕ್ಷತ್ರ ಕಂಗೊಳಿಸುತ್ತಿರುವುದು. ಇದು ಅಗಸ್ತ್ಯ (೨). ಇಂಗ್ಲಿಷಿನಲ್ಲಿ ಕೆನೊಪಸ್. ದೇವನೌಕಾಪುಂಜದ ಸದಸ್ಯ.

ಅಗಸ್ತ್ಯ ಆಗ್ನೇಯಾಕಾಶದಲ್ಲಿರುವಾಗ ಲುಬ್ಧಕ-ಅಗಸ್ತ್ಯ ರೇಖೆಗೆ ಅಗಸ್ತ್ಯದಲ್ಲಿ ಲಂಬವೆಳೆದು ಇದನ್ನು ಪಶ್ಚಿಮಾಭಿಮುಖವಾಗಿ ವಿಸ್ತರಿಸಬೇಕು. ಇದು ಹೆಚ್ಚು ಕಡಿಮೆ ದಕ್ಷಿಣ ಹಾರಿಜಕ್ಕೆ ಸಮಾಂತರವಾಗಿರುವುದು. ಈ ರೇಖೆಯ ಮೇಲೆ ಸುಮಾರು ಲುಬ್ಧಕ-ಅಗಸ್ತ್ಯ ಅಂತರದಷ್ಟು ದೂರದಲ್ಲಿರುವ ಕ್ಷೀಣ ಪ್ರಕಾಶದ ನಕ್ಷತ್ರ ವೈತರಣೀಮುಖ (೯), ಲುಬ್ಧಕ-ಅಗಸ್ತ್ಯ-ವೈತರಣೀಮುಖ ಒಂದು ಸಮಭುಜ ಲಂಬಕೋನ ತ್ರಿಭುಜ. ಅಗಸ್ತ್ಯದಲ್ಲಿ ಲಂಬಕೋನವಿದೆ.

ಮಹಾವ್ಯಾಧದ ಉತ್ತರಕ್ಕೆ ವಿಜಯಸಾರಥಿ ಇದೆ. ಇದರಲ್ಲಿ ಸುದೂರವಾಗಿ ಹರಡಿ ಹೋಗಿರುವ ಸುಮಾರು ಎಂಟು ಬಿಡಿತಾರೆ-ಗಳನ್ನು ಎಣಿಸಬಹುದು. ಇವನ್ನು ಕಲ್ಪನೆಯ ಎಳೆಗಳಿಂದ ಪೋಣಿಸಿದರೆ ಬೆಳೆದ ಮಾವಿನಹಣ್ಣಿನ ಚಿತ್ರ ದೊರೆಯುತ್ತದೆ. ಆದರೆ ಮೇಲು ನೋಟಕ್ಕೆ ಇಲ್ಲಿ ಕಾಣುವುದು ಒಂದು ಲಂಬ ಕೋನ ತ್ರಾಪಿಜ್ಯ ಮಾತ್ರ. ಇದರ ಶೃಂಗ ನಕ್ಷತ್ರಗಳಿವು: ವಾಯುವ್ಯ ಬ್ರಹ್ಮಹೃದಯ (೬). ಈಶಾನ್ಯ ವಿಜಯಸಾರಥಿ ದ್ವಿತೀಯ (೪೮), ಆಗ್ನೇಯ ವಿಜಯಸಾರಥಿ ಅಷ್ಟಮ, ನೈರುತ್ಯ ಅಗ್ನಿ (೨೬). ವಿಜಯಸಾರಥಿ ದ್ವಿತೀಯದಲ್ಲಿಯ ಕೋನ ಲಂಬಕೋನ.

ವಾಸ್ತವವಾಗಿ ಅಗ್ನಿ ನಕ್ಷತ್ರ ವೃಷಭರಾಶಿಯ ಸದಸ್ಯ. ಮಹಾವ್ಯಾಧ ಮತ್ತು ವಿಜಯ ಸಾರಥಿ ಪುಂಜಗಳ ನಡುವಿನ ತೆರಪಿನಲ್ಲಿ ಕೊಂಚ ಪಶ್ಚಿಮಕ್ಕೆ ದೃಷ್ಟಿ ಹಾಯಿಸಿದರೆ ವೃಷಭರಾಶಿ ತಲಪುತ್ತೇವೆ. ಸುಮಾರು ಐದು ನಕ್ಷತ್ರಗಳು ಇಲ್ಲಿ V ಅಕ್ಷರಾಕಾರ ರೂಪಿಸಿವೆ. ಇದರ ಕೋನ ಶೃಂಗ ಪಶ್ಚಿಮಾಭಿಮುಖವಾಗಿದೆ. ದಕ್ಷಿಣ ಬಾಹುವಿನ ತುದಿ ನಕ್ಷತ್ರದ ಬಣ್ಣ ಮಾಣಿಕ್ಯ ಕೆಂಪು. ಇದು ರೋಹಿಣಿ (೧೩), ಆದ್ರ್ರಾದ ಆವಳಿಯೋ ಎಂಬಂತಿದೆ.

ರೋಹಿಣಿಯಿಂದ ತುಸು ಪಶ್ಚಿಮಕ್ಕಿರುವ ಬೆಳಕಿನ ರೇಣುಗಳ ನಿಕಟ ಸಂಚಯ ಚಳಿಗಾಲದ ಇರುಳಿನಲ್ಲಿ ಮುದುಡಿ ಒಗ್ಗೂಡಿಕೊಂಡಿರುವ ಕೋಳಿ ಮರಿಗಳ ಚಿತ್ರವನ್ನು ನೆನಪಿಗೆ ತರುತ್ತದೆ. ಇದನ್ನು ಏಕಾಗ್ರತೆಯಿಂದ ದಿಟ್ಟಿಸಿ ಇದರಲ್ಲಿರುವ ನಕ್ಷತ್ರಗಳ ಸಂಖ್ಯೆಯನ್ನು ಎಣಿಸಬೇಕು. ದೃಷ್ಟಿ ಸೂಕ್ಷ್ಮತೆಗೆ ಇದೊಂದು ಸವಾಲು. ಐದು ಅಥವಾ ಆರು ಎಣಿಸಬಲ್ಲವರ ದೃಷ್ಟಿ ಮಂದ; ಏಳು ಎಣಿಸಬಲ್ಲವರದು ಸಮರ್ಪಕ; ಎಂಟು ಎಣಿಸಬಲ್ಲವರದು ಸೂಕ್ಷ್ಮ. ಅಂದ ಹಾಗೆ ವ್ಯಕ್ತಿಯ ದೃಷ್ಟಿಗೂ (sight) ದರ್ಶನಕ್ಕೂ (vision) ಸಂಬಂಧವಿರಲೇಬೇಕೆಂದೇನೂ ಇಲ್ಲ! ಈ ಒಕ್ಕೂಟದ ಹೆಸರು ಕೃತ್ತಿಕೆ. ಇದರ ಆಕಾರ ಸರಿಸುಮಾರಾಗಿ ಸಪ್ತರ್ಷಿಮಂಡಲದ ಆಕಾರ ದಂತೆಯೇ ಇದ್ದು ಎರಡರಲ್ಲಿಯೂ ಏಳು ವಿವಿಕ್ತ ತಾರೆಗಳಿರುವುದರಿಂದ ಕೃತ್ತಿಕೆಯನ್ನೇ ಸಪ್ತರ್ಷಿಮಂಡಲವೆಂದು ತಪ್ಪಾಗಿ ತಿಳಿಯುವುದುಂಟು. ನವಿಲು ಮತ್ತು ಗಿಳಿ ಬೇರೆ ಬೇರೆ




ಚಿತ್ರ ೩

ಆಗಿರುವಂತೆ ಇವು ಕೂಡ.

ಕೃತ್ತಿಕೆ–ರೋಹಿಣಿ ರೇಖೆಯ ವಿಸ್ತರಣೆ ಮೇಲೆ (ಇದು ಪೂರ್ವಾಭಿಮುಖವಾಗಿರುವುದು) ಸಾಗುವಾಗ ಮಹಾವ್ಯಾಧದ ಉತ್ತರ ಬಾಹುವಿನ ಪಕ್ಕ ಉತ್ತರಕ್ಕಿರುವ ಬೆಳಕಿನ ಪಸೆ ತಲಪುತ್ತೇವೆ. ಇದು ಮೃಗಶಿರಾ. ಇದಕ್ಕಿಂತ ಮುಂದಿನದು ಈ ಹಿಂದೆ ಗುರುತಿಸಿದ ಕೆಂಪು ನಕ್ಷತ್ರ ಆದ್ರಾ್ರ.

ಮಹಾವ್ಯಾಧ ನೆತ್ತಿಗೆ ಬಂದಿರುವಾಗ ಮಹಾವ್ಯಾಧ–ವಿಜಯಸಾರಥಿ ಪುಂಜಗಳ ನಡುವಿನ ವಿಶಾಲ ತೆರಪಿನಲ್ಲಿ ಪೂರ್ವಕ್ಕೆ ದೃಷ್ಟಿ ಹಾಯಿಸಬೇಕು. ಅಲ್ಲಿ ಎದುರಾಗುವ ಎರಡು ಉಜ್ಜ್ವಲ ತಾರೆಗಳು ಮಿಥುನ ರಾಶಿಯನ್ನು ವ್ಯಾಖ್ಯಿಸುತ್ತವೆ. ಇವನ್ನು ಜೋಡಿಸುವ ರೇಖೆ ಆಗ್ನೇಯಾಭಿಮುಖವಾಗಿದೆ. ಈ ಯಮಳ ತಾರೆಗಳ ಪೈಕಿ ಉತ್ತರದ್ದು ಪುನರ್ವಸು ಪ್ರಥಮ (೨೩), ದಕ್ಷಿಣದ್ದು ಪುನರ್ವಸು ದ್ವಿತೀಯ (೧೭).

ಪುನರ್ವಸು ತಾರೆಗಳಿಂದ ದಕ್ಷಿಣಕ್ಕೆ ಮತ್ತು ಮಹಾವ್ಯಾಧದ ಪೂರ್ವಕ್ಕೆ ಇನ್ನೆರಡು ತಾರೆಗಳು ರಚಿಸುವ ಸಮ ಮತ್ತು ಸಮಾಂತರ ರೇಖೆ ಇದೆ. ಇವುಗಳ ಪೈಕಿ ಉಜ್ಜ್ವಲವಾದದ್ದು ದಕ್ಷಿಣಕ್ಕಿದೆ. ಇದು ಪೂರ್ವ ಶ್ವಾನ (೮). ಇನ್ನೊಂದು (ಕ್ಷೀಣವಾದದ್ದು) ಇದರ ಪಶ್ಚಿಮಕ್ಕಿರುವುದರಿಂದ ಪಶ್ಚಿಮ ಶ್ವಾನ. ಇವೆರಡೂ ಲಘು ಶ್ವಾನ ಪುಂಜದ ತಾರೆಗಳು. ಪುನರ್ವಸು ಮತ್ತು ಶ್ವಾನ ನಕ್ಷತ್ರಗಳು ಅಗಲ ಕಿರಿದಾದ ಉದ್ದ ಜಾಸ್ತಿಯಾದ ಸಮಾಂತರ ಚತುರ್ಭುಜ ರಚಿಸುತ್ತವೆ.

ಆದ್ರಾ್ರ–ಪೂರ್ವಶ್ವಾನ–ಲುಬ್ಧಕ ಒಂದು ದೊಡ್ಡ ಸಮಭುಜ ತ್ರಿಭುಜದ ಶೃಂಗಗಳು. ಚಳಿಗಾಲದ ಇರುಳಿನ ಮೊದಲ ಜಾವದಲ್ಲಿ ಈ ತ್ರಿಭುಜ ನೆತ್ತಿ ಮೇಲೆ ಬಂದಿರುವುದರಿಂದ ಇದಕ್ಕೆ ಹೇಮಂತ ತ್ರಿಭುಜವೆಂದು ಹೆಸರು.

ಸಪ್ತರ್ಷಿಮಂಡಲ ನಡುಬಾನಿಗೆ ಏರಿರುವಾಗ ಇದರ ವಕ್ರರೇಖೆಯನ್ನು ಆಗ್ನೇಯದ ತಗ್ಗಿಗೆ



ಚಿತ್ರ ೪




ಚಿತ್ರ ೫

ಸರಾಗವಾಗಿ ವೃದ್ಧಿಸಬೇಕು (ಚಿತ್ರ ೨). ಆಂಗೀರಸ್ಸು–ವಸಿಷ್ಠ–ಮರೀಚಿ ಮೂಲಕ ಸಾಗುವ ಈ ಎಳೆಯನ್ನು ತಡೆದು ನಿಲ್ಲಿಸುವ ಮೊದಲ ಉಜ್ಜ್ವಲ ನಕ್ಷತ್ರ ಸ್ವಾತೀ (೪). ಇದು ಸಹದೇವ ಪುಂಜದ ಸದಸ್ಯ. ಮೂಡುತ್ತಿರುವಾಗ ಹಾಗೂ ಕಂತುತ್ತಿರುವಾಗ ಇದು ಬೀರುವ ಬಣ್ಣದ ಓಕುಳಿ ಮಿಂಚುಳ್ಳಿಯ ನೆಗೆತವನ್ನು ನೆನಪಿಗೆ ತರುತ್ತದೆ: ಕೆಂಪು–ಕಿತ್ತಳೆ–ಹಳದಿ–ನೀಲಿ ರೋಹಿತ ಪ್ರದರ್ಶನ.

ವಕ್ರರೇಖೆಯನ್ನು ಸ್ವಾತೀ ನಕ್ಷತ್ರದಿಂದ ಮತ್ತೂ ಮುಂದೆ ಮುಂದೆ ತುಸು ತುಸುವೇ ಬಲಕ್ಕೆ ಹರಿಯಗೊಡಬೇಕು. ಕಲ್ಪನೆಯ ಈ ಸಲಿಲಧಾರೆ ಚಿತ್ತಾನಕ್ಷತ್ರದ (೧೬) ಬೆಳಕಿನ ಊಟೆಯಿಂದ ಪುಷ್ಟಿಗೊಂಡು ಹಸ್ತಾನಕ್ಷತ್ರಗಳ ಚತುರ್ಭುಜಾಕಾರದ ಕುಂಡದಲ್ಲಿ ಲೀನವಾಗುತ್ತದೆ. ಉತ್ತರದ ಸಪ್ತರ್ಷಿಮಂಡಲದ ಕ್ರತುವಿನಿಂದ — ಅಥವಾ ಇನ್ನೂ ಮುಂದೆ ಹೋಗಿ ಸಾಕ್ಷಾತ್ ಧ್ರುವನಕ್ಷತ್ರದಿಂದಲೇ— ತೊಡಗುವ ಈ ಧಾರೆ ದಕ್ಷಿಣದ ಹಸ್ತಾ ಸಮೂಹದ ವರೆಗೆ ಸರಾಗವಾಗಿ ಹರಿದು ಮತ್ತೂ ದಕ್ಷಿಣಕ್ಕೆ ತುಳುಕುವ ದೃಶ್ಯ 'ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ ಚುಂಬಕ ಗಾಳಿಯು ಬೀಸುತಿದೆ' ಎನ್ನುವ ಕವಿಕಲ್ಪನೆಯ ಖಗೋಳೀಯ ಪ್ರಾತ್ಯಕ್ಷಿಕೆ.

ಧ್ರುವ ಮತ್ತು ಸ್ವಾತೀ ನಕ್ಷತ್ರಗಳ ಜೋಡಣೆ ಪಾದವಾಗಿದ್ದು ಪೂರ್ವಕ್ಕೆ (ವಾಸ್ತವವಾಗಿ ಈಶಾನ್ಯಕ್ಕೆ) ಶೃಂಗವಿರುವಂತೆ ಸಮಭುಜ ತ್ರಿಭುಜ ರಚಿಸಬೇಕು. ಇದರ ಶೃಂಗವನ್ನು ವ್ಯಾಖ್ಯಿಸುವ ನೀಲಕಾಂತಿಯ ನಕ್ಷತ್ರ ಅಭಿಜಿತ್ (೫). ಈ ತ್ರಿಭುಜ ಜೂನ್ ಮತ್ತು ಜುಲೈ ತಿಂಗಳ ಸಂಜೆ ಆಕಾಶದ ವೈಭವ. ಎಂದೇ ಇದು ಗ್ರೀಷ್ಮ ತ್ರಿಭುಜ.

ಮಿಥುನ ರಾಶಿಗೂ ಹಸ್ತಾ ಚತುರ್ಭುಜಕ್ಕೂ ನಡುವೆ, ಅಂದರೆ ಮಿಥುನದ ಆಗ್ನೇಯಕ್ಕೆ, ಸುಮಾರು ಆರು ನಕ್ಷತ್ರಗಳು ರೂಪಿಸುವ ಹಣತೆ ಆಗ್ನೇಯದತ್ತ ಓರೆಯಾಗಿ ಅಸಮತೋಲ ಭಂಗಿಯಲ್ಲಿ ನಿಂತಿದೆ. ಇದರ ಚತ್ತಿಕೊಡಿಯಲ್ಲಿರುವ (ದಕ್ಷಿಣಕೊನೆ) ನಕ್ಷತ್ರ ಮಖಾ (೨೧). ಈ ನಕ್ಷತ್ರ ಪುಂಜದ ಹೆಸರು ಸಿಂಹ (ಚಿತ್ರ ೩).

ಹಸ್ತಾದ ಆಗ್ನೇಯಕ್ಕೆ, ತೆಂಕುಬಾನಿನ ಇಳಿಜಾರಿನಲ್ಲಿ ರಂಜಿಸುತ್ತಿರುವ ನಾಲ್ಕು ಉಜ್ಜ್ವಲ ನಕ್ಷತ್ರಗಳೂ ಇವುಗಳಿಂದ ಪೂರ್ವಕ್ಕೆ ಸಿಡಿದಿರುವ ಸಮೋಜ್ಜ್ವಲತೆಯ ಇನ್ನೆರಡು ಕಿಡಿಗಳೂ ಗಾಳಿಪಟ ಮತ್ತು ಅದರ ಬಾಲವನ್ನು ರೂಪಿಸುತ್ತವೆ (ಚಿತ್ರ ೪). ಗಾಳಿಪಟದ ಉತ್ತರ–ದಕ್ಷಿಣ ಶೃಂಗಗಳನ್ನೂ ಪೂರ್ವ–ಪಶ್ಚಿಮ ಶೃಂಗಗಳನ್ನೂ ಜೋಡಿಸುವ ಸರಳರೇಖೆಗಳು ಶಿಲುಬೆಯ ಆಕಾರವನ್ನು ನೆನಪಿಗೆ ತರುತ್ತವೆ. ಇದು ದಕ್ಷಿಣದ ಶಿಲುಬೆ (Southern Cross). ಇದರ ಭಾರತೀಯ ನಾಮ ತ್ರಿಶಂಕು. ತ್ರಿಶಂಕುಪಾದ (೨೦) ಈ ಪುಂಜದ ಸದಸ್ಯ. ತ್ರಿಶಂಕುವಿನ ಪೂರ್ವಕ್ಕಿರುವ ಎರಡು ತಾರೆಗಳು (ಗಾಳಿಪಟದ ಬಾಲ) ಕಿನ್ನರ ಪುಂಜದ ಪ್ರಮುಖ ನಕ್ಷತ್ರಗಳು. ಇವುಗಳ ಪೈಕಿ ಪೂರ್ವದ್ದು ಕಿನ್ನರಪಾದ (೩), ಪಶ್ಚಿಮದ್ದು (ತ್ರಿಶಂಕುಸಮೀಪದ್ದು) ಕಿನ್ನರ ಪಾರ್ಷ್ಣಿ (೧೧).

ಮಹಾವ್ಯಾಧ ಪೂರ್ತಿಕಂತಿದ ಬಳಿಕ ಹಸ್ತಾದ ಆಗ್ನೇಯಕ್ಕೆ ವೃಶ್ಚಿಕ ರಾಶಿ ಮೂಡುತ್ತದೆ. ಜ್ಯೇಷ್ಠಾನಕ್ಷತ್ರ (೧೫) ಇದರಲ್ಲಿದೆ. ರೋಹಿಣಿ, ಆರ್ದ್ರಾ ನಕ್ಷತ್ರಗಳಂತೆ ಇದರ ಬಣ್ಣ ಕೂಡ ಕೆಂಪು (ಚಿತ್ರ ೫).

ಹಾಗಾದರೆ ಧ್ರುವ ನಕ್ಷತ್ರದ ಸ್ಥಾನಸಂಖ್ಯೆ ಎಷ್ಟು? ಸೂರ್ಯನಿಗೆ ೦, ಲುಬ್ಧಕಕ್ಕೆ ೧ ಇತ್ಯಾದಿ ಸ್ಥಾನಸಂಖ್ಯೆ ನೀಡಿರುವ ಮಾಸಕದಲ್ಲಿ ಧ್ರುವ ನಕ್ಷತ್ರದ ಸ್ಥಾನ ಸಂಖ್ಯೆ ೪೮. ನೆಲದಲ್ಲಿ ಹೇಗೊ ಬಾನಿನಲ್ಲೂ ಹಾಗೆ ಕುರ್ಚಿಯ ಸ್ಥಾನಕ್ಕೂ ಯೋಗ್ಯತೆಯ ಮಾನಕ್ಕೂ ಹೊಂದಾಣಿಕೆ ಇರುವುದು ಅತಿ ವಿರಳ. ✡

(ಈ ಮಾಲೆಯ ಕೊನೆಯ ಲೇಖನ ಮುಂದಿನ ಸಂಚಿಕೆಯಲ್ಲಿ ಪ್ರಕಟವಾಗಲಿದೆ.)

# ವಿಷ್ಣುದಾಸ ಭಾವೆ

## ಮರಾಠಿ ರಂಗಭೂಮಿಯು ಪಿತಾಮಹನೆ ?

ಪ್ರಹ್ಲಾದ ಮುದಗಲ್ಲ

ಆದ್ಯ ರಂಗಾಚಾರ್ಯರು ತಮ್ಮ 'ಭಾರತಿಯ ರಂಗಭೂಮಿ' ಗ್ರಂಥದಲ್ಲಿ 'ಹೊಸ ರಂಗಭೂಮಿಯೊಂದರ ಅನ್ವೇಷಣೆ' ಕುರಿತು ತಮ್ಮ ವಿಚಾರಗಳನ್ನು ೧೧೫ನೆಯ ಪುಟದಲ್ಲಿ ಕೆಳಗಿನಂತೆ ಹೇಳಿದ್ದಾರೆ:

"ಸುಮಾರು ಇದೇ ಸಮಯಕ್ಕೆ ಮಹಾರಾಷ್ಟ್ರದ ದಕ್ಷಿಣದ ಅಂಚಿನ ಸಾಂಗಲಿ ಎಂಬಲ್ಲಿ ಇಂಥದೇ ಪ್ರಯತ್ನವೊಂದು ನಡೆದಿತ್ತು. ೧೮೪೩ರಲ್ಲಿ ಸಾಂಗಲಿಯ ರಾಜನು ಒಂದು ದಶಾವತಾರ (ಯಕ್ಷಗಾನ) ಆಟವನ್ನು ನೋಡಿದನು. ಅದರ ನಿರ್ಮಾಣದ ಒರಟು ವಿಧಾನಗಳು ಹಿಡಿಸಲಿಲ್ಲವಾದರೂ ಅವನು ಆ ನಾಟಕರೂಪಕ್ಕೆ ಮನಸೋತನು. ಅದು 'ದೇಶಿಯ'ವೂ ಆಗಿತ್ತು, ಉತ್ತಮವೂ ಆಗಿತ್ತು. ಮನರಂಜನೆ ಮತ್ತು ಶಿಕ್ಷಣ ಎರಡಕ್ಕೂ ಅದು ಮಾಧ್ಯಮವಾಗಬಲ್ಲದು. ಅವನು ನೋಡಿದ್ದ ಇಂಗ್ಲಿಷ್ ನಾಟಕಗಳೊಂದಿಗೆ ಅದನ್ನು ಹೋಲಿಸಬಹುದಾಗಿತ್ತು. ಕಲಾಪ್ರೇಮದಿಂದಲೋ ದೇಶಪ್ರೇಮದಿಂದಲೋ ಅಥವಾ ವಿದೇಶೀ ವಿಜೇತರನ್ನು ಪರೋಕ್ಷವಾಗಿ ಚುಚ್ಚುವ ಅಪೇಕ್ಷೆಯಿಂದಲೋ ಅಂತೂ ಈ ನಾಟಕ ಪ್ರಕಾರವನ್ನು ಹಿಡಿದು ಪೋಷಿಸಿ ಉತ್ತಮಪಡಿಸಬೇಕೆಂದು ಅವನು ನಿರ್ಧರಿಸಿದನು. ಈ ಕೆಲಸವನ್ನು ವಿಷ್ಣುದಾಸ ಭಾವೆ ಎಂಬುವನಿಗೆ ವಹಿಸಿ ತಾನು ನೆರವು ನೀಡುವುದಾಗಿ ಭರವಸೆ ಕೊಟ್ಟನು. ವಿಷ್ಣುದಾಸನು 'ಸೀತಾಸ್ವಯಂವರ' ಎಂಬ ಪೌರಾಣಿಕ ನಾಟಕವನ್ನು ತಯಾರಿಸಿ ೧೮೪೩ ರಲ್ಲಿ ರಾಜನ ಮತ್ತು ಅವನ ಆಸ್ಥಾನಿಕರ ಎದುರಿಗೆ ಪ್ರದರ್ಶಿಸಿದನು."

ವಿಷ್ಣುದಾಸ ಅಮೃತ ಭಾವೆಯ ಕಾಲವು ೧೮೧೯/೨೦ ರಿಂದ ೧೩-೨-೧೯೦೧ ಎಂದು ತಿಳಿಯಲಾಗಿದೆ. ಕನ್ನಡ ಭಾಗವತ ಆಟಕ್ಕೆ ತನ್ನ ಋಣವನ್ನು ವ್ಯಕ್ತಪಡಿಸುತ್ತ ಭಾವೆ 'ಸೀತಾಸ್ವಯಂವರ' ಆಖ್ಯಾನದಲ್ಲಿ ಶ್ರೀಗಣೇಶನನ್ನು ಕುರಿತು "ಕರನಾಟಕಿ ನಾಟಕಕರೀ ಅಸೀ ಈಶ ಆಜ್ಞಾವಾಟೆ ಮಮ ಗಜಾನನ" ಎಂದು ಹೇಳಿದ್ದಾನೆ. ಇದಲ್ಲದೆ ಶ್ರೀಗಣೇಶನ ಈ ಸ್ತುತಿಯನ್ನು ಆತನು ಕೈಕೊಳ್ಳುತ್ತಿದ್ದ ಪ್ರತಿಯೊಂದು ಆಟದ ಲ್ಲಿಯೂ ಹೇಳಲಾಗುತ್ತಿತ್ತು. 'ನಾಟ್ಯ ಕವಿತಾ ಸಂಗ್ರಹ' ಎಂಬ ಗ್ರಂಥವನ್ನು ಭಾವೆ ರಚಿಸಿ ೧-೧-೧೮೮೫ ರಲ್ಲಿ ಪ್ರಕಟಿಸಿದನು. ಅದರಲ್ಲಿ "ಕನ್ನಡ ಭಾಗವತ ಆಟಗಳು ಅಸ್ತವ್ಯಸ್ತ ಮತ್ತು ಬೀಭತ್ಸವಾಗಿರುತ್ತವೆ" ಎಂಬ ತಾತ್ಪರ್ಯ ಭಾವವನ್ನು ವ್ಯಕ್ತಪಡಿಸಿದ್ದಾನೆ. (ಓಬಡಧೋಬಡ ಬೀಭತ್ಸ-Disgusting and hideous).

ಹಾಸ್ಯಗಾರ ಭಾಗವತರ ಮೇಳ ಕ್ರಿಸ್ತಶಕ ೧೮೪೨ರಲ್ಲಿ ಸಾಂಗಲಿಗೆ ಭೇಟಿ ಕೊಟ್ಟದ್ದು ಅಂತ ಸಂಗತಿ ಮಾತ್ರವಲ್ಲ, ೨-೩ ಆಟಗಳನ್ನು ಸಾಂಗಲಿಯ ಶ್ರೀ ಗಣೇಶ ದೇವಾಲಯದ ಪಕ್ಕದಲ್ಲಿ ಅವರು ಆಡಿತೋರಿಸಿದರು. ತಾರೀಖು ೧೯-೭-೧೮೫೧ರಂದು ಸಾಂಗಲಿಯ ಅಧಿಪತಿ

ಚಿಂತಾಮಣರಾವ್ ಅಪ್ಪಾ ಪಟವರ್ಧನರು ನಿಧನರಾದ ಕಾರಣ ವಿಷ್ಣುದಾಸ ಭಾವೆನಿಗೆ ದೊರೆಯುತ್ತಿದ್ದ ರಾಜಾಶ್ರಯವು ಇಲ್ಲವಾಗಿ ಮುಂದೆ ಆತ ಸಾಲಗಾರನೂ ಆದ. ಆಗ ಬಾಳಾಜಿಪಂತ ಮಾಟೆ ಸಾಂಗಲಿ ಸಂಸ್ಥಾನದ ಕಾರಭಾರಿಯಾಗಿ ಜವಾಬದಾರಿ ವಹಿಸಿದ್ದರು. ಅವರು ಭಾವೆನಿಗೆ "ಸಾಲ ತೀರಿಸುವುದಕ್ಕೆ ಪರ ಊರಿಗೆ ಮೇಳವನ್ನು ತೆಗೆದುಕೊಂಡು ಹೋಗಿ ಪ್ರದರ್ಶಿಸಿ ಹಣ ಗಳಿಸು." ಎಂಬ ಸಲಹೆ ನೀಡಿದರು. ಈ ಸಲಹೆ ಭಾವೆನಿಗೆ ಹಿಡಿಸಿತು. ಕ್ರಿಸ್ತಶಕ ೧೮೬೨ ರ ವರೆಗೆ ತನ್ನ ಮೇಳವನ್ನು ಕಟ್ಟಿಕೊಂಡು ಸಾತಾರಾ, ಪುಣೆ, ಅಹಮದನಗರ, ಮುಂಬೈ ಇತ್ಯಾದಿ ಪಟ್ಟಣಗಳಲ್ಲಿ ಪ್ರದರ್ಶನ ಕೈಕೊಂಡನಲ್ಲದೆ ತನ್ನ ಮೇಳವನ್ನು ೧೮೬೨ ರಲ್ಲಿ ನಿಲ್ಲಿಸಿದನು. ಇಪ್ಪತ್ತುಮೂರು ವರ್ಷಗಳ ನಂತರ 'ನಾಟ್ಯ ಕವಿತಾ ಸಂಗ್ರಹ' ಎಂಬ ಗ್ರಂಥವನ್ನು ಬರೆದನು. ಈ ಗ್ರಂಥಕ್ಕೆ ಹತ್ತು ಪುಟಗಳ ಪ್ರಸ್ತಾವನೆ ಹಾಗೂ ಪಾತ್ರಗಳಿಗಾಗಿ ಸೂತ್ರಧಾರನು ಹೇಳುವುದಕ್ಕಾಗಿ ಐವತ್ತೊಂದು ಪದ್ಯಗಳೂ ಇವೆ. ಪ್ರಸ್ತಾವನೆಯಲ್ಲಿ ಭಾರತೀಯ ನಾಟ್ಯ ಇತಿಹಾಸ, ತಾನೇಕೆ ನಾಟಕ ರಚಿಸತೊಡಗಿದೆ, ಭೆಟ್ಟಿ ಕೊಟ್ಟ ಪಟ್ಟಣಗಳಲ್ಲಿ ತನ್ನ ಆಟಗಳನ್ನು ನೋಡಿದ ರಸಿಕರ ಪ್ರಶಂಸೆ ಇತ್ಯಾದಿಗಳ ಬಗ್ಗೆ ಹೇಳಿದ್ದಾನೆ. ಆದರೆ ತಾನು ರೂಢಿಯಲ್ಲಿ ತಂದ ನಾಟ್ಯ ಪದ್ಧತಿ ಮತ್ತು ಬಳಸಿದ ತಂತ್ರಗಳ ಬಗ್ಗೆ ಯಾವ ವಿಚಾರಗಳನ್ನೂ ವ್ಯಕ್ತಪಡಿಸಿಲ್ಲ. ಕರ್ನಾಟಕದ ಭಾಗವತರ ಆಟಗಳನ್ನು ಕುರಿತು, "ಕರ್ನಾಟಕದಲ್ಲಿ ಪ್ರದರ್ಶಿಸುವ ನಾಟಕಗಳಲ್ಲಿ ಮನೋರಂಜನೆ ಎಳ್ಳಷ್ಟೂ ಇರುವುದಿಲ್ಲ. ಸೋಗು ಹಾಕಿದವರ ವೇಷವಂತೂ ಅತ್ಯಂತ ಕೆಳ-



ಮಟ್ಟದ್ದಾಗಿರುವುದು. ಪಾತ್ರಗಳಿಗೆ ಹಾಡಲ ಬರಲಿ, ಬಾರದೇ ಇರಲಿ, ಎಲ್ಲ ಪಾತ್ರಗಳು ಹಾಡುತ್ತ ನರ್ತಿಸುತ್ತಲೆ ಬರಬೇಕು. ಈ ಆಟಗಳನ್ನು ನೋಡುವ ಅಶಿಕ್ಷಿತ ಹಳ್ಳಿಗರ ಮನಸ್ಸು ತೃಪ್ತವಾದರೂ ಪಂಡಿತರಿಗೆ ಇದರಿಂದ ಆನಂದವಾಗದೇ ತ್ರಾಸವಾಗುವುದು," ಎಂದು ಹೇಳಿ, "ಶ್ರೀಮಂತ ಅಪ್ಪಾಸಾಹೇಬರು ರಸಜ್ಞರಿದ್ದರು. ಅವರಿಗೆ ಅಸ್ತವ್ಯಸ್ತ ಮತ್ತು ಭೀಭತ್ಸ ಕೃತಿಗಳು ರುಚಿಸಲಿಲ್ಲ. ಅದುದರಿಂದ ಅವರು ಕರ್ನಾಟಕ ಭಾಗವತ ಆಟದಲ್ಲಿ ಸುಧಾರಣೆ ಕೈಕೊಂಡು ಮರಾಠಿ ಭಾಷೆಯಲ್ಲಿ ಆಟಗಳನ್ನು ರಚಿಸಲು ನನಗೆ ಆಜ್ಞಾಪಿಸಿದರು," ಎಂಬುದಾಗಿ ಬರೆದಿದ್ದಾನೆ.

ಕ್ರಿಸ್ತಶಕ ೧೮೪೩ ರಿಂದ ಕ್ರಿಸ್ತಶಕ ೧೯೭೩ರ ಕಾಲಖಂಡದ ಪ್ರತಿಯೊಂದು ಪ್ರಯೋಗದ ಗಣಪತಿ ಸ್ತವನದಲ್ಲಿ ಕರ್ನಾಟಕದ ಭಾವಗತ-ಮೇಳದ ಬಗ್ಗೆ ಗೌರವ ವ್ಯಕ್ತಪಡಿಸುತ್ತಿದ್ದ ಭಾವೆ ಕ್ರಿಸ್ತಶಕ ೧೮೮೫ರಲ್ಲಿ ಬರೆದ 'ನಾಟ್ಯ ಕವಿತಾ ಸಂಗ್ರಹ'ದಲ್ಲಿ ಕರ್ನಾಟಕ ಭಾಗವತ ಆಟಗಳ ಬಗ್ಗೆ ಮೂಗು ಮುರಿಯಲು ಕಾರಣವೇನು ? ಭಾವೆ ವ್ಯಕ್ತಪಡಿಸಿದಂತೆ ಕರ್ನಾಟಕದ ಭಾಗವತ ಆಟಗಳು ಅವಾಸ್ತವ ಮತ್ತು ಭೀಭತ್ಸವಾಗಿರುವವೆ?

ಸಾಂಗಲಿ ಅಧಿಪತಿ ರಸಜ್ಞ ಎಂದು ಹೇಳಿದ ಭಾವೆ, ಕನ್ನಡ ಭಾಗವತ ಮೇಳ ಮೂರು ಪ್ರಯೋಗಗಳನ್ನು ಕೈಕೊಂಡ ಬಗ್ಗೆ ಉಲ್ಲೇಖಿಸುತ್ತಾನೆ: "ಒಂದು ವೇಳೆ ಕನ್ನಡ ಭಾಗವತರ ಆಟ ಕೆಳ ಮಟದ್ದಾಗಿದ್ದರೆ, ಅಧಿಪತಿಯ ಅಭಿರುಚಿಗೆ ಹಿಡಿಸದಿದ್ದಲ್ಲಿ 'ಸಾಕು ಮಾಡಿರಿ' ಎಂದು ಹೇಳುವುದು ಸಹಜವಿತ್ತು." ಆದರೆ ಹಾಗೆ ಆಗಲಿಲ್ಲ. ಅಧಿಪತಿಯ ಅಭಿರುಚಿ ಕೊನೆಯ ಸ್ತರದ್ದಾಗಿತ್ತೆ? ಇಂತಹ ಕೆಳ ಮಟ್ಟದ ಆಟಗಳ ಅನುಕರಣೆ ಮಾಡಿ ಮರಾಠಿಯಲ್ಲಿ ಆಟ ರಚಿಸಲು ಹೇಳುವಂತಹ ರಸಿಕತೆ ಅಧಿಪತಿಯದಾಗಿತ್ತೆ? 'ನಾಟ್ಯ ಕವಿತಾ ಸಂಗ್ರಹ' ಗ್ರಂಥದಲ್ಲಿ "ಅವಾಸ್ತವ, ಭೀಭತ್ಸ" ಎಂದು ಹೇಳುವಾಗ್ಗ ಭಾವೆ ತಾನೇ ಕೈಕೊಂಡ, ಗಣಪತಿ ಸ್ತವನದಲ್ಲಿಯ ಕರ್ನಾಟಕದ ಭಾಗವತ ಆಟದ ಸ್ತುತಿಯನ್ನು ಮರೆತಿದ್ದಾನೆ. ಹಳ್ಳಿಯ "ಇವು ಅಶಿಕ್ಷಿತ-ಜನಕ್ಕೆ ಮನೋರಂಜನೆಯನ್ನುಂಟುಮಾಡುವ ಆಟಗಳಾಗಿದ್ದವು" ಎಂದು ತನ್ನ ವಿಚಾರಗಳನ್ನು ವ್ಯಕ್ತಪಡಿಸುವ ಭಾವೆ, ಪ್ರತ್ಯಕ್ಷವಾಗಲಿ ಅಪ್ರತ್ಯಕ್ಷವಾಗಲಿ, ತನ್ನ ಅನ್ನದಾತ ಸಾಂಗಲಿ ಅಧಿಪತಿಯನ್ನು ಅಶಿಕ್ಷಿತ ಎಂದು ಕರೆದಿದ್ದಾನೆ ಎಂದು ತರ್ಕ ಮಾಡಲು ಬರುವುದು. ಹೀಗಾಗಿ ಭಾವೆ ವ್ಯಕ್ತಪಡಿಸಿದ ವಿಚಾರಗಳು ಅಸಮಂಜಸವಾಗಿವೆ ಎಂಬುದು ಸಂಶೋಧಕರು ಒಪ್ಪು-ವಂತಹ ಸಂಗತಿಯಾಗಿದೆ.

ಕರ್ನಾಟಕದ ಭಾಗವತ ಆಟಗಳಲ್ಲಿ ಕಥಾನಕವು ನೃತ್ಯದ ಅಂಗವಾಗಿದ್ದು, ಅಂಗವಿಕ್ಷೇಪಣೆ ಮುಖಾಂತರ ಹಾವಭಾವ ವ್ಯಕ್ತಪಡಿಸಲಾಗುವುದು. ಇದು ಪ್ರಮುಖವಾಗಿ ಪಾಲಿಸತಕ್ಕ ನಿಯಮವೆಂದು ಎಲ್ಲರೂ ಒಪ್ಪುವುದು. ಶರೀರದ ಅವಯವಗಳ ಚಲನೆ ಮತ್ತು ಹಸ್ತ ಪಾದ ಮುದ್ರಾ ಸಂಕೇತಗಳ ಅ-ಬ-ಕ- ಜ್ಞಾನ



ಕರ್ನಾಟಕದ ಭಾಗವತ ಮೇಳಕ್ಕೆ ಬಡೋದಾ ಅಥವಾ ಸಾಂಗಲಿ ಅಧಿಪತಿ ಬಕ್ಷೀಸು ಕೊಟ್ಟ ಬಾಲಕೃಷ್ಣನ ಪ್ರತಿಮೆ.

ವಿಲ್ಲದನಿಗೆ ಇದೆಲ್ಲ 'ಭೀಭತ್ಸ, ಅವಾಸ್ತವ'ವಾಗಿ ಕಾಣುವುದು ಸಹಜ - ವಿಷ್ಣುದಾಸ ತನ್ನ ಆಟಗಳನ್ನು ಕಲ್ಪಿಸುವಾಗ ನೃತ್ಯ ಪ್ರಾಧಾನ್ಯವನ್ನು ತೆಗೆದುಹಾಕಿ ಇನ್ನುಳಿದ ಅಸ್ಥಿಪಂಜರದಲ್ಲಿಯ ಕೆಲವೇ ಅಂಶವನ್ನು ಬಳಸಿಕೊಂಡಿದ್ದಾನೆ. ಭಾವೆ, ರಂಗಮಂಚದ ಮೇಲೆ ಬರುವ ಎಲ್ಲ ಪಾತ್ರಗಳು ಹಾಡು ಹೇಳುವ ರೀತಿಯನ್ನು ಬಳಸಿರುವುದಿಲ್ಲ. "ಕನ್ನಡ ಭಾಗವತರ ಆಟಗಳಲ್ಲಿ ಹಾಡಲು ಬರಲಿ ಬಾರದೆ ಇರಲಿ. ಎಲ್ಲ ಪಾತ್ರಗಳು ಹಾಡಲೇ ಬೇಕು. ನನ್ನ ಆಟದಲ್ಲಿ ಪಾತ್ರಗಳು ಹಾಡುವ ಬದಲು ಕೇವಲ ಸೂತ್ರಧಾರನೊಬ್ಬನೆ ಹಾಡು ಹೇಳುವನು," ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ. ಆದ್ದರಿಂದ ಕರ್ನಾಟಕದ ಭಾಗವತ ಆಟಗಳು 'ಅವಾಸ್ತವ - ಬೀಭತ್ಸ'ವಾಗಿರದೆ ಈ ವಿಷಯದ ಬಗ್ಗೆ ಅಜ್ಞಾನಿಯಾದ ವಿಷ್ಣುದಾಸನ ಮಾನಸಿಕ ಪ್ರತಿಕ್ರಿಯೆ ಆಗಿದೆ ಎಂಬ ವಿಚಾರ ಬಾರದೆ ಇರದು.

ಕನ್ನಡ ಭಾಗವತ ಆಟಗಳಲ್ಲಿಯ ಪಾತ್ರಗಳು ಭಾಗವತನ ಸಂಗೀತದ ತಾಳಕ್ಕನುಸರಿಸಿ ನೃತ್ಯ ಮಾಡುತ್ತ ರಂಗಮಂಚವನ್ನು ಪ್ರವೇಶಿಸುವವು. ಅಭಿನಯದಲ್ಲಿ ನೃತ್ಯದ ಅಂಶವಿರುವುದು. ಪಾತ್ರಗಳ ಆಶುಸಂಭಾಷಣೆಗೆ ಪದ್ಯದಲ್ಲಿ ಅಡಕವಾದ ಅರ್ಥಕ್ಕನುಸರಿಸಿ ಪ್ರಯೋಗಿಸುವ ಹಿನ್ನೆಲೆ ಇರುವುದು. ಅಲ್ಲದೇ ಪಾತ್ರವಹಿಸಿದ ವ್ಯಕ್ತಿಯ ಸಾಮಾಜಿಕ, ಸಾಂಸ್ಕೃತಿಕ ಯೋಗ್ಯತೆಯ ಪ್ರಭಾವವೂ ಕಂಡುಬರುವುದು.

ಭಾವೆ ರಚಿಸಿದಂಥ ಮಾದರಿಯ ಆಟಗಳು ಆತ ಜನಿಸುವುದಕ್ಕಿಂತ ೧೫೦ ವರುಷ ಮೊದಲೇ ಅಸ್ತಿತ್ವದಲ್ಲಿದ್ದುವು. ಇದಲ್ಲದೆ ತಂಜಾವರದ ಮರಾಠಾ ನಾಯಕ ಅರಸರು ಬರೆದ ನಾಟಕಗಳು ಇದೇ ಮಾದರಿಯದಾಗಿವೆ. ಆದುದರಿಂದ ಮರಾಠಿ ರಂಗಭೂಮಿಯ ಪಿತಾಮಹ ಯಾರು? ವಿಷ್ಣುದಾಸ ಭಾವೆಯೋ ಅಥವಾ ತಂಜಾವರದ ಮರಾಠಾ ಅರಸರೆ?

ಸಾಂಗಲಿಯ ಅಧಿಪತಿ ಚಿಂತಾಮಣರಾವ್ ದಿನಚರಿಯನ್ನು ಬರೆಯುತ್ತಿದ್ದರು. ಸದ್ಯ ಉಪಲಬ್ಧವಿರುವ ದಿನಚರಿಯ ಕಾಲ ೧೮-೧೨-೧೮೪೬ ರಿಂದ ೨೦-೨-೧೮೫೧ ರ ವರೆಗಿನದು. ಚಿಂತಾಮಣರಾವ್ ೧೯-೭-೧೮೫೧ರಂದು ನಿಧನ ಹೊಂದಿದರೆಂಬುದನ್ನು ಈ ಮೊದಲೆ ಹೇಳಿದ್ದರೂ ದಿನಚರಿಯಲ್ಲಿಯ ಹೆಚ್ಚಿನ ಹನ್ನೆರಡು ದಿನಗಳಲ್ಲಿ ಅವರ ಮೃತ್ಯುವಿನ ಬಳಿಕದ ಉತ್ತರ ಕ್ರಿಯೆಯನ್ನು ಕುರಿತು ಟಿಪ್ಪಣೆ ಕೈಕೊಂಡದ್ದು ಕಂಡು ಬರುವದು. ಸುಮಾರು ನಾಲ್ಕೂವರೆ ವರುಷದ ಕಾಲಖಂಡದ, ಕನ್ನಡಿಯಾದ ಈ ದಿನಚರಿಯಲ್ಲಿ ಭಾವೆ ಸಾಂಗಲಿ ಅಧಿಪತಿಯ ಅರಮನೆಯಲ್ಲಿ ತನ್ನ 'ರಾಮ ಅವತಾರಿ ಖೇಳ'ವನ್ನು ದಿ. ೧೦-೬-೧೮೪೫ ಮತ್ತು ದಿ. ೧೦-೧೧-೧೮೪೫ ಪ್ರಯೋಗಿಸಿದ ಉಲ್ಲೇಖ ದೊರೆಯುವುದು. ಇದಲ್ಲದೆ "ಛ-೧೩ ರಬೀಲಾವಲ ಫಾಲ್‌ಗುಣ ಶು||-೧೫ ಸೋಮವಾರ; ಮುಕ್ಕಾಂ ಬಿವರಹಳ್ಳಿ - ರಾತ್ರಿ ರಾಮ ಅವತಾರಿ ಆಟವನ್ನು ಧರ್ಮಶಾಲೆಯಲ್ಲಿ ಪ್ರದರ್ಶಿಸಲಾಯಿತು. ರಾತ್ರಿ ಹತ್ತು ಗಂಟೆಯ ವರೆಗೆ ಸಾಗಿತು.

ಛ-೧೬ ರಬೀಲಾವಲ ಫಾಲ್‌ಗುಣ ವದ್ಯ ದ್ವಿತೀಯಾ ಗುರುವಾರ ಮುಕ್ಕಾಂ ಇಟಗಿ-ಸಿರಟ್ಟಿ ತುಂಗಭದ್ರಾತೀರ, ರಾತ್ರಿ ಇಟಗಿಯಲ್ಲಿ ರಾಮವತಾರಿ ಆಟವಾಡಿದರು.

ಛ- ೧೭ ರಬೀಲಾವಲ ಫಾಲ್‌ಗುಣ ವದ್ಯ-ತೃತೀಯಾ ಶುಕ್ರವಾರ ಸಂಕಷ್ಟಿ ಚತುರ್ಥಿ ಮುಕ್ಕಾಂ ಬನ್ನಿಕೋಪ್ಪ, ಸಿರಟ್ಟಿ, ರಾತ್ರಿ ರಾಮವತಾರಿ ಆಟ ಆಡಿ ತೋರಿಸಿದರು. ಅವರಿಗೆ ಬಿದಾಗಿ ಕೊಡಲಾಯಿತು.

ಮಾರ್ಚ್- ೧೮೪೭

ಛ- ೨೨ ರಬೀಲಾವಲ ಫಾಲ್‌ಗುಣ ವದ್ಯ ಅಷ್ಟಮಿ ಬುಧುವಾರ ಮುಕ್ಕಾಂ ಸಿರಟ್ಟಿ ರಾಮವತಾರಿ ಆಟವಾಡುವ ಮೇಳದವರನ್ನು ಕರೆಕಳಿಸಿ ಅವರಿಂದ ಆಟವಾಡಿಸಲಾಯಿತು. ನಾಲ್ಕು ತಾಸು ಅಧಿಪತಿ ಈ ಆಟವನ್ನು ನೋಡುತ್ತ ಕುಳಿತಿದ್ದರು. (೧೦-೩-೧೮೪೭).

ಛ- ೨೮ ರಬೀಲಾವಲ ಫಾಲ್‌ಗುಣ ವದ್ಯ ಮೂವತ್ತು, ಮಂಗಳವಾರ ಮುಕ್ಕಾಂ ಸಿರಟ್ಟಿ. ರಾತ್ರಿ ಸಿರಟ್ಟಿಯಲ್ಲಿ ರಾಮವತಾರಿ ಆಟವಾಡಿದರು. ೧೭ ಮಾರ್ಚ್ ೧೮೪೭.

ಇವಲ್ಲದೆ ಸಾಂಗಲಿಯ ಅಧಿಪತಿ ಚಿಂತಾಮಣ

ರಾವ್ ಫಾಲ್ಗುಣ ವದ್ಯ ಮೊದಲಿನ ದಿನ (ಮಾರ್ಚ್ ೧೮೪೭) ತಮ್ಮ ತಂಗಿಯ ಮಗಳಾದ ಕುಂ. ಸೌ. ಪುಸಾಬಾಯಿ ಓಕ ಇವಳನ್ನು ಕಾಣಲು ಇಟಗಿ ಗ್ರಾಮಕ್ಕೆ ಹೋಗಿದ್ದರು. ಅಲ್ಲಿ ಸಹ ಅವರು ಕನ್ನಡ ಭಾಗವತ ಆಟವನ್ನು ನೋಡಿದರು. ಆಟದಲ್ಲಿ ಭಾಗವತನ ಜವಾಬದಾರಿ ವಹಿಸಿದ ಬನ್ನಿಕೊಪ್ಪದ ಅಯ್ಯ ನರಸಿಂಹ ಅವತಾರ ಚೂರ್ಣಿಕೆಯನ್ನು ಕನ್ನಡದಲ್ಲಿ ಬಹಳ ಉತ್ತಮವಾಗಿ ಸುಸ್ವರದಲ್ಲಿ ಹಾಡಿದನು. ಹಿಮ್ಮೇಳದಲ್ಲಿ ಹಾಡುತ್ತಿದ್ದ ಬಾಲಕರಿಗೆ ಇನಾಮು, ಪತಾಕೆ ಕೊಡಲಾಯಿತಲ್ಲದೆ, ಬನ್ನಿಕೊಪ್ಪದ ಅಯ್ಯನು ಒಂದು ವರುಷ ತೆರಿಗೆ ಹಣ ಕೊಡಕೂಡದು ಎಂದು ಹೇಳಲಾಯಿತು. ಭಾವೆ ಪ್ರದರ್ಶಿಸಿದ ಆಟಕ್ಕೂ 'ರಾಮವತಾರಿ ಖೇಳ' ಎಂದೇ ದಿನಚರಿಯಲ್ಲಿ ಸಂಬೋಧಿಸಲಾಗಿದೆ." (ಈ ಉದ್ಧರಣೆ ಭಾರತ ಇತಿಹಾಸ ಸಂಶೋಧಕ ಮಂಡಳ ತ್ರೈಮಾಸಿಕ, ೪೫, ೧-೪ ಕ್ರಿಸ್ತಶಕ ೧೯೬೭ ಐತಿಹಾಸಿಕ ಸಂಕೀರ್ಣ ಖಂಡ ೧೨ ಮತ್ತು ಅದೇ ತ್ರೈಮಾಸಿಕದ ೫೦, ೧-೪ ಕ್ರಿಸ್ತಶಕ ೧೯೭೦ ಖಂಡ ೧೩ ಆಧಾರದಿಂದ ಬಳಸಲಾಗಿದೆ. ಈ ತ್ರೈಮಾಸಿಕದ ಸಂಪಾದಕರು ಯ. ನ. ಕೇಳಕರ). ಸಾಂಗಲಿ ಅಧಿಪತಿ ಇವರ ದಿನಚರಿಯ ಆಧಾರದಿಂದ ಭಾವೆಯ ರಾಮವತಾರಿ ಆಟದ ಪ್ರಯೋಗ ಕೇವಲ ಎರಡು ಬಾರಿ ನೆರವೇರಿತೆಂದೂ ಮತ್ತು ಕನ್ನಡ ಭಾಗವತರ ರಾಮವತಾರಿ ಆಟವನ್ನು ಐದು ಬಾರಿ ಆಡಿದುದನ್ನು ಅಧಿಪತಿ ನೋಡಿದರು ಎಂದೂ ಹೇಳಬರುತ್ತದೆ.

ಕನ್ನಡ ಭಾಗವತ ಆಟದ ಬಗ್ಗೆ ಭಾವೆ ವ್ಯಕ್ತಪಡಿಸಿದ ತುಚ್ಛ ಭಾವನೆಯ ಬಗ್ಗೆ ಪು. ಗೋ. ಕಾಣೇಕರ ಅವರು ತಮ್ಮ 'ಮಾಝ್ಯಾ ಕಾಹೀ ನಾಟ್ಯ ಸ್ಮೃತಿ' ಗ್ರಂಥದಲ್ಲಿ ಕೆಳಗಿನಂತೆ ಹೇಳಿದ್ದಾರೆ:

"ಯಕ್ಷಗಾನವು ಅಸ್ತವ್ಯಸ್ತವಾದುದೆಂದು ಹೇಳುವುದು ಯೋಗ್ಯವಾಗಿರುವುದಿಲ್ಲ. ಬೀಭತ್ಸವಂತೂ ಎಳ್ಳಷ್ಟೂ ಕಾಣುವುದಿಲ್ಲ. ಕ್ರಿಸ್ತಶಕ ೧೮೪೨ರಲ್ಲಿ ಭಾವೆ ಮತ್ತು ಸಾಂಗಲಿ ಅಧಿಪತಿ ನೋಡಿದ ಆಟ, ಯಕ್ಷಗಾನ ಆಟವಾಗಿರುವುದಿಲ್ಲ. ಸಾಂಗಲಿಯಲ್ಲಿ ಕನ್ನಡ ಭಾಗವತ ಆಟವನ್ನು ಆಡಿದವರು ಉತ್ತರ ಕರ್ನಾಟಕದ ಕಾರವಾರ ಭಾಗದವರಾಗಿದ್ದರು. ಮಹಾರಾಷ್ಟ್ರದ ದಕ್ಷಿಣ ಕೊಂಕಣ ಭಾಗದಲ್ಲಿ ಪ್ರಚಲಿತವಿದ್ದ ದಶಾವತಾರ ಆಟದಲ್ಲಿ ಕಂಡುಬರುವ ಕೆಲವು ಅಂಶಗಳು ಇದರಲ್ಲಿ ಕಾಣುವವು. ಇದು ಒಂದು ಬಗೆಯ ಅನುಕರಣವಿರಲೂಬಹುದು. ಹಳ್ಳಿಗರ ಮನೋರಂಜನೆ ಕೈಕೊಳ್ಳಲು ಒಂದು ಪಾತ್ರ ಸೇರಿಸಲಾಗಿದೆ. ಕನ್ನಡ ಭಾಗವತ ಆಟದ ಮೇಳದವರು ತಮ್ಮ ಆಟಗಳನ್ನು ಪ್ರದರ್ಶಿಸುತ್ತ ಹಳ್ಳಿಗಳಿಗೆ ಭೇಟಿ ಕೊಟ್ಟಿರಬಹುದು. ದಕ್ಷಿಣ ಕೊಂಕಣದಲ್ಲಿ ಶಂಖಾಸುರನು ದಶಾವತಾರ ಆಟದಲ್ಲಿ ಕುಚೋದ್ಯ ಕೈಕೊಳ್ಳುವನು. ಅದೇ ರೀತಿ ಕನ್ನಡ ಭಾಗವತ ಆಟದಲ್ಲಿ ವಿದೂಷಕನು ಹಳ್ಳಿಗರ ಮನೋರಂಜನೆ ಕೈಕೊಳ್ಳುತ್ತಾನೆ."

ಶ್ರೀ. ನಾ. ಬನಹಟ್ಟಿ ಅವರು ತಮ್ಮ 'ಮರಾಠಿ ರಂಗಭೂಮೀಚಾ ಇತಿಹಾಸ' ಗ್ರಂಥದಲ್ಲಿ 'ಕನ್ನಡ ಭಾಗವತ ಮೇಳ' ಕುರಿತು, "ಅಸ್ತವ್ಯಸ್ತ, ಬೀಭತ್ಸ ಮತ್ತು ತ್ರಾಸದಾಯಕವೆಂದೂ, ಸೋಗು ಕೆಳ ಮಟ್ಟನದಾಗಿರುವುದು ಎಂದೂ ಭಾವೆ ವ್ಯಕ್ತಪಡಿಸಿದ ವಿಚಾರಗಳ ಬಗ್ಗೆ ಸಂಶಯ ನಿರ್ಮಾಣವಾಗದೆ ಇರದು. ಕನ್ನಡ ಆಟಗಳನ್ನು ನೋಡಿದ ಶ್ರೀಮಂತ ಅಪ್ಪಾಸಾಹೇಬರಿಗೆ ಮರಾಠಿಯಲ್ಲಿ ಈ ಮಾದರಿಯ ಆಟವನ್ನು ರಚಿಸಲು ಆಜ್ಞೆ ವಿಧಿಸುವ ವಿಚಾರವಾದರೂ ಹೇಗೆ ಹೊಳೆದಿರಬಹುದು? ಯಾವುದಾದರೂ ಒಂದು ವಸ್ತುವಿನಲ್ಲಿ ಉತ್ತಮ ಗುಣಗಳು ಇಲ್ಲದೆ ಇದ್ದಲ್ಲಿ ಆ ವಸ್ತುವಿನ ಅನುಕರಣಮಾಡಬೇಕೆಂಬ ವಿಚಾರವಾದರೂ ಬರಲು ಸಾಧ್ಯವೆ? ಭಾವೆ ತಾನು ರಚಿಸಿದ ಆಟಗಳಲ್ಲಿ ಸುಧಾರಣೆ ಮಾಡಿರಬಹುದು. ಆತ ಕೈಕೊಂಡ ಸುಧಾರಣೆಯ ಹಿನ್ನೆಲೆಗೆ ತಳಹದಿಯಾದ ಅಂಶ ಇರಲೇಬೇಕು ಎಂಬ ವಿಚಾರ ಸತ್ಯಶೋಧಕ, ಅಥವಾ ಸತ್ಯದ ಅನ್ವೇಷಣೆ ಕೈಕೊಳ್ಳುವವನ ಮನಸ್ಸಿನಲ್ಲಿ ಸಂಶಯ ಬಾರದೆ ಇರದು. ತನ್ನ ಪ್ರಯತ್ನ ಮತ್ತು ಕಾರ್ಯಕ್ಕೆ ಉತ್ತೇಜನ ದೊರೆಯಲಿ

ಎಂಬ ಅಬೋಧಪೂರ್ವ ಪ್ರೇರಣೆಯ ಮೂಲಕ ಭಾವೆ ಕನ್ನಡ ಭಾಗವತ ಆಟ ಕುರಿತು ತಿರಸ್ಕಾರ ಚಿತ್ರಣ ಮಾಡಿರಬಹುದೆ?" ಎಂದು ಹೇಳಿರುವರು

ಮರಾಠಿ ರಂಗಭೂಮಿಯ ಶತಾಬ್ದಿ ಮಹೋತ್ಸವ ೧೯೪೩ರಲ್ಲಿ ಜರುಗಿತು. ಸ್ವಾತಂತ್ರ್ಯ ವೀರ ಸಾವರಕರ ಅವರು ಈ ಮಹೋತ್ಸವದ ಅಧ್ಯಕ್ಷರಾಗಿದ್ದರು. ಸಾವರಕರ ಅವರು ಶ್ರೇಷ್ಠ ನಾಟಕಕಾರರು. ಅವರ ನಾಟಕಗಳು ಕನ್ನಡಲ್ಲಿದ ರೂಪಾಂತರವಾಗಿ ರಂಗ ಪ್ರದರ್ಶನ ಪಡೆದುದು ಅರಿತ ಸಂಗತಿ.

ತಮ್ಮ ಅಧ್ಯಕ್ಷ ಭಾಷಣದಲ್ಲಿ, "ಮರಾಠಿ ರಂಗಭೂಮಿಯ ಮೂಲವನ್ನು ಶೋಧಿಸುತ್ತ ಹೋದರೆ ಅದು ಕ್ರಿಸ್ತಶಕ ೧೬೯೦ ರ ವರೆಗೆ ತಲಪುವುದು. ತಂಜಾವರದ ದರಬಾರದಲ್ಲಿ 'ಲಕ್ಷ್ಮೀಸ್ವಯಂವರ' ನಾಟಕವನ್ನು ೧೬೯೦ ರಲ್ಲಿ ಪ್ರದರ್ಶಿಸಿದುದು ತಿಳಿದುಬರುವುದು. ತಂಜಾವರದ ದರಬಾರದಲ್ಲಿ ಮರಾಠಿ ನಾಟಕಗಳ ಪ್ರಯೋಗ ಕ್ರಿಸ್ತಶಕ ೧೮೩೨ ರ ವರೆಗೆ ಸಾಗುತ್ತಿದ್ದವು. ಈ ಹಿನ್ನೆಲೆಯಲ್ಲಿ ಮರಾಠಿ ರಂಗಭೂಮಿಯ ಪ್ರಾರಂಭ ೧೮೪೩ ಎಂದು ಹೇಳಿದರೂ, ಅದಕ್ಕೆ ಹಿನ್ನೆಲೆಯಾದ ಇತಿಹಾಸ ಕ್ರಿಸ್ತಶಕ ೧೬೯೦ ಎಂದು ಹೇಳಬೇಕಾಗುತ್ತದೆ. ಗೋದಾವರಿ ನದಿಯು ತ್ರ್ಯಂಬಕೇಶ್ವರದಲ್ಲಿ ಉಗಮವಾದರೂ ನಮಗೆ ಅದರ ಪ್ರವಾಹದ ಅರಿವು ನಾಶಿಕ ಪಟ್ಟಣದ ವರೆಗೆ ತಿಳಿದುಬರುವದಿಲ್ಲ. ಅದೇ ರೀತಿಯಾಗಿ ಮರಾಠಿ ರಂಗಭೂಮಿಯ ಅಸ್ತಿತ್ವ ಕ್ರಿಸ್ತಶಕ ೧೮೪೩ ರಿಂದ ಕಂಡುಬರುವದು" ಎಂಬುದಾಗಿ ತಮ್ಮ ತೂಕದ ವಿಚಾರಗಳನ್ನು ಹೇಳಿದ್ದಾರೆ.

ಡಾ. ಎಚ್. ಕೆ. ರಂಗನಾಥ ಅವರು ತಮ್ಮ ಸಂಶೋಧನ ಗ್ರಂಥ 'ಕರ್ನಾಟಕ ಥೀಯೇಟರ್'ರಲ್ಲಿ "A fuller account is provided by Shri Muliya Timmappayya (ಪಾರ್ತಿ ಸುಬ್ಬ-ಪುಟ ೧೨೩) An idol of Krishna said to have been presented by the Sangli Chief to the troupe at that time, is still preserved by the Hasyagar family of Kirki" ಎಂದು ಹೇಳಿರುವರು. ಶ್ರೀ ಕೃಷ್ಣನ ಮೂರುತಿ ಬಹುಮಾನವಾಗಿ ದೊರೆತದ್ದು ಸತ್ಯ ಸಂಗತಿ. ಅದು ನಾರಾಯಣ ವೆಂಕಟೇಶ ಕುರಡಿ ಎಂಬ ಭಾಗವತನ ಮನೆತನದ ಸ್ವಾಧೀನದಲ್ಲಿರುವುದು ಎಂದು ತಿಳಿದುಬಂದಿದೆ. ಸಾಂಗಲಿ ಸಂಸ್ಥಾನಕ್ಕೆ ಪ್ರತಿ ವರುಷ ಹಾಸ್ಯಗಾರ ಮೇಳ ಭೇಟಿ ಕೊಟ್ಟು ಆಟವಾಡುವ ಪರಿಪಾಠವು ಇದ್ದಿದ್ದಿಲ್ಲವೆಂದು ತೋರುವುದು. ಆದರೆ ಬಡೋದಾ ಸಂಸ್ಥಾನಕ್ಕೆ ಪ್ರತಿ ವರುಷ ಹಾಸ್ಯಗಾರ ಮೇಳ ಭೇಟಿ ಕೊಡುತ್ತಿತ್ತು; ಮಾತ್ರವಲ್ಲ, ಹನ್ನೆರಡುನೂರು ರೂಪಾಯಿಯ ವರುಶಾಸನವೂ ಬಡೋದಾ ಸಂಸ್ಥಾನದಿಂದ ಈ ಕನ್ನಡ ಮೇಳಕ್ಕೆ ದೊರೆಯುತ್ತಿತ್ತು. ಹಾಸ್ಯಗಾರ ಮೇಳ ಸಮುದ್ರ ಮಾರ್ಗವನ್ನೇ ಬಳಸುತ್ತಿತ್ತು. ಕುಮಟಾ ಬಂದರವು ಅರಳೆ ವ್ಯಾಪಾರದಲ್ಲಿ ಹೆಸರು ಪಡೆದ ಕೇಂದ್ರ. ಸೂರತ ಬಂದರಕ್ಕೆ ಬಂದ ವ್ಯಾಪಾರದ ಹಡಗುಗಳು ಕಾರವಾರ-ಕುಮಟಾ ಬಂದರಕ್ಕೆ ಬಾರದೇ ಹೋಗುತ್ತಿದ್ದಿಲ್ಲ. ವ್ಯಾಪಾರಿ ಹಡಗುಗಳಲ್ಲಿ ತಮ್ಮ ಪ್ರವಾಸವನ್ನು ಕೈಕೊಂಡು ಹಾಸ್ಯಗಾರ ಮೇಳ ಮೊದಲು ಸೂರತವನ್ನು ತಲಪಿ, ಬಳಿಕ ಬಡೋದೆಗೆ ಹೋಗುತ್ತಿತ್ತು. ದಕ್ಷಿಣ ಮಹಾರಾಷ್ಟ್ರದಲ್ಲಿ ಪ್ರಯೋಗ ಕೈಕೊಳ್ಳುವುದಾದಲ್ಲಿ ಮುಂಬೈ ಬಂದರದಲ್ಲಿ ಇಳಿದು ಸಾಂಗಲಿ ಇತ್ಯಾದಿ ಭಾಗಗಳಿಗೆ ಭೇಟಿ ಕೊಡುತ್ತಿತ್ತು. ಇದೇ ಸಂದರ್ಭದಲ್ಲಿ ವೈದ್ಯ ಶಿವರಾಮ ಪಾನಸೆ ಅವರು ತಮ್ಮ ಲೇಖನದಲ್ಲಿ ಕೆಳಗಿನಂತೆ ಹೇಳಿದ್ದಾರೆ:

"ಕ್ರಿಸ್ತಶಕ ೧೮೩೪*ರಲ್ಲಿ 'ಕರ್ನಾಟಕ ಖೇಳೆ' (ಕರ್ನಾಟಕದ ಮೇಳ) ಪುಣೆ ಪಟ್ಟಣಕ್ಕೆ ಭೇಟಿ ಕೊಟ್ಟಿತು. ಸೂತ್ರಧಾರನು ಝಾಂಝು ಬಾರಿಸುತ್ತಿದ್ದನಲ್ಲದೆ ಆತನೊಡನೆ ಪಖವಾಜಿ ಇರುತ್ತಿದ್ದನು.

'ಪಾರ್ತಿಸುಬ್ಬ' ಗ್ರಂಥದಲ್ಲಿ ಹೇಳಿದಂತೆ, ಬಹುಮಾನವಾಗಿ ದೊರೆತ ಶ್ರೀಕೃಷ್ಣನ ಮೂರುತಿ ಕಟ್ಟಿಗೆಯಲ್ಲಿ ಕೆತ್ತಿದುದಾಗಿದೆ.

---

೧. 'ಮಹಾರಾಷ್ಟ್ರಾಚಾ ನಾಟ್ಯ ಸಂಸಾರ'

ನೋಡಲು ಬಹಳ ಆಕರ್ಷಕವಾಗಿದ್ದು ಈ ಮೂರುತಿಯ ವೈಶಿಷ್ಟ್ಯ ಬಾಯಿಯಲ್ಲಿ ಹಾಲು ಸುರುವಿದರೆ ಅದು ಸ್ವಲ್ಪ ಸಮಯದ ಬಳಿಕ ಕೆಳಗಿನಿಂದ ಹೊರಬರುವುದು. ಬಡೋದಾ, ರಾಜಸ್ಥಾನ ಭಾಗಗಳಲ್ಲಿ ಕಟ್ಟಿಗೆಯಲ್ಲಿಯು ಆಕರ್ಷಕ ಕೆತ್ತಿಗೆಯ ಕೆಲಸ ಮಾಡುವುದರಲ್ಲಿ ಹೆಸರು ಪಡೆದ ಕುಶಲ ಕೆಲಸಗಾರರು ಪುರಾತನ ಕಾಲದಿಂದಲೂ ಇರುವರು. ಆದರೆ ಸಾಂಗಲಿ ಸಂಸ್ಥಾನ ಇಂತಹ ಕುಶಲ ಕೈಗಾರಿಕೆಯಲ್ಲಿ ಹೆಸರು ಪಡೆದುದು ಎಂದು ಹೇಳಲು ಆಧಾರಗಳಿರುವದಿಲ್ಲ. ಭಾಗವತನೊಡನೆ ಮೇಳದ ಕಲಾಕಾರರು ಪರ ಊರಿಗೆ ಹೋಗುವ ಮುನ್ನ ಆತನ ಕರಾರುಗಳಿಗೆ ಒಪ್ಪಿಕೊಳ್ಳಬೇಕಾಗುತ್ತಿತ್ತು, ಹೆಚ್ಚಾಗಿ ಈ ಕರಾರುಗಳಲ್ಲಿ ಬಿದಾಗಿ, ಬಕ್ಷೀಸು, ದೇಣಿಗೆ ಪ್ರೇಕ್ಷಕರಿಂದ ದೊರೆತರೆ ಅದೆಲ್ಲವನ್ನೂ ಭಾಗವತನ ಸ್ವಾಧೀನ ಮಾಡತಕ್ಕದ್ದು. ಇಂತಹ ಬಿದಾಗಿ, ಭಕ್ಷೀಸು, ಭಾಗವತ ಕಲಾವಿದರಿಗೆ ಮರಳಿಸುವುದು ಕಡಿಮೆ. ಈ ಹಿನ್ನೆಲೆಯಲ್ಲಿ "ಬಡೋದಾ ರಾಜಾ ಕಂಠೀ ಕೊಟ್ಟಾ. ರಾವಗಣ್ಣ ರಾಮಾ ಇಟ್ಟುಕೊಂಡು ಬಿಟ್ಟಾ" ಎಂಬ ಗಾದೆ ಮಾತಿನ ಪದ್ಯ ಅಸ್ತಿತ್ವದಲ್ಲಿ ಹೆಚ್ಚಾಗಿ ಕಾರವಾರದಲ್ಲಿ ಇರುವಂತೆ ತಿಳಿದು ಬರುವುದು. ಈ ಎಲ್ಲ ಹಿನ್ನೆಲೆಯಲ್ಲಿ ಭಾಗವತ ಮೇಳಕ್ಕೆ ದೊರೆತ ಶ್ರೀಕೃಷ್ಣನ ಮೂರುತಿ ಬಡೋದೆಯ ಅಧಿಪತಿಯ ಕಾಣಿಕೆ ಎಂದು ಹೇಳುವುದು ಸಯುಕ್ತಿಕವಾಗಿ ತೋರುವುದು.

ಇದೇ ಸಂದರ್ಭದಲ್ಲಿ ಸೀತಾರಾಮು ಬಾಳಂಭಟ್ಟ ಪುರೋಹಿತ ಎಂಬ, (ವಿಷ್ಣುದಾಸ ಭಾವೆನ ಮೇಳದ) ಕಲಾವಿದನು, ರಾವಜಿ ವಿಠ್ಠಲ ಭಟಕರ ಮತ್ತು ಗೋವಿಂದ ಮಹಾಜನಿ, ಈ ಈರ್ವರ ಸಮಕ್ಷಮ, ಮಾಘ ಶುದ್ಧ ದ್ವಿತೀಯಾ ೧೭೮೩ ದುರ್ಮತಿ ನಾಮ ಸಂವತ್ಸರ ದಿವಸ ಭಾವೆಸಿಗೆ ಬರೆದು ಕೊಟ್ಟ ಕರಾರು ಪತ್ರದ ಕೆಲವು ಅಂಶಗಳನ್ನು ನೆನೆಯುವುದು ಅವಶ್ಯವಿದೆ. ೧. ತಮ್ಮ ಆಜ್ಞೆ ಮೇರೆಗೆ ನಡೆಯುವೆ, ತಾವು ನನಗೆ ಸ್ವೀಕರಿಸಲು ಹೇಳಿದ ಸೋಗನ್ನೆ ಹಾಕಿಕೊಳ್ಳುವೆನು; ತಾವು ಕರೆದುಕೊಂಡು ಹೋಗುವ ಊರಿಗೆ ಯಾವುದೇ ತಕರಾರು ಮಾಡದೆ ಬರುವೆ. ೨. ಆಟ (ಖೇಳ) ದಲ್ಲಿ ನನಗೆ ದೊರೆಯುವ ದೇಣಿಗೆಗಳನ್ನು ನಿಮ್ಮ ಸ್ವಾಧೀನ ಮಾಡುವೆ. ನೀವು ಕೊಟ್ಟದ್ದನ್ನು ಸ್ವೀಕರಿಸುವೆ. ಏಕನಿಷ್ಠೆಯಿಂದ ವರ್ತಿಸುವೆ. ೩. ಒಂದು ವೇಳೆ ಆಟದಲ್ಲಿ ಉತ್ಪನ್ನ ದೊರೆಯದಿದ್ದಲ್ಲಿ ಹೊಟ್ಟೆಯ ಪಾಡಿಗಾಗಿ ತಾವು ಹೇಳಿದಂತೆ ಆಚರಿಸುವೆನು." (ವಿಶ್ರಬ್ಧ ಶಾರದಾ– ಎರಡನೆಯ ಖಂಡ– ಸಂಪಾದಕರು– ಹ. ವಿ. ಮೋಟೆ_ ಪುಟ ೯ ರಿಂದ ೧೦ ರ ವರೆಗೆ) ಇಲ್ಲಿ ಸೀತಾರಾಮು ಬಿನ್ ಬಾಳಂಭಟ್ಟ ಪುರೋಹಿತ ಇವರು ಬರೆದುಕೊಟ್ಟ ಕರಾರು ಪತ್ರದಲ್ಲಿ 'ಖೇಳ' (ಆಟ) ಶಬ್ದವನ್ನು ಬಳಸಿದ್ದು ಮುಖ್ಯವಾಗಿದೆ; ಮಾತ್ರವಲ್ಲ ಕನ್ನಡ ಭಾಗವತ ಮೇಳ ಪರ ಊರಿಗೆ ಹೋಗುವಾಗ್ಗೆ ಭಾಗವತನೊಡನೆ ಕೈಕೊಳ್ಳುತ್ತಿರುವ ಕರಾರಿನ ಮಾದರಿಯದಾಗಿದೆ ಎಂಬ ವಿಚಾರ ಬರುತ್ತದೆ. ಇದಲ್ಲದೆ "ವಿನಾಯಕ ಭಟ್ಟ ಗೋಪಾಲ ಭಟ್ಟ ಪಾಠಕ ಎಂಬ ಕಲಾವಿದ ತಾ. ೨-೬-೧೮೫೩ ಅಣ್ಣಾಜಿ ಬಾಳಾಜಿ ತಡಸಕರ ಮತ್ತು ಭಾಸ್ಕರ ಕಾಶೀನಾಥ ಜೋಗ ಇವರ ಸಮಕ್ಷಮ ಸಾಕ್ಷಿಯೆಂದು ಬರೆದು ಕೊಟ್ಟ ಕ್ಷಮಾ ಪತ್ರದಲ್ಲಿ 'ಖೇಳ' ಶಬ್ದವನ್ನೇ ಬಳಸಿದ್ದಾರೆ. ವಿಷ್ಣುದಾಸನ ಮೇಳದ ಹದಿನೈದು ಕಲಾವಿದರು ೭-೮-೧೮೫೫ ರಂದು ಬಿಟ್ಟು ಹೋದರು. ಆ ಕಾಲದಲ್ಲಿ ಭಾವೆ ಸಾಂಗಲಿ ಅಧಿಪತಿಯಲ್ಲಿ ದೂರು ಕೊಟ್ಟ. ಅದರಲ್ಲಿ ಸಹ 'ಖೇಳ' ಶಬ್ದವನ್ನೆ ಬಳಸಿದ್ದಾನೆ." (ವಿಶ್ರಬ್ಧ ಶಾರದಾ– ಖಂಡ–೨) ಸಾಂಗಲಿ ಅಧಿಪತಿ ತಮ್ಮ ದಿನಚರಿಯಲ್ಲಿ ಭಾವೆ ಪ್ರದರ್ಶಿಸಿದ ಆಟಗಳಿಗೆ 'ರಾಮಾವತಾರಿ ಖೇಳ' ಎಂದು ಕರೆದಿದ್ದಾರೆ. ಆದರೆ ೧೯೦೩ ರಲ್ಲಿ ಅ. ವಿ. ಕುಲಕರ್ಣಿ ತಮ್ಮ 'ಮರಾಠಿ ರಂಗಭೂಮಿ' ಗ್ರಂಥದಲ್ಲಿ ಭಾವೆನ ಆಟಗಳಿಗೆ 'ಪೌರಾಣಿಕ ನಾಟಕ' ಎಂದು ನಾಮಕರಣ ಮಾಡಿದ್ದಾರೆ. ಕರ್ನಾಟಕ, ಮಹಾರಾಷ್ಟ್ರದ ಕರಾವಳಿ, ಗೋವಾ ಭಾಗಗಳಲ್ಲಿ ಪ್ರಚಲಿತವಿದ್ದ ಜಾನಪದ ಆಟಗಳಿಗಿಂತ ಭಾವೆ ಕೈಕೊಂಡ ಕಾರ್ಯಶ್ರೇಷ್ಠ ತರಗತಿಯದಾಗಿದೆ ಎಂದು ಹೇಳುವುದೇ ಮೂಲ ಹೇತುವಾಗಿರಬಹುದು. ವಿಷ್ಣುದಾಸ ಭಾವೆ ತನ್ನ 'ನಾಟ್ಯ ಕವಿತಾ ಸಂಗ್ರಹ'ದಲ್ಲಿ ತಾನೇ 'ಮಹಾರಾಷ್ಟ್ರದ ಆದ್ಯ ನಾಟಕಕಾರ' ಎಂದು

ಕದುರೆಕೊಂಡಿದ್ದಾನೆ. ಮರಾಠಿ ರಂಗಭೂಮಿಯ ಬಗ್ಗೆ ಬರೆಯಲಾದ ಗ್ರಂಥಗಳಲ್ಲಿ ಸಂಶೋಧಕರು ಭಾವೆಗೆ 'ನಾಟ್ಯ ಕಲೆಯ ಪಿತಾಮಹ' 'ಮರಾಠಿ ರಂಗಭೂಮಿಯ ಈಶ್ವರ' 'ಮಹಾರಾಷ್ಟ್ರದ ಭರತಮುನಿ' ಇತ್ಯಾದಿ ಕಿತಾಬುಗಳನ್ನು ಕೊಟ್ಟಿರುವರು. ಭಾವೆ ಮುತ್ಸದ್ದಿ ಇದ್ದರೂ ಕಲಾವಿದನಾಗಿದ್ದಿಲ್ಲ ಎಂಬ ವಿಚಾರ ಬಾರದೆ ಇರದು. ತನ್ನ ಯೋಗ್ಯತೆ ಮತ್ತು ಬುದ್ಧಿಗೆ ತಿಳಿದ ಮೇರೆಗೆ ಕರ್ನಾಟಕದ ಭಾಗವತರ ಆಟವನ್ನು ಅನುಕರಣ ಮಾಡಿದನೆಂದು ಹೇಳಲು ಕರ್ನಾಟಕ–ಮಹಾರಾಷ್ಟ್ರದ ಭಾಗವತ ಆಟ ಮತ್ತು ಸೀತಾ ಸ್ವಯಂವರ (ರಾಮ ಅವತಾರಿ ಖೇಳ) ಇವುಗಳನ್ನು ಅನುಕ್ರಮವಾಗಿ ಅಧ್ಯಯನ ಮಾಡಿದರೆ ತಿಳಿಯುವುದು. ಭಾವೆಯ ಕೃತಿಯಲ್ಲಿ ಸ್ವತಂತ್ರ ಪ್ರತಿಭೆ ಕಾಣುವುದಿಲ್ಲ. ಹೊಸತನವಿಲ್ಲದ ಆಟಗಳನ್ನು ಎಷ್ಟು ಬಾರಿ ನೋಡಬಹುದು? ಮನೋರಂಜನೆಗಾಗಿ ಸಾಂಗಲಿ ಅಧಿಪತಿ ಅಕ್ಕಪಕ್ಕದ ಕನ್ನಡ ಕಲಾವಿದರ ಕಲಾಪ್ರದರ್ಶನ ನೋಡಿ ಆನಂದ ಪಡೆಯುತ್ತಿದ್ದರು ಎಂದು ಹೇಳಬಹುದು.

ಬಾಳಾಜಿಪಂತ ಮಾಟೆ ಇವರ ಸಲಹೆಯ ಮೇರೆಗೆ ಭಾವೆ ೧೮೫೧ ರಿಂದ ೧೮೫೩ ರ ವರೆಗೆ ತನ್ನ ಆಟದ ಮೇಳವನ್ನು ತೆಗೆದುಕೊಂಡು ಪರ ಊರಿಗೆ ಹೋಗಿ ಪ್ರದರ್ಶಿಸಿದನು. ೧೮೫೪–೫೫ ರಲ್ಲಿ ಆತ ಸಾಂಗಲಿಯಲ್ಲಿಯೆ ವಾಸಿಸುತ್ತಿದ್ದನು. ಕಾರಣ ಆತನ ಮೇಳದಲ್ಲಿಯ ಕಲಾವಿದರು ಹೊರ ಬಂದು ಬೇರೊಂದು ಮೇಳ ಸ್ಥಾಪಿಸಿದರು. ೧೮೫೬ ರಲ್ಲಿ ಪುನಃ ತನ್ನ ಚಟುವಟಿಕೆ ಪ್ರಾರಂಭಿಸಿದನು. ಆದರೆ ೧೮೫೭ ರಿಂದ ೧೮೫೯ರ ವರೆಗೆ ಆತನ ಚಟುವಟಿಕೆ ಕುಂಠಿತವಾಯಿತು. ೧೮೬೦ರಿಂದ ೧೮೬೨ರಲ್ಲಿ ಕೊನೆಯ ಬಾರಿ ಪರ ಊರಿಗೆ ಭೇಟಿ ಕೊಟ್ಟು ಮರಳಿದ ಬಳಿಕ ತನ್ನ ಚಟುವಟಿಕೆಗಳನ್ನು ನಿಲ್ಲಿಸಿದನು.

ಸಾಂಗಲಿಯ ಸಂಸ್ಥಾನದ ಇತಿಹಾಸವನ್ನು ಗಮನದಲ್ಲಿ ತಂದುಕೊಂಡರೆ, ಅಲ್ಲಿ ನೃತ್ಯ ಮತ್ತು ಭಾವಸೂಚನೆಯ ಅಭಿನಯದ ಪರಂಪರೆ ಅಸ್ತಿತ್ವದಲ್ಲಿ ಇದ್ದಂತೆ ಕಂಡುಬರುವದಿಲ್ಲ. ಕನ್ನಡ ಭಾಗವತ ಆಟದಲ್ಲಿ ಇವುಗಳಿಗೆ ಪ್ರಮುಖ ಸ್ಥಾನವಿದೆ. ಭಾವೆ ಈ ಅಂಶಗಳನ್ನು ಬಳಸದೆ ಅಧಿಪತಿ ಸುಧಾರಣೆ ಕೈಕೊಂಡು ಮರಾಠಿಯಲ್ಲಿ ನಾಟಕ ರಚಿಸಲು ಹೇಳಿದ ಸಂಗತಿಯನ್ನಷ್ಟೆ ಹೇಳಿರುವನು. ತನ್ನ ಆಟ ಕನ್ನಡ ಭಾಗವತ ಆಟಗಳಿಗಿಂತ ಮೇಲ್ತರಗತಿಯದು, ಪ್ರಗತಿಶೀಲವಾದದ್ದು ಎಂದು ಹೇಳುವ ಧೈರ್ಯ ಭಾವೆಗೆ ಆದಂತೆ ಕಾಣದು. ತನ್ನ ಆಟಗಳಲ್ಲಿ ಕನ್ನಡ ಭಾಗವತ ಆಟಕ್ಕಿಂತ ಕೆಲವು ಗುಣಗಳ ಕೊರತೆಯಿದೆ ಎಂಬುದನ್ನು ಮಾನ್ಯ ಮಾಡಿರುವದಿಲ್ಲ. ಭಾವೆ ತನಗೆ ಒದಗಿದ ಈ ಶೃಂಗಾಪತ್ತಿ(ಪೇಚು ಪ್ರಸಂಗ)ಯಿಂದ ಪಾರಾಗಲು ಕನ್ನಡ ಭಾಗವತ ಆಟದ ಬಗ್ಗೆ ತಾತ್ಸಾರ ವ್ಯಕ್ತಪಡಿಸಿದ್ದಾನೆ. ಯಾವ ನಿಚ್ಚಣಿಕೆಯ ಆಧಾರದಿಂದ ಭಾವೆ ಮೇಲೇರಿದನೋ ಅದೇ ನಿಚ್ಚಣಿಕೆಯನ್ನು ದೂಡಿ ಬಿಟ್ಟಿದ್ದಾನೆ.

ಮರಾಠಿ ರಂಗಭೂಮಿ ೧೮೮೫ ರಷ್ಟೊತ್ತಿಗೆ ಸಾಕಷ್ಟು ಮುಂದುವರೆದಿತ್ತು. ಸರ್ವಶ್ರೀ ತ್ರಿಲೋಕೇಕರ, ಕಿರ್ಲೋಸ್ಕರರಂಥ ನಾಟಕಕಾರರು ನಿಜವಾದ ಅರ್ಥದಲ್ಲಿ ಪೌರಾಣಿಕ ನಾಟಕಗಳನ್ನು ಬರೆದು ರಂಗಭೂಮಿಯನ್ನು ಶಿಖರಕ್ಕೆ ತಲಪಿಸಿದ್ದರು. ಪಾಟಕರ ಶಂಕರರಾವ್, ಗೋವಿಂದ ಬಲ್ಲಾಳ ದೇವಲ, ವಿನಾಯಕ ಜನಾರ್ದನ ಕೀರ್ತನೆ ಇತ್ಯಾದಿ ಅಭಿನಯಕುಶಲರು. ಲೇಖಕರು ಕೀರ್ತಿ ಸಂಪಾದಿಸಿದ್ದರು. ಪಾರಸಿ ನಾಟಕ ಕಂಪನಿ ಹಿಂದುಸ್ಥಾನದ ನಾಲ್ಕೂ ದಿಕ್ಕಿನಲ್ಲಿ ಜಯಭೇರಿ ಹೊಡೆಯುತ್ತಿತ್ತು. ಕಿರ್ಲೋಸ್ಕರರ 'ಕವಿತಾ ಸಂಗ್ರಹ' ಮೊದಲು ಮುದ್ರಿತವಾದದ್ದು ೧೮೮೧ರಲ್ಲಿ. ಎರಡನೆಯ ಆವೃತ್ತಿ ೧೮೮೩ರಲ್ಲಿ ಹೊರಬಂದಿತು. ನಾಟ್ಯಕಲೆಯ ಇತಿಹಾಸದಲ್ಲಿ ತನ್ನ ಹೆಸರು ಅಳಿಸದೆ ಉಳಿಯಲಿ ಎಂಬ ಸ್ವಾರ್ಥ ಹೇತು ಭಾವೆಯಲ್ಲಿ ಮನೆಮಾಡಿರಬಹುದು. ತಾನೇ 'ಮಹಾರಾಷ್ಟ್ರದ ಆದ್ಯ ನಾಟಕಕಾರ'ನೆಂದು ಭಾವಿಸಿ ತನ್ನ 'ನಾಟ್ಯ ಕವಿತಾ ಸಂಗ್ರಹ' ಗ್ರಂಥ ಬರೆದನು. ತಾನು ಕೈಕೊಂಡ ಚಟುವಟಿಕೆಯ ನೆನಪು ಅಳಿಸಿಹೋಗತೊಡಗಿದೆ ಎಂಬ ವಿಚಾರ ಭಾವೆಯಲ್ಲಿ ಬಂದಿರುವುದು ಈ ಎಲ್ಲ ಹಿನ್ನೆಲೆಯಲ್ಲಿ ಸ್ಪಷ್ಟವಾಗಿದೆ. ತನ್ನ ಗ್ರಂಥದಲ್ಲಿ ಭಾವೆ ತಾನು ಅಳವಡಿಸಿದ ನಾಟ್ಯ ಪದ್ಧತಿಯನ್ನು ಕುರಿತು ಯಾವ ವಿಚಾರವನ್ನೂ ವ್ಯಕ್ತಪಡಿಸಿಲ್ಲ. ಒಂದು ವೇಳೆ ಆತನು ವ್ಯಕ್ತಪಡಿಸಿದ್ದರೆ "ಇದೆಂಥ ನಾಟಕ?

ಈತ ನಾಟಕಕಾರನೆ? ಈತ ಕೈಕೊಂಡ ಪ್ರಯೋಗಗಳಲ್ಲಿ ನಾಟ್ಯಾಂಶ ಇರುವುದೆ?" ಎಂಬ ಪ್ರಶ್ನೆಗಳು ಉದ್ಭವಿಸುತ್ತಿದ್ದುವು. ಆ ಕಾಲದ ಪತ್ರಿಕೆಗಳಲ್ಲಿ ಈ ಬಗೆಯ ಅನೇಕ ಪ್ರಶ್ನೆಗಳನ್ನು ರಸಿಕರು ಎತ್ತಿದುದು ನಮಗೆ ಕಂಡು ಬರುತ್ತದೆ. 'The Bombay Times'ನ ೧೧–೩–೧೮೫೩ರ ಸಂಚಿಕೆಯಲ್ಲಿ ಪ್ರಕಟವಾದ ಸಂಗತಿಯಿದು:

"Scenery and the other similar accessories that so much aid the effect of a dramatic representati-on were however, as we have already noticed, entirely over looked and we recommend more attention being paid to these matters for the future...... These things we mention, however, with no wish to detract from the merit of performance, which was such, upon the whole, as agreea-bly to disappoint us."

ಕರ್ನಾಟಕ–ಮಹಾರಾಷ್ಟ್ರಗಳ ನಾಟಕಗಳಿಗೆ ತಂಜಾವರವನ್ನು ಆಳಿದ ರಾಜರು ಕೈಕೊಂಡ ಸಾಂಸ್ಕೃತಿಕ ಕಾರ್ಯಗಳ ಪ್ರಭಾವವಿದೆ. ಮುಖ್ಯವಾಗಿ ಪಾಂಡ್ಯ, ಚೋಳ, ಚೇರ, ಪಲ್ಲವ, ವಿಜಯನಗರದ ನಾಯಕರು. ಮರಾಠಾ ರಾಜರು ಶಿಕ್ಷಣ ಮತ್ತು ಕಲೆಗಳಿಗೆ ಉತ್ತೇಜನ ನೀಡಿದರು.

ದಕ್ಷಿಣ ಭಾರತಕ್ಕೆ ಉಜ್ವಲ ಪರಂಪರೆಯನ್ನು ಒದಗಿಸಿದವರಲ್ಲಿ ಚೋಳ ರಾಜರ ಸ್ಥಾನ ಹಿರಿದಾಗಿದೆ. 'ಸಂಘಮಾದಿ' ಎಂಬ ಪ್ರಾಚೀನ ಗ್ರಂಥದಲ್ಲಿ ಈ ವಂಶದ 'ಕರಿಕಾಲ' ಎಂಬ ರಾಜನ ಉಲ್ಲೇಖ ದೊರೆಯುವುದು. 'ಪಟ್ಟಿನಾಪ್ಪಾಲೈ' ಗ್ರಂಥದಲ್ಲಿ ಕರಿಕಾಲ ರಾಜನು ವ್ಯಾಪಾರ, ಉದ್ಯೋಗ, ಶಿಕ್ಷಣ, ಕಲೆ ಇತ್ಯಾದಿಗಳಿಗೆ ಉತ್ತೇಜನ ನೀಡುತ್ತಿದ್ದನೆಂದು ತಿಳಿದುಬರುತ್ತದೆ. ಪಾಂಡ್ಯ ರಾಜರ ಕಾಲದಲ್ಲಿ 'ಸಂಘಮ್' ಎಂಬ ವಾಙ್ಮಯ ಸಂಸ್ಥೆಯನ್ನು ಅಗಸ್ತ್ಯ ಋಷಿ ಸ್ಥಾಪಿಸಿ, ಶಿಕ್ಷಣ ಕಲೆಗಳಿಗೆ ಉತ್ತೇಜನ ಕೊಡಲು ಪ್ರಾರಂಭಿಸಿದನು. ಇತಿಹಾಸಕಾರರು 'ಸಂಘಮ್'ನ ಕಾಲ ಕ್ರಿಸ್ತಶಕ ಪೂರ್ವ ೫೦೦ ರಿಂದ ಕ್ರಿಸ್ತಶಕ ಒಂದನೆಯ ಶತಮಾನವೆಂದು ಹೇಳುವರು. ಈ ಪರಂಪರೆಯನ್ನೆ ಕರಿಕಾಲ ಚೋಳ ಮತ್ತು ಆತನ ಬಳಿಕ ಆಳಿದ ರಾಜರು ಮುಂದುವರಿಸಿಕೊಂಡು ಹೋಗಿದ್ದರು. ವಿಜಯಲಾಲ, ಪಲ್ಲವರ ಸಾಮಂತನಾದ ಚೋಳವಂಶಜ. ಈತ ಒಂಬತ್ತನೆಯ ಶತಮಾನದಲ್ಲಿ ತಂಜಾವರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ. ಕ್ರಿಸ್ತ ಶಕ ೯೮೫ ರಲ್ಲಿ ಮೊದಲಿನ ರಾಜ ಚೋಳರಾಜ, ಪಲ್ಲವ, ಪಾಂಡ್ಯ, ಶ್ರೀಲಂಕೆ, ಮೈಸೂರಿನ ಚಾಲುಕ್ಯರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡಿದ್ದ. ಈತ ಸ್ವತಃ ವಿದ್ಯಾವಂತ. ನರ್ತನ-ಗಾಯನ ಕಲೆಯ ವಿದ್ವಾಂಸರಿಗೆ ಆಶ್ರಯ ನೀಡಿ, ನಾಟ್ಯ, ನೃತ್ಯಕಲೆಯ ವಿದ್ಯಾಲಯಗಳನ್ನು ಸ್ಥಾಪಿಸಿದ.

ಕ್ರಿಸ್ತಶಕ ೧೩೭೦ ರಲ್ಲಿ ವಿಜಯನಗರದ ರಾಜ ಕಂಪಣ್ಣ ಮಧುರೆ, ರಾಮೇಶ್ವರಗಳನ್ನು ಗೆದ್ದುದಲ್ಲದೆ ದಕ್ಷಿಣದ ರಾಜರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡಿದ್ದ. ಆದರೆ ರಾಮರಾಯ ಇದೆಲ್ಲವನ್ನು ಖಾಲಸಾ ಮಾಡಿ 'ನಾಯಕ' ಎಂಬ ಪ್ರತಿನಿಧಿಗಳನ್ನು ನಿಯಮಿಸಿದ.

"ಶಿವಮತ ಪ್ರವರ್ತಕ ಚಾಲುಕ್ಯ ಸೋಮೇಶ್ವರನ ತರುವಾಯ ಕರ್ನಾಟಕದ ಸ್ಥಳ ವಿಜಯನಗರವು ಸಂಗೀತದ ಕೇಂದ್ರವಾಗಿತ್ತು. ಹಾಡುಗಾರಿಕೆಯಲ್ಲಿ ಪ್ರಾದೇಶಿಕ ವೈಶಿಷ್ಟ್ಯಗಳ ಪ್ರಭಾವ ಸಹಜ ಮತ್ತು ಕ್ರಮಪ್ರಾಪ್ತವಿದ್ದರೂ ಈಗಿನಂತೆ ಆಗ ಹಿಂದುಸ್ತಾನಿ, ಕರ್ನಾಟಕಿ (ದಕ್ಷಿಣಾದಿ) ಎಂಬ ನೀರೊಸರದ ಭೇದ(Watertight compartment)ವಿದ್ದಿಲ್ಲ. ವಿಜಯನಗರದ ಪತನಾನಂತರ ತಂಜಾವರವು ಅದಕ್ಕೆ ಆಶ್ರಯ ಸ್ಥಾನವಾಯಿತು. ಮೊದಲು ಕರ್ನಾಟಕ (ವಿಜಯನಗರ) ಸಾಮ್ರಾಜ್ಯದ ಪ್ರತಿನಿಧಿಗಳೆಂದು ನಂತರ ಸ್ವತಂತ್ರರಾಗಿ ತಂಜಾವರನ್ನು ಆಳು-ತ್ತಿದ್ದ ನಾಯಕ ಅರಸರು ಕರ್ನಾಟಕರೆಂದು ಹೆಸರುಗೊಂಡಿದ್ದರು. ಅವರ ಚರಿತ್ರೆಗಿರುವ ಒಂದು ತೆಲುಗು ಗ್ರಂಥ 'ಕರ್ನಾಟಕ ರಾಜಾಕುಳ್ ಸವಿಸ್ತಾರ ಚರಿತಂ' ಎಂಬುದು ಪ್ರಸಿದ್ಧವಿದೆ. ಅವರ ಭಾಷೆ ತೆಲಗು, ಅವರಾಳುತ್ತಿದ್ದ ಪ್ರಾದೇ-ಶಿಕ ಭಾಷೆ ತಮಿಳು. ಆದರೂ ಮೂಲತಃ

ಕರ್ನಾಟಕ ಸಾಮ್ರಾಜ್ಯದ ಪ್ರತಿನಿಧಿಗಳೆಂಬ ಕಾರಣದಿಂದ ಅವರಿಗೆ ಕರ್ನಾಟಕರು, ಅವರಾಳು-ತ್ತಿದ್ದ ಭಾಗಕ್ಕೆ, ಅದು ಭಾಷಿಕವಿದ್ದರೂ ಕರ್ನಾಟಕ ಸಾಮ್ರಾಜ್ಯದ ಅಧಿಪತ್ಯಕ್ಕೆ ಒಳ ಪಟ್ಟದ್ದರಿಂದ ಕರ್ನಾಟಕ (ಬ್ರಿಟಿಶರ ಕಾಲದಲ್ಲಿ ಕೂಡ Carnatic District). ಅವರು ಅಭಿವೃದ್ಧಿಗೊಳಿಸಿದ ಸಂಗೀತಕ್ಕೆ ಕರ್ನಾಟಕೀ ಸಂಗೀತ ಎಂಬ ಹೆಸರು ಬಂದಂತಿದೆ" (ಬತ್ತೀಸ ರಾಗಗಳು–ಲೇಖಕರು ಭೀಮರಾವ ಚಿಟಗುಪ್ಪಿ).

ನಾಯಕರಾಜರಾದ ಶಿವಪ್ಪನಾಯಕ, ಅಚ್ಯುತಪ್ಪ ನಾಯಕ, ರಘುನಾಥ ನಾಯಕ, ವಿಜಯ ರಾಘವ. ಕಲಾಪ್ರೇಮಿಗಳಲ್ಲದೆ ವಿಜಯ ರಾಘವನ ಕಾಲದಲ್ಲಿ ತೆಲಗು ಯಕ್ಷಗಾನ ಮುಂದುವರಿಯಿತು. ಈತ ಸುಮಾರು ಇಪ್ಪತ್ತು ಯಕ್ಷಗಾನ ರಚಿಸಿದ ಉಲ್ಲೇಖ ದೊರೆಯುವುದು. ಈತ ಬಳಸಿದ ರಾಗ ಪದ್ಧತಿ, ನಾಟ್ಯಶೈಲಿಗಳ ಪ್ರಭಾವ (ಶಹಾಜಿ) ಶಹಾರಾಜಾ ಭೋಸಲೆಯ ಕೃತಿಗಳಲ್ಲಿ ಕಾಣುವುದು.

ವಿಜಯರಾಘವನಿಗೆ ಮಧುರೆಯ ರಾಜ ಮತ್ತು ವಿಜಾಪುರದ ಸುಲ್ತಾನರಿಂದ ಸಾಕಷ್ಟು ತೊಂದರೆ ಉಂಟಾಗುತ್ತಿತ್ತಲ್ಲದೆ, ಮಧುರೆಯ ರಾಜ ಚೊಕ್ಕನಾಥನೊಡನೆ ಯುದ್ಧ ಮಾಡುವಾಗ ಈತ ಮತ್ತು ಈತನ ಮಗ ಮನ್ನಾದಾಸ ವೀರಸ್ವರ್ಗ ಪಡೆದರು. ಚೊಕ್ಕನಾಥ ತನ್ನ ತಮ್ಮನಾದ ಆಲಗಿರಿ ನಾಯಕನನ್ನು ತಂಜಾವರದ ರಾಜ್ಯ ನೋಡಲು ನಿಯಮಿಸಿದ್ದನು. ಆದರೆ ಆತನ ಸಲಹೆಗಾರನಾದ ರಾಯಸಾಮಾ ವೆಂಕಣ್ಣನೊಡನೆ ಮತಭೇದಗಳು ಪ್ರಾರಂಭವಾದವು. ವಿಜಯರಾಘವನ ಮಗನಾದ ಸೆಂಗಾಮಲದಾಸನನ್ನು ಪ್ರತಿಸ್ಪರ್ಧಿಯಾಗಿ ನಿಲ್ಲಿಸಿದನು. ವಿಜಾಪುರದ ಆದಿಲಶಹ, ಬಾಲಕನಾದ ಸೆಂಗಾಮಲದಾಸನಿಗೆ ರಾಜ್ಯ ದೊರೆಯುವಂತೆ ಮತ್ತು ರಾಯಸಾಮಾ ವೆಂಕಣ್ಣನಿಗೆ ಸಹಾಯ ಮಾಡಲು ಶಹಾಜಿಯ ಮಗ (ಏಕೋಜಿ) ವೆಂಕೋಜಿ ಭೋಸಲೆಯನ್ನು ಸೈನ್ಯದೊಡನೆ ಕಳುಹಿಸಿದನು. ಕ್ರಿಸ್ತ ಶಕ ೧೬೭೪ ರಲ್ಲಿ ಸೆಂಗಾಮಲದಾಸನು ಪಟ್ಟವನ್ನೇರಿದರೂ ಆತನನ್ನು ಕಾಪಾಡಿದ ದಾಸಿ ಮತ್ತು ಆಶ್ರಯ ನೀಡಿದ ವ್ಯಾಪಾರಿ, ಈ ಮೂವರಲ್ಲಿ ವ್ಯಾಜ್ಯ ಪ್ರಾರಂಭವಾಯಿತು. ಸೆಂಗಾಮಲನು ರಾಜ್ಯವನ್ನು ಬಿಟ್ಟು ಓಡಿಹೋದನು. ರಾಯಾಸಾಮಾ ವೆಂಕಣ್ಣ ಈ ಎಲ್ಲ ಘಟನೆಗಳನ್ನು ವೆಂಕೋಜಿಗೆ ತಿಳಿಸಿದನು. ಕ್ರಿಸ್ತ ಶಕ ೧೬೭೬ ರಲ್ಲಿ ವೆಂಕೋಜಿ ಯಾವ ಆಂತಕವಿಲ್ಲದೆ ತಂಜಾವರವನ್ನು ವಶಪಡಿಸಿಕೊಂಡು ಬೆಂಗಳೂರಿನಲ್ಲಿದ್ದ ತನ್ನ ರಾಜ್ಯವನ್ನು ತಂಜಾವರಕ್ಕೆ ಸ್ಥಳಾಂತರಿಸಿದನು. ತನ್ನ ರಾಜಕೀಯ ಜೀವನ ಕಾಲದಲ್ಲಿ ಸಂಸ್ಕೃತಿಯ ವಿಕಾಸ, ವಿದ್ಯೆ, ಕಲೆ, ವಾಙ್ಮಯ ಮುಂದುವರಿಯಲು ಉತ್ತೇಜನ ನೀಡಿದನು. ಈತನಿಗೆ ಶಹಾಜಿ, ಸರಫೋಜಿ, ತುಕ್ಕೋಜಿ ಎಂಬ ಮೂವರು ಮಕ್ಕಳು.

ವೆಂಕೋಜಿಯ ಮಗ ಶಹಾಜಿ (೧೬೮೪–೧೭೧೨) ಬಹುಭಾಷಾ ಪಂಡಿತ. ನಿಪುತ್ರಕನಾದ ಈತನ ಮರಣದ ನಂತರ ಬಂಧುಗಳಾದ ಶರಫೋಜಿ (೧೭೧೨–೧೭೨೮) ಮತ್ತು ತುಕೋಜಿ (೧೭೨೮–೧೭೩೬) ಸಂಯುಕ್ತವಾಗಿ ರಾಜ್ಯವಾಳಿದರು. ಅವರೆ ಕ್ರಿ. ಶ. ೧೭೨೮ರಲ್ಲಿ ಶರಫೋಜಿ ಮರಣ ಹೊಂದಿದ. ತುಕೋಜಿ ಪಟ್ಟಕ್ಕೆ ಬಂದ ಬಳಿಕ ಕೈಕೊಂಡ ಮಹತ್ವದ ಸಾಂಸ್ಕೃತಿಕ ಕಾರ್ಯಗಳಲ್ಲಿ, ಹಿಂದುಸ್ಥಾನಿ ಸಂಗೀತಕ್ಕೆ ತಂಜಾವರದಲ್ಲಿ ಮಹತ್ವದ ಸ್ಥಾನ ನೀಡಿದುದನ್ನು ನೆನೆಯಬೇಕಾಗುವುದು. ತುಕೋ-ಜಿಗೆ ಐದು ಮಂದಿ ಹೆಂಡಂದಿರು. ಅವರೆಲ್ಲರಿಗೂ ಗಂಡು ಸಂತಾನ. ಸುಜಾನಬಾಯಿ ಎಂಬ ಹೆಂಡತಿಯಿಂದ ಏಕೋಜಿ ಎಂಬ ಮಗನಿದ್ದನು. ಇವಳ ಧೂರ್ತತನದ ಎದುರಿಗೆ ರಾಜ್ಯಕ್ಕಾಗಿ ಸಾಗಿದ ವ್ಯಾಜ್ಯದಲ್ಲಿ ಯಾರ ಬೇಳೆಯೂ ಬೇಯಲಿಲ್ಲ. ಆದರೆ ಕೋಟೆಯ ರಕ್ಷಕ ಸೈಯದ ಖಾನನ ಕಪಟತನದಿಂದ ಇವಳು ಮರಣ ಹೊಂದಿದಳು. ಏಕೋಜಿ ೧೭೩೮-೧೭೩೯ ಪಟ್ಟಕ್ಕೆ ಬಂದು ಆಳಿದ್ದು ಒಂದೇ ವರುಷ. ಸೈಯದ ಖಾನನ ಮೂಲಕ ಸೈನ್ಯದ ಪ್ರಾಬಲ್ಯ ಅರಾಜಕತೆ ಮನೆಮಾಡಿತು. ಮಲ್ಹಾರಜಿ ಗಾಡೆ ಮತ್ತು ಮಾನಾಜಿ ಜಗತಾಪ ಬಂಡೆಬ್ಬಿಸಿ ಸೈಯದಖಾನ ಮತ್ತು ಆತ ಪಟ್ಟಕ್ಕೆತಂದ ಕಾಟರಾಜನನ್ನು ಹೊಡೆದಟ್ಟಿದರು. ಏಕೋಜಿಯ ಮಗ ಪ್ರತಾಪ

ಸಿಂಹನು ಕ್ರಿಸ್ತ ಶಕ ೧೭೩೯ರಲ್ಲಿ ಪುನಃ ತಂಜಾವರ ರಾಜ್ಯ ಕಾರಭಾರದ ಜವಾಬದಾರಿ ವಹಿಸಿದನು. ಪ್ರತಾಪಸಿಂಹ (೧೭೩೯–೧೭೬೩) ಮತ್ತು ಆತನ ಮಗ ತುಳಾಜಿ (೧೭೬೩–೧೭೮೭) ಇವರ ಕಾಲ ಸಾಕಷ್ಟು ಕಠಿಣ ಪ್ರಸಂಗಗಳನ್ನು ಎದುರಿಸುವಲ್ಲಿ ಸಾಗಿದರೂ ಇಬ್ಬರೂ ವ್ಯಾಸಂಗಿಗಳಾಗಿದ್ದರು. ತುಕಾಜಿಯ ಮಕ್ಕಳು ಚಿಕ್ಕಂದಿನಲ್ಲಿಯೇ ಮರಣ ಹೊಂದಿದ್ದರಿಂದ ತನ್ನ ಜೀವನದ ಉತ್ತರಾರ್ಧ ಕಾಲದಲ್ಲಿ ಸರಫೋಜಿ ಎಂಬುವವನನ್ನು ದತ್ತಕ ತೆಗೆದುಕೊಂಡಿದ್ದನು. ಬಾಲ್ಯದಲ್ಲಿ ಸರಫೋಜಿಗೆ ವಿದ್ಯೆ ಕಲಿಸಿದವ ಸ್ವಾರ್ಟ್ಝ್ ಎಂಬ ಡ್ಯಾನಿಶ್ ಪಾದ್ರಿ. ಆದುದರಿಂದ ಫ್ರೆಂಚ್ ಮತ್ತು ಇಂಗ್ಲಿಷ್ ಭಾಷೆಗಳ ಅಭಿರುಚಿಯೂ ಇತ್ತು. ಭಾರತೀಯ ಭಾಷೆಗಳನ್ನೂ ಅಧ್ಯಯನ ಮಾಡಿದ್ದ. ಸರಸ್ವತಿ ಮಹಲ್ ಗ್ರಂಥಾಲಯ, ಕಲ್ಲಚ್ಚಿನ ಮುದ್ರಣಾಲಯ, ಸಂಗೀತ ಮಹಲ್ ನಾಟ್ಯಗೃಹಗಳನ್ನು ಸ್ಥಾಪಿಸಿದ ಶ್ರೇಯ ಸರಫೋಜಿಗೆ ಸೇರುವುದು. ಸರಫೋಜಿಯ ಕಾಲ ೧೭೯೮–೧೮೩೩ ಎಂದು ತಿಳಿಯಲಾಗಿದೆ. ಈತನ ಮಗ ಶಿವಾಜಿ (೧೮೩೩–೧೮೫೫) ಭೋಸಲೇ ಕುಲದ ಕೊನೆಯ ರಾಜ. ಸ್ವಭಾವದಿಂದ ಈತ ಉದಾರನಿದ್ದುದರಿಂದ ಈತನಿಗೆ ದಕ್ಷಿಣದ ಕರ್ಣನೆಂದು ಕರೆಯುತ್ತಿದ್ದರು. ವಿದ್ಯೆ ಮತ್ತು ಕಲೆಗೆ ಉತ್ತೇಜನ ನೀಡಿದ. ಈತನ ಮರಣದ ನಂತರ ಕ್ರಿಸ್ತಶಕ ೧೮೫೫ರಲ್ಲಿ ಬ್ರಿಟಿಶರ ರಾಜ್ಯ ಕಾರಭಾರ ತಂಜಾವರದಲ್ಲಿ ಪ್ರಾರಂಭವಾಯಿತು.

'ಆಂಧ್ರ ಯಕ್ಷಗಾನ ವಾಙ್ಮಯ ಚರಿತ್ರೆ' ಎಂಬ ಗ್ರಂಥದಲ್ಲಿ ಶಹಾರಾಜ ವಿವಿಧ ಭಾಷಾ ಪಂಡಿತ ಮತ್ತು ತೆಲಗು ಭಾಷೆಯಲ್ಲಿ ಆತ ರಚಿಸಿದ ಯಕ್ಷಗಾನಕ್ಕೆ ಒಂದು ಪರಂಪರೆಯುಂಟೆಂದು ಹೇಳಲಾಗಿದೆ. 'ಹರಹರ ವಿಲಾಸ' ಎಂಬ ನಾಟಕದ ಕೊನೆಗೆ "ರಾಜೆ ಮಹಾರಾಜ ಸಾಹೇಬ ತ್ರಿವಾದೀಸ ಸ್ವಾರೀಸ ಗೇಲೆ ಅಸತಾ ನಾಟಕ ಲಿಹಿಲೆ, ನಾಟಕ ಅಠರಾವೆ ಸಂಪೂರ್ಣ ಝಾಲೆ" ಎಂಬ ಉಲ್ಲೇಖವಿದೆ. ಹೆಚ್ಚಾಗಿ ಸಂಸ್ಕೃತ ನಾಟಕಗಳನ್ನೇ ಮಾದರಿಯಾಗಿ ಬಳಸಿ ಕಥಾ ಕಲ್ಪನೆ ಭಾಷೆ ಮತ್ತು ಪದ್ಯ ರಂಜಕವಾಗುವಂತೆ ಕೈಕೊಂಡದ್ದು ಕಾಣುವುದು. ವಿಷ್ಣುದಾಸ ಭಾವೆ ಕ್ರಿಸ್ತಶಕ ೧೮೪೩ರಲ್ಲಿ 'ಸೀತಾಸ್ವಯಂವರ' ಆಟವನ್ನು ಪ್ರದರ್ಶಿಸಿದ ಕಾಲದಲ್ಲಿ ತಂಜಾವರದ ರಂಗಭೂಮಿ ಅಸ್ತಿತ್ವದಲ್ಲಿ ಬಂದು ೧೯೫ ವರುಷವಾಗಿತ್ತಲ್ಲದೆ ತಂಜಾವರದ ಶಿವಾಜಿರಾಜ ಮತ್ತು ಭಾವೆ ಸಮಕಾಲೀನರಿದ್ದರು. (ಆಧಾರ-ಮರಾಠಿ ರಂಗಭೂಮೀಚಾ ಉಷಃಕಾಲ–ಲೇಖಕರು: ಮಾಯಾ ಸರದೇಸಾಯಿ).

ತಂಜಾವರವು ವಿಜಯನಗರದ ರಾಜರ ಅಧೀನದಲ್ಲಿದ್ದ ಕಾಲದಲ್ಲಿ ಯಕ್ಷಗಾನ ನೃತ್ಯ ನಾಟಕ, ಸಂಸ್ಕೃತ, ತೆಲಗು ಭಾಷೆಗಳಿಗೆ ಉತ್ತೇಜನ ದೊರೆಯಿತು. ಆ ಬಳಿಕ ತಂಜಾವರದ ರಾಜ್ಯ ಕಾರಭಾರವನ್ನು ಕೈಕೊಂಡ ಮರಾಠಾ ರಾಜರು, ತಮಗಿಂತ ಮೊದಲು ಆಳಿದವರು ಪ್ರಾರಂಭಿಸಿದ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸಿದರು. ಮರಾಠಿ, ತೆಲಗು, ತಮಿಳು, ಸಂಸ್ಕೃತ, ಹಿಂದೀ ಮತ್ತು ಕನ್ನಡ ಭಾಷೆಗಳ ವಿಕಾಸಕ್ಕಾಗಿ ಉತ್ತೇಜನ ನೀಡಿದರು. ಶಹಾಜೀ (೧೬೮೪-೧೭೧೨) ಬರೆದ ನಾಟಕಗಳ ಪೈಕಿ ಹತ್ತು ಮಾತ್ರ ಉಪಲಬ್ಧವಿವೆ. 'ಗೋವರ್ಧನೋದ್ಧಾರ' ನಾಟಕದ ಕ್ರಮಸಂಖ್ಯೆ ಇಪ್ಪತ್ತು ಎಂದು ಈ ನಾಟಕದ ಕೊನೆಯಲ್ಲಿ ಹೇಳಲಾಗಿದೆ. 'ಗಂಗಾ ಕಾವೇರಿ ಸಂವಾದ' 'ಲಕ್ಷ್ಮೀ ಭೂದೇವಿ ಸಂವಾದ' 'ಪ್ರಭಾವತಿ ಪರಿಣಯ' 'ಸುಭದ್ರಾ ಕಲ್ಯಾಣ' 'ರಾಮ ನಾಟಕ' 'ಚಂದ್ರಶೇಖರ ವಿಲಾಸ' 'ಪಂಚ ಭಾಷಾ ವಿಲಾಸ' ನಾಟಕಗಳನ್ನು ಶಹಾಜಿ ರಚಿಸಿದನಲ್ಲದೆ ಈ ನಾಟಕಗಳು ಸರಸ್ವತಿ ಮಹಲ್ ಗ್ರಂಥಾಲಯದಲ್ಲಿ ನೋಡಲು ದೊರೆಯುತ್ತವೆ. ಶಹಾಜಿ ತನ್ನ ನಾಟಕಗಳಲ್ಲಿ ಭರತನ ನಾಟ್ಯಶಾಸ್ತ್ರ, ಯಕ್ಷಗಾನ, ದಶಾವತಾರಗಳ ಅಂಶಗಳನ್ನು ಬಳಸಿದುದು ನಮಗೆ ಕಾಣುವುದು. ಹೆಚ್ಚಾಗಿ ಇಷ್ಟ ದೇವತಾ ಸ್ತುತಿಯನ್ನು ವಿದೂಷಕ, ಸೂತ್ರಧಾರ, ಪಾರಿಪಾರ್ಶ್ವಕ ಹೇಳುವ ಪರಿಪಾಠ ಇಲ್ಲಿ ಬಳಸಿದಂತೆ ಕಾಣುತ್ತದೆ.

ಶಹಾಜಿಯ ತಮ್ಮನ ಮಗ ಪ್ರತಾಪಸಿಂಹ (ತುಳಾಜಿ ರಾಜನ ಮಗ) ಕ್ರಿಸ್ತಶಕ ೧೭೩೯ ರಿಂದ

೧೭೬೨ರ ವರೆಗೆ ರಾಜ್ಯ ಕಾರಭಾರ ನೋಡು ತ್ತಿದ್ದನು. ಈತ ಇಪ್ಪತ್ತು ನಾಟಕಗಳನ್ನು ಬರೆದನೆಂಬ ಉಲ್ಲೇಖ ದೊರೆಕಿದರೂ ಸರಸ್ವತಿ ಮಹಲ್ ಗ್ರಂಥಾಲಯದಲ್ಲಿ ನಮಗೆ ಈತನ ಹದಿನೇಳು ಕೃತಿಗಳು ನೋಡಲು ದೊರೆ-ಯುವವು. 'ಪ್ರಬೋಧ ಚಂದ್ರೋದಯ' ನಾಟಕದ ಕೊನೆಗೆ "ಶ್ರೀ ಕೃಷ್ಣ ಮಿಶ್ರ ವಿರಚಿತ ಸಂಸ್ಕೃತ ನಾಟಕ ಅಸತಾ ಪ್ರತಾಪ ಸಿಂಹೇಂದ್ರಾನಿ ಲೋಕೋಪಕಾರಾರ್ಥ ಭಾಷಾಂತರ ಕೇಲೆ" ಎಂಬ ಉಲ್ಲೇಖ ದೊರೆಯುವುದು. ಈತನ 'ಪಾರಿಜಾತ ಪರಿಣಯ' 'ಯಯಾತಿ ಚರಿತ್ರ' 'ಕೊರವಂಜಿ' 'ಜಾನಕೀಸುಖೋಲ್ಲಾಸ' ನಾಟಕ ಗಳಲ್ಲಿ ಸಂಸ್ಕೃತ ಪ್ರಚುರ ವಾಕ್ಯ ರಚನೆಗಳಿಗೆ ಮಹತ್ವ ನೀಡಿದಂತೆ ಕಾಣುತ್ತದೆ. ಕಥಾ ರಚನೆ, ವ್ಯಕ್ತಿ ಚಿತ್ರಣ, ನಾಟ್ಯ ಪೂರ್ಣ ಸಂವಾದಗಳು ಆಕರ್ಷಕವಾಗಿ ತೋರುತ್ತವೆ. ಕೊರವಂಜಿ ಪಾತ್ರವನ್ನು ಮರಾಠಿ ಕೃತಿಯಲ್ಲಿ ಮೊಟ್ಟ ಮೊದಲು ಬಳಸಿದವನು ಶಹಾಜಿ ರಾಜನೇ. ಪ್ರತಾಪಸಿಂಹನು 'ಕೊರವಂಜಿ ಜಾನಕೀ ಸುಖೋಲ್ಲಾಸ' ಎಂಬ ತನ್ನ ಕೃತಿಯಲ್ಲಿ ಅದೇ ಪರಿಪಾಠವನ್ನು ಮುಂದುವರಿಸಿರುವನು.

ರಾಜಾ ಸರ್ಫೋಜಿ (ಪ್ರತಾಪ ಸಿಂಹನ ಮೊಮ್ಮಗ, ತುಳಾಜಿ ರಾಜನ ದತ್ತಕ ಪುತ್ರ ೧೭೯೮-೧೮೩೨) ಕೈಕೊಂಡ ಮಹತ್ವದ ಕಾರ್ಯ; ಪೂರ್ವಜರು ಕೈಕೊಂಡ ಎಲ್ಲ ಸಾಹಿತ್ಯ ಕೃತಿಗಳನ್ನು ಕಲೆ ಹಾಕಿ 'ಸರಸ್ವತಿ ಮಹಲ್' ಗ್ರಂಥಾಲಯದಲ್ಲಿ ಕಾಯ್ದಿರಿಸಿದನು. ಮುದ್ರಣಾ-ಲಯವನ್ನು ಸ್ಥಾಪಿಸಿದನು. ಶಹಾಜಿ ಮತ್ತು ಪ್ರತಾಪಸಿಂಹರ ಕೃತಿಗಳ ಪ್ರಭಾವ ಉಂಟಾದುದು ಈತನ ರಚನೆಗಳಲ್ಲಿ ಕಾಣುವುದು. ಈತ ಬರೆದ ಹತ್ತು ನಾಟಕಗಳಲ್ಲಿ ಕೆಲವು ಮೂರು ಅಂಕಿನ ವಾದರೆ ಕೆಲವು ಐದು ಅಂಕಿನವು. ಶಹಾಜಿ ತೋರಿಸಿದ ನಾಟ್ಯ ರಚನೆ ಮಾರ್ಗ ಸರ್ಫೋ-ಜಿಯ ಕೃತಿಗಳಲ್ಲಿ ವಿಕಾಸಗೊಂಡಿವೆ. ರಂಗ ಮಂಚದ ಮೇಲೆ ಒಂದೇ ಸಮಯಕ್ಕೆ ಎರಡು ದೃಶ್ಯಗಳನ್ನು ತೋರಿಸುವ ತಂತ್ರವನ್ನು ಸರ ಫೋಜಿ ಬಳಸಿದ್ದಾನೆ.

ತಂಜಾವರದ ಕೊನೆಯ ರಾಜ ಶಿವಾಜಿ (೧೮೩೩-೧೮೫೫) ಸರಫೋಜಿಯ ಪುತ್ರ. ಸಾಂಗಲಿಯ ವಿಷ್ಣುದಾಸ ಭಾವೆ ಈತನ ಸಮ ಕಾಲಿಕನಲ್ಲದೆ, ಶಿವಾಜಿ ರಚಿಸಿದ 'ನಟೇಶ ವಿಲಾಸ' ನಾಟಕ ತಂಜಾವರ ಗ್ರಂಥಾಲಯದಲ್ಲಿ ಉಪಲಬ್ಧವಿದೆ. ಅಲ್ಲದೆ ಈತನ ಸಮಕಾಲಿನ ನಾಟಕಕಾರರಾದ ತ್ರ್ಯಂಬಕ ಜ್ಯೋತಿರ್ವಿಂದ, ರಂಗನಾಥ ಕುಪ್ಪಾಚಾರಿ ನಾಟಕಗಳೂ ಸರಸ್ವತಿ ಮಹಲ್ ಗ್ರಂಥಾಲಯದಲ್ಲಿ ನೋಡಲು ದೊರೆ ಯುತ್ತವೆ. ತಂಜಾವರದಲ್ಲಿ ಮರಾಠಾ ರಾಜ್ಯ ಸ್ಥಾಪಿಸಿದವನು ಏಕೋಜಿ (೧೬೭೬-೧೬೮೩). ಇವನಿಂದ ಮುಂದೆ ಇವನ ವಂಶದ ಎಂಟು ರಾಜರು ಒಟ್ಟು ೧೮೦ ವರುಷಗಳ ವರೆಗೆ ರಾಜ್ಯವಾಳಿದರು. ನಾಟಕ, ನಾಟ್ಯ ಸಂಗೀತ, ಕಾವ್ಯ, ಕಲೆ, ನೃತ್ಯ, ವೇದಾಂತ, ಧರ್ಮ, ಜ್ಯೋತಿಷ್ಯ ಇತ್ಯಾದಿಗಳನ್ನು ಬಲ್ಲವರಿಗೆ ಆಶ್ರಯ ನೀಡಿದರು. ಅಲ್ಲದೆ ತಾವು ಸಹ ಕೃತಿ ಮಾಡಿದರು.

ಹದಿನೇಳನೆಯ ಶತಮಾನದಲ್ಲಿ 'ಸೀತಾ ಸ್ವಯಂವರ' ಕಾವ್ಯ ರಚಿಸಿದ 'ಆನಂದತನಯ' ಮತ್ತು 'ದಮಯಂತಿ ಸ್ವಯಂವರ' ರಚಿಸಿದ ರಘುನಾಥ ಪಂಡಿತರ ಕರ್ಮಭೂಮಿ ತಂಜಾ-ವರ. ಕವಿ ಆನಂದತನಯ ಕರ್ನಾಟಕದ ಆರಣಿ ಗ್ರಾಮದವನು. ಶಹಾಜಿಯ ಅಧೀನದಲ್ಲಿ ಆರಣಿ ಕೋಟೆ ಎರಡು ಮೂರು ವರುಷಗಳ ವರೆಗೆ ಇದ್ದುದು ಅರಿತ ಸಂಗತಿ. ಆನಂದತನಯ ಕೆಲವು ಕಾಲದ ವರೆಗೆ ಸಾತಾರಾದಲ್ಲಿದ್ದು ಸಂಸ್ಕೃತದ ಅಧ್ಯಯನ ಮಾಡಿದ. ರಘುನಾಥ ಪಂಡಿತನಿಗೆ ಮರಾಠಿಯಲ್ಲಿ ಕಾವ್ಯ ರಚಿಸಲು ಆತನ ಹಿರಿಯನಾದ ಆನಂದತನಯನೇ ಸ್ಫೂರ್ತಿ ದಾತ. ರಘುನಾಥ ಪಂಡಿತನ ಕಾವ್ಯ ಪ್ರಭಾವ ಮಹಾರಾಷ್ಟ್ರದ ನಾಥ ಸಂಪ್ರದಾಯದ ಕವಿ ದೇವನಾಥನ ಮೇಲೆ ಉಂಟಾದ ವಿಚಾರ ರಘು ನಾಥ ಪಂಡಿತ ರಾಣಾ ಕವಿ ಥೋರ ಸಮರ್ಥ ಎಂಬ ವಾಕ್ಯದ ಮೇಲಿಂದ ಮನಗಾಣಬಹುದು.

ಈ ಎಲ್ಲ ಹಿನ್ನೆಲೆಗಳನ್ನು ಪರಿಶೀಲಿಸಿದ ಬಳಿಕ ಮರಾಠಿ ರಂಗಭೂಮಿಯ ಪಿತಾಮಹ ಯಾರು? ಎಂಬ ಪ್ರಶ್ನೆಗೆ ಸಹಜವಾಗಿ ಉತ್ತರ ದೊರೆ-ಯುವುದು. ✡

# ವ್ಯಗ್ರತೆ!

ಎಂಥ ತುಡಿತವಿದು ಮನವ ಹಿಂಡುವುದು
ತೆಂಗುಮರದಿ ಹುಳವೆ?
ದೃಶ್ಯವಲ್ಲವಿದು ಸ್ಪೃಶ್ಯವಲ್ಲವಿದು
ಅಂತರಂಗದಳವು!

ಬಾಳ ಕೊರಡು ಧಗಧಗಿಸಿ ಸುಡುತಲಿದೆ
ಬೆಂಕಿ ಕಾಣಲಿಲ್ಲ
ಜೀವ ಕುಸುಮವನು ಕೊರೆದು ಹಾಕುತಿದೆ
ಚೂರಿ ಕಾಣಲಿಲ್ಲ

ನೆತ್ತರಾಡಿದರು ನಾಡಿ ನಾಡಿಯಲಿ
ಜೀವಕಾಸೆಯಿಲ್ಲ.
ಹತ್ತು ಆಡಿದರೂ ಹತ್ತು ವಿಷಯಗಳ
ತಾಳಮೇಳವಿಲ್ಲ.

ಕಣ್ಣು-ಮೂಗು ಕಿವಿ ಬಾಯಿ ಕಾರ್ಯಗಳು
ನಡೆದರಿಲ್ಲ ಸೊಗಸು
ನೋಟ-ಗಂಧ-ಶ್ರುತಿ-ಮಾತು ಗಣಿಸದೆ
ಇರುವದಿಲ್ಲಿ ಮನಸು

ಮನಸಿನಲ್ಲಿ ಅದೃಶ್ಯ ಕೊರಗು
ಅಸ್ಪೃಶ್ಯವಾಗಿ ನಿಂತು.
ಬಾಳ ರಸವ ಹಿಂಡುವುದು ತನುವು
ಜರ್ಜರಿತ ದೃಶ್ಯವಾಂತು.

ಲೇಸು ಮರಣವೆನೆ ಮನವು ಭಾವಿಪುದು
ವ್ಯಗ್ರಭಾವ ಬದುಕು
ಜೀವವಿದ್ದರೂ ಸಾವು ಛಾಯೆಯಲಿ
ಬಾಳಲದುವು ಬದುಕೆ?

ಮನಸು ಕೊರೆಯುತಿದೆ; ದೇಹ ಸೊರಗುತಿದೆ
ಪಥ್ಯ ಪಾನವಿಲ್ಲ
ಕನಸು ಕೆಣಕುತಿದೆ; ಹೃದಯ ಚೆದರುತಿದೆ
ಮನಕೆ ಶಾಂತಿಯಿಲ್ಲ.

– **ತಿರುಮಲೇಶನ್**

ಶರೀರದಿಂದ ಬೆಳಕು ಬೀರುವ ಪ್ರಾಣಿಗಳ ಹಾಗೂ ಕೀಟಗಳ ಬಗ್ಗೆ ಹಲವಾರು ಜಾನಪದ ಕಥೆಗಳು ಪ್ರಪಂಚದಾದ್ಯಂತ ಇಂದಿಗೂ ಉಳಿದು ಕೊಂಡಿವೆ.

ರಶಿಯದ ಯಕ್ಷಿಣಿ ಕಥೆಯೊಂದರ ಪ್ರಕಾರ ಬೆರಂಡಿ ಎಂಬ ರಾಜ ತನ್ನ ಬಂಗಾರ ಸೇಬಿನ ಗಿಡದಲ್ಲಿ ದಿನವೂ ಬೆಂಕಿಯ ಹಕ್ಕಿ ಬಂದು ಬಂಗಾರದ ಸೇಬನ್ನು ಕಿತ್ತು ತಿನ್ನುತ್ತಿದ್ದುದನ್ನು ಕಂಡು, ಅವನ್ನು ಹಿಡಿಯಲು ತನ್ನ ಮಗ ಇವಾನನನ್ನು ಕಳುಹಿಸಿದ. ಅವನು ಅದರ ರೆಕ್ಕೆಯನ್ನು ಅದು ಹಾರುವುದರೊಳಗೇ ಹಿಡಿದುಕೊಂಡನಾದರೂ ಅದು ತಪ್ಪಿಸಿಕೊಂಡು ಹಾರಿಹೋಯಿತು. ಕೈಯಲ್ಲಿ ರೆಕ್ಕೆಯ ಕೊನೆ ಮಾತ್ರ ಉಳಿಯಿತು. ಆದರಿಂದ ಹೆಚ್ಚಿನ ಬೆಳಕು ಬಂದು ಇಡೀ ತೋಟವನ್ನೇ ಬೆಂಕಿ ಹತ್ತಿಕೊಂಡ ರೀತಿಯಲ್ಲಿ ಬೆಳಗಿತು. ರಶಿಯದ ವೋಲ್ಗಾ ನದಿಯ ದಂಡೆಯಲ್ಲಿರುವ ಸ್ತಾರಯ ಲಗೋದ ಎಂಬಲ್ಲಿ ಜಾರ್ಜನ ಚರ್ಚ್ ಇದೆ. ಅಲ್ಲಿನ ಸಹಾಯಕ ಪುರೋಹಿತ ಥಿಯೋಡರ್ ೧೮೬೪ ರಲ್ಲಿ ಒಂದು ರಾತ್ರಿ ಬಾತುಕೋಳಿಗಳು ನದಿಯ ತೀರದಲ್ಲಿ ಹಾರುತ್ತಿರುವಾಗ ಅವುಗಳ ಶರೀರದಿಂದ ಬೆಳಕನ್ನು ಕಂಡುದಾಗಿ ತಿಳಿಸಿದ್ದಾನೆ. ಜರ್ಮನಿ, ಫ್ರಾನ್ಸ್, ಇಂಗ್ಲೆಂಡ್, ಯುಗೋಸ್ಲಾವಿಯ ಮೊದಲಾದೆಡೆಯೂ ಬೇಟೆಗಾರರು ಕಾಡುಗಳಲ್ಲಿ ರಾತ್ರಿಯ ವೇಳೆ ಬೆಳಕು ಬೀರುವ ಪ್ರಾಣಿ-ಪಕ್ಷಿಗಳನ್ನು ಕಂಡಿರುವುದಾಗಿ ಹಲವಾರು ದಂತಕಥೆಗಳಿವೆ. ಕಪ್ಪುಸಮುದ್ರದ ಬಳಿ ಇರುತ್ತಿದ್ದ ಹಂಸಪಕ್ಷಿಗಳು ದೀಪದ ಬೆಳಕಕಿನ ಸಾಮರ್ಥ್ಯವನ್ನು ಪಡೆದಿದ್ದುದಾಗಿ ನಾವಿಕರು ವರ್ಣಿಸಿದ್ದಾರೆ. ನ್ಯೂ ಗಿನಿ ದ್ವೀಪದ ಕಾಡುಗಳ ಪಾಪುಆದ ಜನರು ಇದೇ ರೀತಿಯ ಅನುಭವವನ್ನು ಪಡೆದಿರುವುದರ ಬಗ್ಗೆ ವದಂತಿಗಳೂ ಇವೆ. ಮ್ಯಾಂಗ್ರೌವ್ ಕಾಡುಗಳಲ್ಲಿ, ಸಮುದ್ರತೀರದಲ್ಲಿ, ಹಲವಾರು ಪಾದಗಳ ಗುರುತುಗಳು ಬೆಂಕಿಯ ಹಕ್ಕಿಯ ಪಾದಗಳ ಗುರುತನ್ನೇ ಹೋಲುವುದಾಗಿ ಅಲ್ಲಿ ಯುದ್ಧದ ಸಮಯದಲ್ಲಿ ಸಂಚರಿಸಿರುವ ಸಿಪಾಯಿಗಳು ತಿಳಿಸಿರುವುದೂ ಉಂಟು.

# ಬೆಳಕು ಬೀರುವ ಜೀವಿಗಳು

ಕೃ. ನಾರಾಯಣರಾವ್

ಹಾಗಾದರೆ ಅವು ಈ ಬೆಳಕು ಬೀರುವುದರ ರಹಸ್ಯವಾದರೂ ಏನು? ಈ ಕುರಿತು ರಶಿಯದ ವಿಜ್ಞಾನಿಗಳು ಮೂರು ನಾಲ್ಕು ದಶಕಗಳಿಗೂ ಮೀರಿ ಸಂಶೋಧಿಸಿ ಸಾಕಷ್ಟು ಬೆಳಕು ಚಲ್ಲಿದ್ದಾರೆ. ಈ ಬೆಳಕು ಬರಲು ಕಾರಣ ಹಲವು ಪ್ರಾಣಿಗಳು ವಿಶೇಷ ರೀತಿಯ ಜೀವಕೋಶಗಳುಳ್ಳವಾಗಿದ್ದು

ಅದರಲ್ಲಿ ಲುಸಿಫಿರೆನ್ ಎಂಬ ಹಳದಿ ಬಣ್ಣದ ರಾಸಾಯನಿಕ ಪದಾರ್ಥವಿದೆ. ಅದರಲ್ಲಿರುವ ಲುಸಿಫಿರೇಸ್ ಎಂಬ ಸೂಕ್ಷ್ಮ ಹರಳಿನಂಥ ಕಿಣ್ವಗಳು ಬೆಳಕನ್ನು ಚೆಲ್ಲುವವೆಂದು ಅವರ ಸಿದ್ಧಾಂತ.

ಗಿಡ ಮರಗಳಲ್ಲಿಯೂ ಬೆಳಕನ್ನು ಕೊಡುವ ಅವಕಾಶಗಳು ಉಂಟು ಎಂಬುದನ್ನು ವಿ. ಲೆಪೆ-ಷ್ಕಿನ್ ಹಾಗೂ ಎ. ಗುರ್ವಿಚ್ ಎಂಬ ರಶಿಯನ್ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ಮೂವತ್ತು ವರ್ಷಗಳ ಕಾಲದ ಸತತ ಅಧ್ಯಯನದ ನಂತರ ಇವರು ಪ್ರಯೋಗಗಳ ಮೂಲಕ ಗಿಡ ಮರಗಳು ಬೆಳಕು ಬೀರುವ ವಿಷಯದ ಬಗ್ಗೆ ದೃಢೀಕರಿಸಿದ್ದಾರೆ. ಆದರೆ ಇವುಗಳ ಕೋಶಗಳಿಂದ ಕೇವಲ ಮಂದಪ್ರಕಾಶದ ಬೆಳಕು ಬರುವುದನ್ನು ಮಾತ್ರ ಮನಗಂಡಿದ್ದಾರೆ. ಕೊಬ್ಬನ್ನು ಒಳಗೊಂಡ ಅನೇಕ ವಸ್ತುಗಳು ಗಿಡಮರಗಳಲ್ಲಿದ್ದು ತಮ್ಮ ಊತಕಗಳ ಮೂಲಕ ಬೆಳಕು ಚೆಲ್ಲುವವೆಂಬುದನ್ನು ವಿಶ್ಲೇಷಿಸಿದ್ದಾರೆ.

ಇದೇ ವಿಚಾರವು ಪ್ರಾಣಿಗಳಲ್ಲಿರುವ ಊತಕಗಳಿಗೂ ಸಂಬಂಧಿಸುತ್ತದೆ. ಪ್ರಾಣಿಗಳಲ್ಲಿರುವ ಲಿಪಿಡ್ ಎಂಬ ಕೊಬ್ಬಿನ ಉತ್ಕರ್ಷಣದಿಂದಲೂ ಬೆಳಕು ಹೊರಬರುತ್ತದೆ. ಸಮುದ್ರದಲ್ಲಿ ತುಂಬಾ ಆಳದಲ್ಲಿ ವಾಸಿಸುವ ಸಸ್ಯಜೀವಿಗಳಾದ ಪೆರಿಡೀನಿ-ಯಾಗಳು ಸಮುದ್ರದಲ್ಲಿ ಹೊಳೆಯುವ ಸುಂದರ ಸ್ಥಳಗಳನ್ನೇ ನಿರ್ಮಿಸಿವೆ. ಸಮುದ್ರದಲ್ಲಿ ಮುಳುಗು ಹಾಕುವವರು ಇಂಥ ಹಲವಾರು ಅಪೂರ್ವ ದೃಶ್ಯಗಳನ್ನು ನೋಡಿರುವುದುಂಟು. ಇವು ಸದಾ ಕಾಲವೂ ಬೆಳಕನ್ನು ಹೊರಚೆಲ್ಲುವುದಿಲ್ಲ. ನೀರಿನಲ್ಲಿ ಚಲನವಲನಗಳ ಸಂದರ್ಭದಲ್ಲಿ ಅಲೆಗಳು ಎದ್ದಾಗ ಪೆರಿಡೀನಿಯಾಗಳು ತೋರಿಸುವ ಪ್ರತಿಕ್ರಿಯೆ ಈ ಬೆಳಕಾಗಿದೆ. ನ್ಯೂಗಿನಿ ಹಾಗೂ ಉಷ್ಣವಲಯದ ಧ್ರುವ ಪ್ರದೇಶದ ಕಡೆಯ ಸಮುದ್ರ ತೀರಪ್ರದೇ-ಶಗಳಲ್ಲಿ ಇಂಥ ಪ್ರಜ್ವಲಿಸುವ ಪಾದದ ಗುರುತು-ಗಳಿರುವುದನ್ನು ಇಂದಿಗೂ ಕಾಣಬಹುದಾಗಿದೆ.

ಇನ್ನೂ ಹಲವೆಡೆ ಸಾಗರದ ತೀರ ಪ್ರದೇಶಗಳಲ್ಲಿ ವಾಸಿಸುವ ನೀರುಗೋಳಿ, ರಣಗೂಬೆಗಳಲ್ಲಿ ಇಂತಹ ಪ್ರಕಾಶವನ್ನು ಕಂಡವರಿದ್ದಾರೆ. ಅವುಗಳ ರೆಕ್ಕೆಗಳಲ್ಲಿ ಹಾಗೂ ಶರೀರದಲ್ಲಿ ಒಂದು ರೀತಿಯ ಸೂಕ್ಷ್ಮಾಣುಗಳಿರುತ್ತವೆ, ಇವೆರಡರ ಮಧ್ಯೆ ಒಂದು ರೀತಿಯ ಸಹಕಾರ ಭಾವನೆ ಇರುತ್ತದೆ. ಇಂಥ ಸಹಕಾರ ಜೀವನ (ಸಿಂಬಯೋಸಿಸ್)ದ ಕಾರಣ ಈ ಸೂಕ್ಷ್ಮಾಣುಗಳು ತಮಗೆ ಬೇಕಾದ ಆಹಾರಾಂಶಗಳನ್ನು ತಾವು ಅಂಟಿಕೊಂಡಿರುವ ಜೀವಿಗಳಿಂದ ಪಡೆದು ಅವುಗಳ ರಕ್ಷಣೆಗೆ ಬೆಳಕನ್ನು ಹೊರಚಲ್ಲುತ್ತಿರುತ್ತವೆ ಎಂಬುದೂ ವೈಜ್ಞಾನಿಕ ಸಂಶೋಧನೆಯೇ ಆಗಿದೆ.

ಪೆಸಿಫಿಕ್ ಹಾಗೂ ಅಟ್ಲಾಂಟಿಕ್ ಮಹಾಸಾಗರಗಳ ತೀರದಲ್ಲಿ ಸಾರ್ಜಂಟ್ ಮೀನುಗಳನ್ನು ಕಾಣಬಹುದು. ಇವುಗಳ ಶರೀರದ ಮೇಲೆ ಅಧಿಕಾರಿಯ ಕೋಟಿನ ಮೇಲೆ ಹಾಕಿದ ಹೊಳಪಿನ ಗುಂಡಿಗಳಂಥ ಗುರುತು ಕಂಡುಬರುವದರಿಂದ ಈ ಮೀನುಗಳಿಗೆ ಸಾರ್ಜಂಟ್ ಮೀನುಗಳೆಂಬ



“ಹುಡುಗಿ ಒಪ್ಪಿಗೆ. ವರದಕ್ಷಿಣೆಯಲ್ಲಿ ಕೊಡಬೇಕಾದ ಸಾಮಾನಿನ ಲಿಸ್ಟ್ ಕೊಡಿ, ಪ್ರತಿ ರಾತ್ರಿ ಒಂದೊಂದನ್ನೇ ತಂದುಕೊಡ್ತೇವೆ.”

ಹೆಸರು ಬಂದಿದೆ. ಸಂಕೀರ್ಣಕಾಂತಿಯುಕ್ತ ಅಂಗ ಭಾಗಗಳನ್ನು ಹೊಂದಿವೆ. ಗಂಡು-ಹೆಣ್ಣಿನ ಕೂಡಿಕೆಯ ಕಾಲದಲ್ಲಿ ಪರಸ್ಪರ ಆಕರ್ಷಣೆಯ ದ್ಯೋತಕ ರೂಪದಲ್ಲಿ ಈ ಬೆಳಕನ್ನು ಹೊರ ಚೆಲ್ಲುತ್ತಿರುತ್ತವೆ ಎಂದು ವಿಜ್ಞಾನಿಗಳು ನಿರ್ಧರಿಸಿದ್ದಾರೆ. ಇವುಗಳ ಹೊರಮೈಗೆ ಅಪಾರ ದರ್ಶಕ ಕಪ್ಪು ಪೊರೆಯು ಇದ್ದು, ಒಳ ಮೈಯಲ್ಲಿ ಬರುವ ಬೆಳಕನ್ನು ಪ್ರತಿಬಿಂಬಿಸುತ್ತಿರುತ್ತವೆ. ಇವುಗಳಂತೆಯೇ ಸ್ಕಿಡ್ ಜೀವಿಗಳೂ ಕಾಂತಿಯುತ ಅಂಗಗಳುಳ್ಳವಾಗಿದ್ದು, ಬೆಳಕಿನ ಉಪಯೋಗವನ್ನು ಪಡೆದಿವೆ.

ಇರುಳ್ಮಿಂಜಿ ಎಂಬ ಹೆಸರಿನ ಕೃಶಾಂಗ ಜೀವಿಗಳು ಎರಡು ಮಿಲಿಮೀಟರ್ ಗಾತ್ರದ ಪುಟ್ಟ ಚೆಂಡುಗಳಂತಿರುತ್ತವೆ. ಇವು ನಸು ಕಾವಿನಿಂದ ಬೆಳಗಬಲ್ಲವು. ಇವುಗಳ ದೇಹವು ಹರಿದ್ವರ್ಣವನ್ನು ಒಳಗೊಂಡಿದೆ. ಈ ಹರಿದ್ವರ್ಣವು ಇರುಳ್ಮಿಂಜಿಯು ಹೊರಚೆಲ್ಲುವ ಇಂಗಾಲದ ಡೈಆಕ್ಸೈಡ್ ಹೀರಿಕೊಂಡು ಓಷ್ಯೋತ್ಪಾದನೆ ಮಾಡಿಕೊಳ್ಳುತ್ತದೆ. ಈ ಉತ್ಪಾದನೆಯು ಸಹ ಇರುಳ್ಮಿಂಜಿ ಹೊರಚೆಲ್ಲುವ ಬೆಳಕಿನಡಿಯಲ್ಲಿ ನಡೆಯುತ್ತದೆ.

ರಶಿಯ ಕಾಡುಗಳಲ್ಲಿ ಮುಚ್ಚಂಜೆಯ ಸಮಯದಲ್ಲಿ ಚಿಕ್ಕಚಿಕ್ಕ ಹಸಿರು ದೀಪಗಳನ್ನು ರಸ್ತೆಯ ಉದ್ದಕ್ಕೂ ಕಾಣಬಹುದು. ಇವು ಹಸಿರು ತುಣುಕುಗಳ ರೀತಿ ಇರುತ್ತವೆ. ಪ್ರತಿ ತುಣುಕೂ ತಣ್ಣಗಿದ್ದು, ರಾತ್ರಿ ವೇಳೆಯ ಸಂಚಾರಿ ಕೀಟವಾಗಿರುವ ಮಿಣುಕು ಹುಳುಗಳಾಗಿವೆ. ಇವುಗಳಲ್ಲಿ ಹೆಣ್ಣು ಹುಳುಗಳು ಗಂಡು ಹುಳುಗಳಿಗಿಂತ ದೊಡ್ಡವು. ಇವುಗಳ ಉದರ ಭಾಗದಲ್ಲಿ ಸಂಧ್ಯಂತರ ಖಂಡಗಳಿರುತ್ತವೆ. ಇವೇ ಬೆಳಕನ್ನು ಹೊರಚೆಲ್ಲುವವು. ಹಗಲ ವೇಳೆಯಲ್ಲಿ ಹೆಣ್ಣು ಹುಳು ತನ್ನ ಉದರವನ್ನು ನೆಲಕ್ಕೆ ಕಚ್ಚಿಕೊಂಡಿರುವುದರಿಂದ ಬೆಳಕನ್ನು ಪ್ರತಿಬಿಂಬಿಸಲು ಅವಕಾಶ ಇರುವದಿಲ್ಲ. ಗಂಡು ಹುಳುಗಳ ಆಕರ್ಷಣೆಗೆ ಹೆಣ್ಣು ಹುಳುಗಳು ಈ ಬೆಳಕನ್ನು ಉಪಯೋಗಿಸಿಕೊಳ್ಳುತ್ತವೆ. ಇವುಗಳ ಬೆಳಕಿನಲ್ಲಿ ಪುಸ್ತಕದ ಸಾಲುಗಳನ್ನು ಓದಬಹುದು. ಸ್ಕ್ವಿಡ್ ಹಾಗೂ ಕಟಲ್ ಮೀನುಗಳು ಶತ್ರುಗಳ ರಕ್ಷಣೆಗಾಗಿ ತಮ್ಮ ಬೆಳಕನ್ನು ಉಪಯೋಗಿಸಿಕೊಳ್ಳುತ್ತವೆ. ಮೀನುಗಳು ತಮ್ಮ ಬೆಳಕನ್ನು ಪ್ರಾಣರಕ್ಷಣೆಯ ಉಪಾಯುಕ್ತವಾಗಿ ಉಪಯೋಗಿಸಿಕೊಳ್ಳುತ್ತವೆ.

ಕೆಲವು ಹುಳುಗಳು ತಮ್ಮ ಶರೀರದ ಭಾಗಗಳು ಕತ್ತರಿಸಲ್ಪಟ್ಟರೂ ಉಳಿಯಲು ತಮ್ಮಲ್ಲಿ ಉಂಟಾಗುವ ಬೆಳಕಿನ ಮೂಲಕ ಪಾರಾಗುತ್ತವೆ. ಇವು ತಮ್ಮ ಹಿಂಭಾಗದಲ್ಲಿನ ಭಾಗದಿಂದ ಬೆಳಕನ್ನು ಚೆಲ್ಲುತ್ತಿದ್ದು ಶತ್ರುಗಳ ದಾಳಿಗೆ ಸಿಕ್ಕಿದಾಗ ಬೆಳಕು ಚೆಲ್ಲುವ ಕಾರ್ಯವನ್ನು ನಿಲ್ಲಿಸುತ್ತವೆ. ಶತ್ರುಗಳು ಇವುಗಳ ಶರೀರದ ಭಾಗವನ್ನು ಕತ್ತರಿಸಿದರೂ ಕತ್ತಲಲ್ಲಿ ಮರೆಮಾಚಿಕೊಂಡು ಮತ್ತೆ ಕಳೆದುಹೋದ ಭಾಗವನ್ನು ಕ್ರಮೇಣ ಬೆಳೆಸಿಕೊಳ್ಳುವ ಸ್ವಸಾಮರ್ಥ್ಯ ಈ ಹುಳುಗಳಿಗಿದೆ.

ಹಿಂದೆ ಬೆಳಕನ್ನು ಕೊಡುವ ಮೀನುಗಳನ್ನು ಸಿಪಾಯಿಗಳು ತಮ್ಮ ಉಪಯೋಗಕ್ಕೆ ಬಳಸಿಕೊಳ್ಳುತ್ತಿದ್ದುದರ ಬಗ್ಗೆ ವಿವರಣೆಗಳು ದೊರೆಯುತ್ತವೆ. ಜಪಾನಿನ ಸೈನಿಕರು ತಮ್ಮ ಪೆಟ್ಟಿಗೆಗಳಲ್ಲಿ ಒಣಗಿದ ಕ್ರೇ ಮೀನುಗಳನ್ನು ಇಟ್ಟುಕೊಂಡಿದ್ದರು. ಇವು ಬೆಳಕನ್ನು ಕೊಡದಿದ್ದರೂ ತೇವಮಾಡಿದಾಗ ಬೆಳಕು ಹೊರಬರುತ್ತಿತ್ತು. ರಾತ್ರಿಯ ವೇಳೆ ಕತ್ತಲಸಮಯದಲ್ಲಿ ಭೂಪಟವನ್ನು ಓದಲು, ಅಧಿಕಾರಿಗಳು ಕಳುಹಿಸಿದ ಗುಪ್ತ ಸಂದೇಶದ ವಿಚಾರಗಳನ್ನು ತಿಳಿಯಲು ಈ ಬೆಳಕು ಅವರಿಗೆ ಸಾಧನ ರೀತಿಯಲ್ಲಿತ್ತು. ✡



# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದ ಭಂಡಾರವು ಹಣದ ಭಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸುವ ಅರ್ಥವನ್ನು ಗುರುತಿಸಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಹಜಾರ
(ಅ) ಸಿದ್ಧವಾಗಿರುವುದು (ಆ) ಗುರಿಕಟ್ಟೆ
(ಇ) ಪೇಟೆ (ಈ) ಪಡಸಾಲೆ

೨. ಶ್ರಾವಣ
(ಅ) ಕಿವಿಗೆ ಸಂಬಂಧಿಸಿದ್ದು (ಆ) ಕರಗಿದ್ದು
(ಇ) ತಲೆ ತಿರುಗುವಿಕೆ (ಈ) ಆರ್ಭಟ

೩. ಪೇರಿಸು
(ಅ) ಉತ್ಸಾಹ ಕೊಡು (ಆ) ಒಂದರ ಮೇಲೊಂದು ಒಟ್ಟು (ಇ) ಕುಣಿಸು (ಈ) ದೊಡ್ಡದು ಮಾಡು

೪. ಹೇಳಿಗೆ
(ಅ) ಹೇಳಿದ್ದು (ಆ) ಕಂದಾಯ (ಇ) ಬುಟ್ಟಿ (ಈ) ಹೊಲಸು

೫. ಛೇಡಿಸು
(ಅ) ಕತ್ತರಿಸು (ಆ) ಕುಚೇಷ್ಟೆ ಮಾಡು
(ಇ) ಬಿಟ್ಟು ಬಿಡು (ಈ) ಚಾಡಿ ಹೇಳು

೬. ಜಂಬುಕ
(ಅ) ನಾಯಿ (ಆ) ನೇರಿಳೆ (ಇ) ನರಿ
(ಈ) ಹೆಡ್ಡ

೭. ಲೇಶ
(ಅ) ಒಣಗಿಸುವಿಕೆ (ಆ) ಅಡಿಗೆ ಮದ್ದು
(ಇ) ಕಿರಣ (ಈ) ತೀರ ಸ್ವಲ್ಪ

೮. ಮೊಹಲ್ಲಾ
(ಅ) ಕೇರಿ (ಆ) ಭ್ರಮೆ (ಇ) ನಾಣ್ಯ
(ಈ) ಸೈನ್ಯ

೯. ಪಕ್ವ
(ಅ) ಹಣ್ಣಾದ (ಆ) ಬದಿಯದು (ಇ) ವಾತರೋಗ (ಈ) ಗುರಿ

೧೦. ದ್ರಷ್ಟವ್ಯ
(ಅ) ದಟ್ಟವಾದ (ಆ) ದಾಂಡಿಗ (ಇ) ನೋಡತಕ್ಕದ್ದು (ಈ) ಕಚ್ಚಿದ

೧೧. ವಿಪುಲ
(ಅ) ಬಯಲು (ಆ) ಧಾರಾಳ (ಇ) ವ್ಯರ್ಥ (ಈ) ಅಡವಿ

೧೨. ತೆಪ್ಪರು
(ಅ) ಬವಳಿ (ಆ) ಗದ್ದೆಯ ಅಂಚು (ಇ) ಜಾರು (ಈ) ಚೇತರಿಸು



## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. ಹಜಾರ (ಈ) ಪಡಸಾಲೆ, ನಡುಮನೆ, ಉದಾ:-ಹಜಾರದಲ್ಲಿ ಕುಳಿತು ಮಾತಾಡು ತ್ತಿದ್ದರು [ತೆಲಗು-ಹಾಜಾರ]

೨. ಶ್ರಾವಣ (ಅ) ಕಿವಿಗೆ ಸಂಬಂಧಿಸಿದ್ದು, ಕೇಳಿಸಿಕೊಳ್ಳುವಂಥದು. ಉದಾ:- ರೇಡಿಯೋ ಎಂಬುದು ಶ್ರಾವಣ ಮಾಧ್ಯಮ. [ಸಂ. ಶ್ರು-ಕೇಳು ಧಾತುವಿನಿಂದ]

೩. ಪೇರಿಸು (ಆ) ಒಂದರ ಮೇಲೊಂದು ಒಟ್ಟು, ರಾಶಿ ಮಾಡು, ಹೇರು. ಉದಾ:- ಕಾಗದದ ಹಾಳೆಗಳನ್ನು ಪೇರಿಸಿಟ್ಟು. [ಕನ್ನಡ—ಪೇರು = ಹೇರು]

೪. ಹೇಳಿಗೆ (ಇ) ಬುಟ್ಟಿ, ಪೆಡಿಗೆ; (ವಿಶೇಷ ವಾಗಿ) ಹಾವಿನ ಬುಟ್ಟಿ; ಪೆಟ್ಟಿಗೆ. ಉದಾ:- ಹೇಳಿಗೆಯನ್ನು ತೆರೆದು ಹಾವು ಬಿಟ್ಟ. [ಕನ್ನಡ—ಪೇಳಿಗೆ ಸಂ. ಪೇಟಿಕಾ = ಪೆಟ್ಟಿಗೆ]

೫. ಛೇಡಿಸು (ಆ) ಕುಚೇಷ್ಟೆ ಮಾಡಿ ರೇಗಿಸು, ಕೆಣಕು, ಪೀಡಿಸು. ಉದಾ:-ಹುಡುಗಿ ಯರನ್ನು ಛೇಡಿಸುವ ತುಂಟರು. [ಹಿಂದಿ—ಛೇಡನಾ = ರೇಗಿಸು]

೬. ಜಂಬುಕ (ಇ) ನರಿ; ಉಪಾಯಗಾರ ಉದಾ:- ಅವನು ದೊಡ್ಡ ಜಂಬುಕ [ಸಂ.]

೭. ಲೇಶ (ಈ) ತೀರ ಸ್ವಲ್ಪ, ತೀರ ಚಿಕ್ಕ. ಉದಾ:- ಲೇಶ ಕರುಣೆ ಇಲ್ಲ. [ಸಂ.]

೮. ಮೊಹಲ್ಲಾ (ಅ) ಕೇರಿ; ವಿಶಿಷ್ಟ ವರ್ಗದ ಜನರ ವಸತಿ. ಉದಾ:- ಮುಸ್ಲಿಮರ ಮೊಹಲ್ಲಾ. [ಹಿಂದೀ]

೯. ಪಕ್ವ (ಅ) ಹಣ್ಣಾದ, ಮಾಗಿದ, ಬೆಂದ, ಬೇಯಿಸಿದ. ಉದಾ:- ಚೆನ್ನಾಗಿ ಪಕ್ವ ವಾದ ಹಣ್ಣು, ಅನ್ನ. [ಸಂ. ಪಚ್ = ಬೇಯು—ಧಾತುವಿನಿಂದ]

೧೦. ದೃಷ್ಟವ್ಯ (ಇ) ನೋಡತಕ್ಕದ್ದು, ಕಾಣ ಬೇಕಾದ್ದು. ಉದಾ:- ದೃಷ್ಟವ್ಯವಾದ ದೃಶ್ಯ [ಸಂ. ದೃಶ್ = ನೋಡು-ಧಾತುವಿ ನಿಂದ]

೧೧. ವಿಪುಲ (ಅ) ಧಾರಾಳ, ತುಂಬಾ, ಬೇಕಷ್ಟು, ವಿಸ್ತಾರವಾದ, ದೊಡ್ಡ. ಉದಾ:- ವಿಪುಲವಾದ ಅವಕಾಶ ಇದೆ. [ಸಂ. ಧಾರಾ = ಸುರಿಯುವಂಥದು]

೧೨. ತೆಪ್ಪರು (ಈ) ಚೇತರಿಸಿಕೊಳ್ಳು, ಮೂರ್ಛೆಯಿಂದ ತಿಳಿದೆದ್ದು ಸುಧಾರಿಸಿ ಕೊಳ್ಳು; ಚೇತರಿಸಲು ನೆರವಾಗು, ಹುರಿ ದುಂಬಿಸು. ಉದಾ:- ಪೆಟ್ಟಿನಿಂದ ತೆಪ್ಪರಿ ದನು. [ದೇಶ್ಯ]

●

### ನಿಮ್ಮ ಶಬ್ದಶಕ್ತಿಯ ತರ ಗತಿ

ನಿವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿ ಗಳನ್ನು ತಿಳಿಯಿರಿ.

| | | |
|---|---|---|
| ೬-೮ ಸರಿಯಿದ್ದರೆ | ... | ಸಾಧಾರಣ |
| ೯-೧೦ ,, | ... | ಉತ್ತಮ |
| ೧೧-೧೨ ,, | ... | ಅತ್ಯುತ್ತಮ |

●

# ಆ ಪತ್ರ

ಮೂಲ : ಗೌರೀಶಂಕರ ಜೋಶಿ
ಅನುವಾದ : ಸತ್ಯನಾರಾಯಣ ಕೆ. ಎಸ್.

ಸಂತಸದ ಕ್ಷಣಗಳ ನೆನಪು ಜೀವನವನ್ನು ಬೆಳಗಿಸುವಂತೆ, ಕಗ್ಗತ್ತಲ ರಾತ್ರಿಯಲ್ಲಿ ಅಲ್ಲಲ್ಲಿ ಕೆಲವು ನಕ್ಷತ್ರಗಳು ಮಿಂಚುತ್ತಿದ್ದವು. ಕೊರೆಯುವ ಚಳಿಯಿಂದ ರಕ್ಷಿಸಿಕೊಳ್ಳಲು ತನ್ನ ಚಿಂದಿ ಚಿಂದಿಯಾದ ದೊಗಲಂಗಿಯನ್ನು ಪದೇ ಪದೇ ಜಗ್ಗುತ್ತಾ, ಪದೇ ಪದೇ ಕಲ್ಲನ್ನು ಎಡವುತ್ತಾ, ಒಬ್ಬ ಮುದುಕ ಪಟ್ಟಣದಲ್ಲಿ ನಡೆಯುತ್ತಿದ್ದ. ನಸುಕಿನಲ್ಲೇ ಎದ್ದು ಕೆಲಸಕ್ಕೆ ತೊಡಗುವ ಹೆಂಗಳೆಯರ ಹಾಡಿನ ಧ್ವನಿ, ಹಾಗೂ ಅಲ್ಲಲ್ಲಿ ಅರೆಯುವ ಬೀಸುವ ಶಬ್ದಗಳು ಆತನ ಒಂಟಿ ಪಯಣಕ್ಕೆ ಸಹಕಾರಿಯಾಗಿದ್ದವು. ಆಗಾಗ್ಗೆ ಬೊಗಳುವ ನಾಯಿಗಳು, ಬೇಗನೆ ಕೆಲಸಕ್ಕೆ ಹೊರಡುವ ಕೂಲಿಗಳ ಹೆಜ್ಜೆ ಸಪ್ಪಳ, ಕೆಲವೊಂದು ಪಕ್ಷಿಗಳ ಚೀರಾಟಗಳು ಬಿಟ್ಟರೆ ಪಟ್ಟಣವಿಡೀ ಸ್ಮಶಾನಮೌನದಿಂದ ಆವರಿಸಲ್ಪಟ್ಟಿತ್ತು. ಬಹುತೇಕ ಎಲ್ಲಾ ಜನರೂ ನಿದ್ರಾದೇವಿಯ ವಶದಲ್ಲಿದ್ದರು. ತೀವ್ರವಾದ ಚಳಿಯಿಂದ ಅವರ ನಿದ್ದೆ ಗಾಢ ನಿದ್ರೆಯಾಗಿ ಮಾರ್ಪಾಟಾಗಿತ್ತು. ಚಳಿಯಿಂದ ನಡುಗುತ್ತಾ ಟಾನ್‌ಗೇಟಿನ ಹೊರ ಬಂದು ನೇರದಾರಿಗೆ ಬರುವಷ್ಟರಲ್ಲೇ ಆತ ಆಯಾಸಗೊಂಡಿದ್ದ. ಊರುಗೋಲನ್ನು ಆಧಾರವಾಗಿಟ್ಟುಕೊಂಡು ಸ್ವಲ್ಪ ನಿಧಾನಗತಿಯಲ್ಲಿ ಮುನ್ನಡೆಯುತ್ತಿದ್ದ.

ರಸ್ತೆಯ ಒಂದು ಮಗ್ಗುಲಿನಲ್ಲಿ ಮರದ ಸಾಲು ಹಾಗೂ ಇನ್ನೊಂದು ಮಗ್ಗುಲಿನಲ್ಲಿ ಉದ್ಯಾನವನಗಳಿದ್ದವು. ಗಾಢ ಹಾಗೂ ತೀಕ್ಷ್ಣವಾದ ಚಳಿಗಾಳಿ ನೇರವಾಗಿ ರಸ್ತೆಯೆಡೆ ಬೀಸುತ್ತಿತ್ತು. ಉದ್ಯಾನವನದ ಕೊನೆಯಲ್ಲಿ ನವೀನ ಮಾದರಿಯ ಸುಂದರವಾದ ಕಟ್ಟಡವಿತ್ತು. ಅದರ ಮುಚ್ಚಿದ ಬಾಗಿಲು ಹಾಗೂ ಕಿಂಡಿಗಳಿಂದ ಬೆಳಕು ಹೊರಸೂಸುತ್ತಿತ್ತು. ಆ ಕಟ್ಟಡದ ಮರದ ಕಮಾನನ್ನು ಅವಲೋಕಿಸುತ್ತಾ ತಮ

ಯಾತ್ರೆಯ ಗುರಿ ತಲಪಿದ ಯಾತ್ರಾರ್ಥಿಯಂತೆ ಆ ಮುದುಕ ಆನಂದತುಂದಿಲನಾಗುತ್ತಿದ್ದ. ಆ ಕಮಾನಿನ ಮೇಲೆ 'ಅಂಚೆ ಕಚೇರಿ' ಎಂದು ಹೊಸದಾಗಿ ಬರೆದ ಹಳೆಯ ಫಲಕವಿತ್ತು.

ಆ ಮುದುಕನು ಅಲ್ಲಿ ಹೋಗಿ ಆ ಕಟ್ಟಡದ ವರಾಂಡದಲ್ಲಿ ಕುಳಿತ. ಗೋಡೆಯಾಚೆ ಮಾಮೂಲಿ ಕೆಲಸದಲ್ಲಿ ತೊಡಗಿದ ಎರಡು ಮೂರು ಜನರ ಧ್ವನಿ ಅಲ್ಲಿಗೆ ಕೇಳಿಸುತ್ತಿತ್ತು.

"ಪೋಲಿಸ್ ಸೂಪರಿಟೆಂಡೆಂಟ್," ಒಳಗಿನ ಧ್ವನಿಯೊಂದು ಕರ್ಕಶವಾಗಿ ಕರೆಯಿತು. ಆ ಶಬ್ದದಿಂದ ಪ್ರಭಾವಿತನಾದ ಆ ಮುದುಕ ಹೊಸ ಹುರುಪಿನಿಂದ ಕಾಯಲು ಪ್ರಾರಂಭಿಸಿದ. ಆಳವಾದ ಪ್ರೀತಿ ಹಾಗೂ ನಂಬಿಕೆ ಆ ಕೊರೆಯುವ ಚಳಿಯಲ್ಲೂ ಆತನ ದೇಹವನ್ನು ಬೆಚ್ಚಗಿರಿಸಿದ್ದವು.

ಅಲ್ಲಿರುವ ಗುಮಾಸ್ತನು ಒಂದೊಂದೇ ಇಂಗ್ಲೀಷ್ ವಿಳಾಸವನ್ನು ಓದಿ ನಂತರ ಅಲ್ಲಿರುವ ಗುಮಾಸ್ತನ ಕೈಗೆ ಎಸೆಯುತ್ತಿದ್ದ. ಬಹಳ ಕಾಲದ ಅಭ್ಯಾಸದಿಂದ ಆ ಗುಮಾಸ್ತ ವೇಗವಾಗಿ ಓದುವುದನ್ನು ಮೈಗೂಡಿಸಿಕೊಂಡಿದ್ದ. ದಿವಾನ್ ಸಾಹೇಬ್, ಕಮೀಷನರ್, ಲೈಬ್ರರಿಯನ್ ಇತ್ಯಾದಿ ಓದುತ್ತಾ ಪೋಸ್ಟ್ಮನ್ ಕಡೆ ಎಸೆಯುತ್ತಿದ್ದ. ಈ ಕೆಲಸಗಳ ಮಧ್ಯೆ ತಮಾಷೆಯ ಧ್ವನಿಯೊಂದು ಒಳಗಿನಿಂದ ಕೇಳಿಬಂತು,

"ಕೋಚ್‌ಮನ್ ಆಲಿ"...

ತಕ್ಷಣ ಆ ಮುದುಕ ಎದ್ದುನಿಂತು. ಕೃತಜ್ಞತೆಯಿಂದ ಆಕಾಶದತ್ತ ನೋಡುತ್ತಾ ಒಳಬಾಗಿಲ ಮೇಲೆ ಕೈಯನ್ನಿಟ್ಟ.

"ಗೋಕುಲಬ್ಯಾ ಯಾರು ಅಲ್ಲಿ?" ಪೋಸ್ಟ್ ಮಾಸ್ಟರ್ ಅಲ್ಲಿದ್ದ ಗುಮಾಸ್ತನನ್ನು ಕೇಳಿದ.

ಮುದುಕ ಶಾಂತನಾಗಿ ಉತ್ತರಿಸಿದ, "ನೀವು ಕೋಚ್‌ಮನ್ ಆಲಿ ಎಂದು ಕರೆದಿರಲ್ಲ ಅವನೇ ನಾನು. ನನ್ನ ಪತ್ರಕ್ಕಾಗಿ ಬಂದಿದ್ದೇನೆ," ಎಂದ.

"ಅವನೊಬ್ಬ ಹುಚ್ಚ ಸಾರ್. ಪ್ರತಿದಿನ ಬಂದು ಪತ್ರಕ್ಕಾಗಿ ಸತಾಯಿಸುತ್ತಾನೆ" ಗುಮಾಸ್ತ ಪೋಸ್ಟ್‌ಮಾಸ್ಟರ್‌ಗೆ ಹೇಳಿದ.

ಆಲಿ ನಾಲ್ಕೈದು ವರ್ಷಗಳಿಂದ ಕುಳಿತುಕೊಳುತ್ತಾ ಬಂದಿದ್ದ ಹೊರಗಡೆಯ ಹಳೆಯ ಬೆಂಚಿನಮೇಲೆ ಖಿನ್ನನಾಗಿ ಕುಕ್ಕರಿಸಿದ.

*

ಒಂದು ಕಾಲದಲ್ಲಿ ಆಲಿ ಚಾಲೂಕಿನ ಬೇಟೆಗಾರನಾಗಿದ್ದ. ಆದರೆ ಕೌಶಲ ಹೆಚ್ಚಿದಂತೆ ಬೇಟೆಯಾಡುವುದು ಪ್ರತಿನಿತ್ಯದ ಕೆಲಸಗಳಲ್ಲೊಂದಾಗಿತ್ತು. ಅಫೀಮಿನಂತಹ ಮಾದಕ ವಸ್ತುಗಳ ಚಟವಿದ್ದವರಂತೆ ಬೇಟೆಯಿಲ್ಲದೇ ಒಂದು ದಿನವನ್ನೂ ಕಳೆಯಲಾಗುತ್ತಿರಲಿಲ್ಲ. ಆಲಿ ಕಂದು ಬಣ್ಣದ ಕೌಜಗ ಹಕ್ಕಿಯನ್ನು



ಕಂಡರೆ, ಆತನ ಸಹಚರರಾರಿಗೂ ಕಾಣದಂತೆ ಅದು ಆತನ ಚೀಲವನ್ನು ಸೇರುತ್ತಿತ್ತು. ಆತನ ತೀಕ್ಷ್ಣ ಕಣ್ಣುಗಳು ಪೊದೆಯಲ್ಲಿ ಭಯದಿಂದ ಕುಕ್ಕರಿಸಿದ ಮೊಲಗಳನ್ನು ಹುಡುಕುತ್ತಿದ್ದವು. ಕೆಲವೊಮ್ಮೆ ನಾಯಿಗಳಿಗೂ ಪತ್ತೆ ಹಚ್ಚಲಾಗದಂತಹ ಪೊದೆಗಳಲ್ಲಿ ಮೋಸದಿಂದ ಅಡಗಿದ ಪ್ರಾಣಿಗಳನ್ನೂ ಆತನ ಹದ್ದಿನ ಕಣ್ಣುಗಳು ಹುಡುಕಿ ಕ್ಷಣ ಮಾತ್ರದಲ್ಲೇ ಅವು ಹೆಣವಾಗುತ್ತಿದ್ದವು. ಇದಲ್ಲದೇ ಆತ ಬೆಸ್ತರೊಂದಿಗೂ ಕೆಲವೊಮ್ಮೆ ಹೋಗುವುದಿತ್ತು.

ಆದರೆ ಏಕಮಾತ್ರ ಪುತ್ರಿ ಮಿರಿಯಂಳ ಮದುವೆ ಮಾಡಿಕೊಟ್ಟಕೂಡಲೇ ಅವನ ಬಾಳಿನ ಸಂಜೆ ಪ್ರಾರಂಭವಾಯಿತು. ಅವಳು ತನ್ನ ಗಂಡನೊಂದಿಗೆ ಪಂಜಾಬಿಗೆ ಹೋದಳು. ಅಲ್ಲಿ ಸೈನ್ಯದ ಠಾಣೆಯಲ್ಲಿ ಅವಳ ಗಂಡನಿಗೆ ನೌಕರಿ ದೊರೆತಿತ್ತು. ಆತ ಪ್ರೀತಿ ಹಾಗೂ ವಾತ್ಸಲ್ಯದ ಅರ್ಥವನ್ನು ಆಗ ಅರಿತಿದ್ದ. ತಮ್ಮ ತಂದೆ-ತಾಯಂದಿರಿಂದ ಅಗಲಿದ ಭಯದಿಂದ ಕಂಗೆಟ್ಟ ಕೌಜಗದ ಹಕ್ಕಿಗಳು ನೆಲಕ್ಕುರುಳಿದಾಗ ಆತ ಪಟ್ಟ ಸಂತೋಷ ಹಾಗೂ ನಗು ಪದೇ ಪದೇ ನೆನಪಾಗಿ ಹೃದಯ ಬಿರಿಯುವಂತೆ ಅಳುತ್ತಿದ್ದ.

ಮಿರಿಯಂ ಅವನಿಂದ ದೂರವಾದ ಬಳಿಕ ಅವನಲ್ಲಿ ಬೇಟೆಯಾಡುವ ಆಸಕ್ತಿ ಕುಂದಿಹೋಗಿತ್ತು. ವಿಶ್ವವೇ ಪ್ರೀತಿ ಹಾಗೂ ವಾತ್ಸಲ್ಯದಿಂದ ನಿರ್ಮಿತವಾದದ್ದು, ಎಂಬ ತೀರ್ಮಾನಕ್ಕೆ ಬಂದಿದ್ದ. ತಾಯಂದಿರಿಂದ ಬೇರ್ಪಟ್ಟ ಪ್ರಾಣಿ, ಪಕ್ಷಿಗಳ ಆರ್ತನಾದ ಹೃದಯದಲ್ಲೇ ಮೊಳಗಿದಂತಾಗಿ ಗೊಳೋ ಎಂದು ಅಳುತ್ತಾ ಕುಳಿತಿರುತ್ತಿದ್ದ. ಅಂದಿನಿಂದ ಪ್ರತಿ ದಿನ ನಾಲ್ಕು ಗಂಟೆಗಾಗಲೇ ಎದ್ದು ಅಂಚೆ ಕಚೇರಿಗೆ ಹೋಗುತ್ತಿದ್ದ ತನ್ನ ಮಗಳು ಮಿರಿಯಂಳಿಂದ ಬರುವ ಪತ್ರದ ನಿರೀಕ್ಷೆಯಲ್ಲಿ. ಆಳವಾದ ಭರವಸೆಯಿಂದ ಉದ್ಭವಿಸಿದ ಭಕ್ತಿಭಾವದಿಂದ ಅಂಚೆ ಕಚೇರಿಗೆ ಬರುವವರಲ್ಲಿ ಆತನೇ ಮೊದಲಿಗನಾಗುತ್ತಿದ್ದ.

ಅತಿ ಬೇಸರದ ಸ್ಥಳವಾದ ಅಂಚೆ ಕಚೇರಿ ಅವನಿಗೆ ತೀರ್ಥಕ್ಷೇತ್ರದಂತಾಗಿತ್ತು. ಯಾವಾಗಲೂ ಆತ ಒಂದು ನಿರ್ದಿಷ್ಟ ಸ್ಥಳದಲ್ಲಿ ಬಂದು ಕುಳಿತಿರುತ್ತಿದ್ದ. ಆತನ ಈ ಅಭ್ಯಾಸವನ್ನು ನೋಡಿದ ಜನರು ಅಪಹಾಸ್ಯ ಮಾಡುತ್ತಿದ್ದರು. ಪೋಸ್ಟ್‌ಮನ್ ಸಹಾ ಅವನಿಗೆ ತಮಾಷೆ ಮಾಡುತ್ತಿದ್ದ. ಅವನಿಗೆ ಯಾವ ಪತ್ರವಿಲ್ಲದಿದ್ದರೂ ಅವನು ಜಿಗಿದು ಓಡಿ ಬರುವುದನ್ನು ನೋಡಲೋಸುಗ ಅವನ ಹೆಸರನ್ನು ಕೂಗುತ್ತಿದ್ದ. ಆದರೂ ಎಲ್ಲೆ ಮೀರಿದ ನಂಬಿಕೆ ಹಾಗೂ ಅನಂತ ತಾಳ್ಮೆಯಿಂದ ಆತ ಪ್ರತಿ ದಿನ ಬಂದು ಬರಿಗೈಯಲ್ಲೇ ಹಿಂತಿರುಗುತ್ತಿದ್ದ.

ಆ ದಿನ ಆತ ತನ್ನ ಸ್ಥಳದಲ್ಲಿ ಕುಳಿತಿದ್ದ. ಆದರೆ ಅಂಚೆ ಕಚೇರಿಯ ಬಾಗಿಲು ತೆರೆದರೂ ಆತ ಕದಲಲಿಲ್ಲ.

"ಪೋಲೀಸ್ ಕಮೀಷನರ್" ಗುಮಾಸ್ತ ಕರೆದಾಗ ಒಬ್ಬ ಯುವಕ ಪತ್ರ ಪಡೆಯಲು ಚುರುಕಾಗಿ ಒಳನುಗ್ಗಿದ.

"ಸೂಪರಿಂಟೆಂಡೆಂಟ್" ಮತ್ತೊಬ್ಬ ಬಂದು ಪತ್ರವನ್ನು ಪಡೆದ.

ಪತ್ರಗಳ ಬಟವಡೆ ಮುಗಿದ ನಂತರ ಎಲ್ಲರೂ ಹೊರಟರು. ಅಲಿಯೂ ಎದ್ದು ಪೋಸ್ಟ್ ಆಫೀಸಿಗೆ ಸಲಾಂ ಮಾಡಿ ಹೊರಟ. ಏಕೆಂದರೆ ಅದರ ವಿಚಾರದಲ್ಲಿ ಒಂದು ಪವಿತ್ರ ಭಾವನೆ ನೆಲೆಸಿತ್ತು.

"ಆತ ಹುಚ್ಚನೇ?" ಪೋಸ್ಟ್‌ಮಾಸ್ಟರ್ ಕೇಳಿದರು.

"ಯಾರು? ಅಲಿಯೆ? ಹೌದು ಸಾರ್. ಯಾವುದೇ ಹವಾಮಾನವನ್ನೂ ಲೆಕ್ಕಿಸದೇ ಕಳೆದ ಐದು ವರ್ಷದಿಂದ ಇಲ್ಲಿಗೆ ಬರುತ್ತಿದ್ದಾನೆ. ಆದರೆ ಈ ವರೆಗೆ ಅವನಿಗೆ ಯಾವುದೇ ಪತ್ರವೂ ಬಂದಿಲ್ಲ. ಆತ ಹಿಂದೆ ಬಹಳ ಪಾಪ ಮಾಡಿದ್ದಾನೆ, ಪವಿತ್ರವಾದ ಎಲ್ಲೆಯಲ್ಲೇ ರಕ್ತ ಹರಿಸಿದ್ದಾನೆ. ಅದನ್ನೇ ಆತ ಅನುಭವಿಸುತ್ತಿದ್ದಾನೆ." ಗುಮಾಸ್ತ ಉತ್ತರಿಸಿದ.

"ಹುಚ್ಚರೆಲ್ಲಾ ವಿಚಿತ್ರ ಮನುಷ್ಯರು."

ಪೋಸ್ಟ್‌ಮಾಸ್ಟರ್ ಉದ್ಗರಿಸಿದರು. "ನಾನೊಬ್ಬ ಹುಚ್ಚನನ್ನು ನೋಡಿದ್ದೆ. ಆತ ದೂಳಿನಿಂದ ಗುಪ್ಪೆಗಳನ್ನು ಮಾಡುವುದನ್ನು ಬಿಟ್ಟು ಏನನ್ನೂ ಮಾಡುತ್ತಿರಲಿಲ್ಲ. ಮತ್ತೊಬ್ಬ ಪ್ರತಿ ದಿನ ನದಿ ದಡಕ್ಕೆ ಹೋಗಿ ಅಲ್ಲಿ ನಿರ್ದಿಷ್ಟವಾದ ಕಲ್ಲೊಂದನ್ನು ನೀರಿನಿಂದ ತೊಳೆಯುತ್ತಿದ್ದ." ಪೋಸ್ಟ್ ಮಾಸ್ಟರ್ ಮಾತನ್ನು ನಿಲ್ಲಿಸಿದರು.

"ಅದೇನು ಮಹಾ ದೊಡ್ಡ ವಿಶೇಷದ್ದಲ್ಲ. ನಾನು ಕಂಡಿದ್ದ ಒಬ್ಬ ಹುಚ್ಚ ಅತ್ತ ಇತ್ತ ಹಗಲಿಡೀ ನಡೆಯುತ್ತಾ, ತನ್ನ ಕಪಾಳಕ್ಕೆ ತಾನೇ ಹೊಡೆದುಕೊಂಡು ಹೋ ಎಂದು ಅಳುತ್ತಿದ್ದ" ಎಂದು ಒಬ್ಬ ಗುಮಾಸ್ತ ಹೇಳಿದ. ಹೀಗೆ ಪ್ರತಿಯೊಬ್ಬರು ತಾವು ಕಂಡ ಹುಚ್ಚರ ಬಗ್ಗೆ ಹೇಳತೊಡಗಿದರು. ಎಲ್ಲರೂ ಸೇರಿ ಒಂದೊಂದು ವಿಚಾರದ ಮೇಲೆ ಚರ್ಚಿಸುವುದು ಅವರ ದಿನಚರಿಯಲ್ಲೊಂದು ಅಂಗವಾಗಿತ್ತು.

ನಂತರ ಕೆಲವು ದಿನ ಆಲಿ ಅತ್ತ ಬರಲಿಲ್ಲ. ಆದರೆ ಯಾರಿಗೂ ಆತ ಬರದಿದ್ದರ ಬಗ್ಗೆ ಯೋಚನೆಯೇ ಇರಲಿಲ್ಲ. ಆದರೆ ಕಡೆಗೊಂದು ದಿನ ಆಲಿ ಅಂಚೆ ಕಚೇರಿಗೆ ಬಂದ. ಉಸಿರಾಡಲೂ ಕಷ್ಟವಾದ ಸ್ಥಿತಿಯಲ್ಲಿ ಆತನಿದ್ದ. ಆತನ ಕೊನೆಗಳಿಗೆ ಸಮೀಪಿಸಿದೆಯೆಂದು ಆತನ ಮುಖ ಭಾವ ವ್ಯಕ್ತಪಡಿಸುತ್ತಿತ್ತು.

"ಮಾಸ್ಟರ್ ಸಾಹೇಬ್ ನನ್ನ ಮಿರಿಯಂಳಿಂದ ಪತ್ರ ಬಂದಿದೆಯೆ?" ಆತ ಪೋಸ್ಟ್ ಮಾಸ್ಟರನ್ನು ಕೇಳಿದ.

ಪೋಸ್ಟ್‌ಮಾಸ್ಟರ್ ಬಹಳ ಯೋಚನೆಯಲ್ಲಿದ್ದದ್ದರಿಂದ ಸಿಡಿಮಿಡಿಗೊಂಡು ಹೇಳಿದರು, "ಎಂಥ



ಉಪದ್ರವ ನಿನ್ನದು ಮಹರಾಯ..."

"ನನ್ನ ಹೆಸರು ಆಲಿ" ಆತ ಯಾಂತ್ರಿಕವಾಗಿ ಉತ್ತರಿಸಿದ.

"ನನಗೆ ಗೊತ್ತಯ್ಯಾ. ನಾವೇನೂ ನಿನಗೆ ಬಂದ ಪತ್ರವನ್ನು ತಿನ್ನುತ್ತೇವೆ ಎಂದುಕೊಂಡಿದ್ದೀಯಾ? ಅಥವಾ ನಿನ್ನ ಮಿರಿಯಂ ಹೆಸರನ್ನೇನು ಇಲ್ಲಿ ನೊಂದಾಯಿಸಿದ್ದೀಯಾ?" ವ್ಯಂಗ್ಯವಾಗಿ ಪೋಸ್ಟ್‌ಮಾಸ್ಟರ್ ಹೇಳಿದರು.

"ಹಾಗಾದರೆ ನನ್ನ ಮಿರಿಯಂ ಹೆಸರನ್ನು ನೊಂದಾಯಿಸಿಕೊಂಡು ಬಿಡಿ. ಅವಳಿಂದ ಪತ್ರ ಬಂದಾಗ ನನಗೆ ತಲಪಿಸಲು ಅನುಕೂಲ ವಾದೀತು," ಆಲಿ ಮುಗ್ಧ ಸ್ವಭಾವದಿಂದ ಉತ್ತರಿಸಿದ. ಅವನಿಗೆಲ್ಲಿ ತಿಳಿಯಬೇಕು ಪೋಸ್ಟ್ ಮಾಸ್ಟರ್‌ರ ವ್ಯಂಗ್ಯೋಕ್ತಿಗಳು.

"ತೊಲಗಾಚೆ. ತಲೆ ಸರಿ ಇದೆಯಾ ನಿನಗೆ?" ಎಂದು ಕಿರುಚುತ್ತಾ ಪೋಸ್ಟ್‌ಮಾಸ್ಟರ್ ಹೊರ ನಡೆದರು.

ಆಲಿ ನಿಧಾನವಾಗಿ ಅಲ್ಲಿಂದ ಎದ್ದು ಹೊರಟ. ಕೆಲವು ಹೆಜ್ಜೆಯನ್ನಿಟ್ಟು ಪುನಃ ಹಿಂತಿರುಗಿ ಅಂಚೆ ಕಚೇರಿಯತ್ತ ದಿಟ್ಟಿಸಿ ನೋಡಿದ. ಆತನ ಕಣ್ಣಿ ನಲ್ಲಿ ಅಸಹಾಯಕತೆ ಹಾಗೂ ದುಗುಡದಿಂದ ಕಂಬನಿ ಪ್ರವಹಿಸುತ್ತಿತ್ತು.

ಅವನ ಹಿಂದೆ ಒಬ್ಬ ಗುಮಾಸ್ತ ಬರು ತ್ತಿರುವುದನ್ನು ಆಲಿ ಕಂಡ.

"ತಮ್ಮಾ" ಎಂದು ಆಲಿ ಕರೆದ. ಆಶ್ಚರ್ಯ ಚಕಿತನಾದ ಗುಮಾಸ್ತ ತಿರುಗಿ ನೋಡಿದ.

"ಇಲ್ಲಿ ನೋಡು," ಆಲಿ ಒಂದು ತಗಡಿನ ಡಬ್ಬಿ ಯನ್ನು ತೆಗೆದು ಅದರಲ್ಲಿದ್ದ ಐದು ಗಿನಿಗಳನ್ನು ತೆಗೆದು ಆ ಗುಮಾಸ್ತನ ಕೈಯಲ್ಲಿಟ್ಟು ಹೇಳಿದ, "ಸಂಕೋಚ ಬೇಡ. ಇವುಗಳಿಂದ ನಿನಗೆ ಉಪಯೋಗವಾಗಬಹುದು. ನನಗೆ ಇನ್ನೆಂದೂ ಇವು ಉಪಯೋಗಕ್ಕೆ ಬರಲಾರವು. ಆದರೆ ಒಂದು ಕೆಲಸವನ್ನು ನನಗಾಗಿ ಮಾಡುತ್ತೀಯಾ?"

"ಏನು?" ಗುಮಾಸ್ತ ಕೇಳಿದ.

ಆಲಿ ಆಕಾಶದತ್ತ ಕೈ ಮಾಡಿ ತೋರಿಸುತ್ತಾ ಕೇಳಿದ, "ಅಲ್ಲಿ ನಿನಗೇನು ಕಾಣಿಸುತ್ತದೆ?"

"ಸ್ವರ್ಗ" ಗುಮಾಸ್ತ ಉತ್ತರಿಸಿದ.

"ಮೇಲಿರುವ ಅಲ್ಲಾನ ಸಮ್ಮುಖದಲ್ಲಿ ನಿನಗೆ ಈ ಹಣವನ್ನು ನೀಡುತ್ತಿದ್ದೇನೆ. ನನ್ನ ಮಗಳು ಮಿರಿಯಂಳಿಂದ ಪತ್ರ ಬಂದರೆ ನೀನು ಅದನ್ನು ನನಗೆ ತಲಪಿಸುತ್ತೀಯಾ?" ಆಲಿ ಯಾಚಿಸಿದ.

"ಆದರೆ! ನಾನು ಅದನ್ನು ಎಲ್ಲಿಗೆ ತಲಪಿಸ ಬೇಕು?" ದಿಗ್ಭ್ರಮೆಗೊಂಡ ಗುಮಾಸ್ತ ಕೇಳಿದ.

"ನನ್ನ ಗೋರಿಗೆ."

"ಏನು!"

"ಹೌದು, ಇಂದೇ ನನ್ನ ಕಡೆಯ ದಿನ, ಕಟ್ಟ ಕಡೆಯ ದಿನ. ನಾನು ಮಿರಿಯಂಳನ್ನು ಕಾಣಲಿಲ್ಲ. ಅವಳಿಂದ ಪತ್ರವನ್ನೂ ಪಡೆಯಲಿಲ್ಲ" ದುಃಖ ಕಟ್ಟೆಯೊಡೆದು ಕಣ್ಣೀರು ಸುರಿಸುತ್ತಾ ಆಲಿ ನಿಧಾನವಾಗಿ ಹೇಳಿದ.

ಆದರೆ ಆ ಗುಮಾಸ್ತನಾಗಲೇ ಆಲಿ ಕೊಟ್ಟ ಚಿನ್ನದ ನಾಣ್ಯಗಳನ್ನು ಕಿಸೆಯಲ್ಲಿರಿಸಿ ಅಲ್ಲಿಂದ ಕಾಲ್ಕಿತ್ತಿದ್ದ.

ಆಲಿ ನಂತರ ಯಾರಿಗೂ ಕಾಣಲಿಲ್ಲ. ಯಾರೂ ಆತನನ್ನು ವಿಚಾರಿಸುವ ಗೋಜಿಗೂ ಹೋಗಲಿಲ್ಲ.

*

ಹೀಗಿರುವಾಗ ಪೋಸ್ಟ್‌ಮಾಸ್ಟರಿಗೂ ಒಂದು ತಾಪತ್ರಯ ಶುರುವಾಗಿತ್ತು. ಅವರ ಮಗ- ಳೊಬ್ಬಳು ಕಾಯಿಲೆಯಿಂದ ಹತ್ತಿರದ ಪಟ್ಟಣ ದಲ್ಲಿ ದವಾಖಾನೆಗೆ ದಾಖಲಾಗಿದ್ದಳು. ಬಹಳ ಕಾತರನಾಗಿ ಅವಳ ಬಗ್ಗೆ ವರ್ತಮಾನಕ್ಕಾಗಿ ಆತ ಪರಿತಪಿಸುತ್ತಿದ್ದ. ಅಂಚೆಯ ಚಾಂಗಿ ಬಂದು ಮೇಜಿನ ಮೇಲೆ ಪತ್ರಗಳನ್ನೆಲ್ಲಾ ಹರಡಿದ. ಅವರು ನಿರೀಕ್ಷಿಸಿದ್ದ ಬಣ್ಣದ ಲಕೋಟೆಯನ್ನು ಕಂಡವರೇ ಸರ್ರನೆ ನೆಗೆದು ಕೈಗೆತ್ತಿಕೊಂಡು ನೋಡಿದಾಗ, ವಿಳಾಸ ಆಲಿಯದಾಗಿತ್ತು. 'ಕೋಚ್‌ಮನ್ ಆಲಿ' ಎಂದು ಓದುತ್ತಿದ್ದಂತೆ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ದುಃಖ ಹಾಗೂ ವ್ಯಾಕುಲತೆಯಿಂದ ಗರ್ವ

ಇಳಿದಿತ್ತು. ಅವರ ಮನಃಪಟಲದಲ್ಲಿ ದಿನಾಲೂ ಕಾಯುತ್ತಿದ್ದ ಮುದುಕನ ಚಿತ್ರ ನಿಧಾನವಾಗಿ ಸುಳಿದಾಡತೊಡಗಿತು.

"ಲಕ್ಷ್ಮೀದಾಸ್, ಇದು ಆಲಿಗೆ ಬಂದ ಪತ್ರ. ಆತ ಈಗೆಲ್ಲಿದ್ದಾನೆ?" ಪೋಸ್ಟ್‌ಮಾಸ್ಟರ್ ಕೇಳಿದರು.

"ನಾನು ಕೇಳಿ ತಿಳಿಯುತ್ತೇನೆ." ಎಂದು ಹೇಳಿ ಆತ ಸುಮ್ಮನಾದ.

ಪೋಸ್ಟ್ ಮಾಸ್ಟರ್ ಚಿಂತೆಯಿಂದ ಇಡಿ ದಿನವನ್ನೇ ಕಳೆದರು. ಯಾವುದೇ ಸಮಾಚಾರವೂ ಮಗಳ ವಿಷಯವಾಗಿ ತಿಳಿಯದೇ ಪರಿತಪಿಸಿದರು. ರಾತ್ರಿಯಿಡೀ ನಿದ್ರೆ ಬರದೇ ಚಡಪಡಿಸಿದರು. ಮುಂಜಾನೆ ಮೂರು ಗಂಟೆಗಾಗಲೇ ಆಫೀಸಿನಲ್ಲಿ ಹೋಗಿ ಕುಳಿತುಕೊಂಡರು. ಆಲಿ ನಾಲ್ಕು ಗಂಟೆಗೆ ಬಂದ ಕೂಡಲೇ ತಾನೇ ಆ ಪತ್ರವನ್ನು ಆತನಿಗೆ ನೀಡಬೇಕೆಂದುಕೊಂಡರು.

ಐದು ಗಂಟೆ ಹೊಡೆದ ಕೊಡಲೇ ಬಾಗಿಲು ತಟ್ಟಿದ ಶಬ್ದ ಕೇಳಿ ಆಲಿಯೇ ಬಂದಿರಬಹುದೆಂದು ಆಶಿಸಿ, ತಕ್ಷಣ ಕುರ್ಚಿಯಿಂದ ಎದ್ದು ಬಂದು ಬಾಗಿಲನ್ನು ತೆರೆದರು. ಬಳಲಿದ ಪಿತೃ ಹೃದಯ ಬೇರೆಯವರ ಖಿನ್ನತೆಯನ್ನು ಅರಿತಿತ್ತು.

"ಅಣ್ಣಾ, ಆಲಿ ಬಾ" ವಿನಯಪೂರ್ವಕವಾಗಿ ಪತ್ರವನ್ನು ಹಸ್ತಾಂತರಿಸುತ್ತಾ ಅವರು ಹೇಳಿದರು.

ಪೋಸ್ಟ್‌ಮಾಸ್ಟರ್ ನೋಡಿದಾಗ ಆಲಿ ಊರುಗೋಲಿಗೆ ಒರಗಿ ನಿಂತಿದ್ದ! ಆತನ ಮುಖ ಕಣ್ಣೀರಿನಿಂದ ತೋಯ್ದಿತ್ತು! ಆದರೆ ಆತನ ಮುಖದ ಭಾವ ಧನ್ಯತೆಯಿಂದ ಕೂಡಿತ್ತು. ಪೋಸ್ಟ್‌ಮಾಸ್ಟರ್ ಕಣ್ಣೆತ್ತಿ ನೋಡಿದಾಗ ವಿಚಿತ್ರ ಬೆಳಕೊಂದು ಜಗ್ಗನೆ ಮಿಂಚಿದಂತಾಯಿತು. ಆಶ್ಚರ್ಯ ಹಾಗೂ ಭಯದಿಂದ ಗರಬಡಿದವರಂತೆ ಆತ ಕಚೇರಿಯ ಒಳನಡೆದರು.

ಗುಮಾಸ್ತ ಲಕ್ಷ್ಮೀದಾಸ ಪೋಸ್ಟ್‌ಮಾಸ್ಟರ್ ಧ್ವನಿ ಕೇಳಿ ಮತ್ತೊಂದು ಪಾರ್ಶ್ವದಿಂದ ಆಫೀಸಿಗೆ ಬಂದ. "ಯಾರು ಸಾರ್ ಆಲಿಯೆ?" ಆತ ಕೇಳಿದ. ಪೋಸ್ಟ್ ಮಾಸ್ಟರ್ ಇದಾವುದನ್ನೂ ಗಮನಿಸದೇ ಎವೆಯಿಕ್ಕದೇ ಆಲಿ ಮಾಯವಾದ ದಿಕ್ಕನ್ನೇ ನೋಡುತ್ತಿದ್ದರು.

"ಹೌದು, ನಾನು ಆಲಿಯೊಂದಿಗೆ ಮಾತನಾಡುತ್ತಿದ್ದೆ." ಸ್ವಲ್ಪ ಸಮಯದ ನಂತರ ಅವರು ಗುಮಾಸ್ತ ಲಕ್ಷ್ಮೀದಾಸನಿಗೆ ಹೇಳಿದರು.

"ಆಲಿ ತೀರಿಕೊಂಡಿದ್ದಾನಂತೆ ಸಾರ್, ಆ ಪತ್ರವನ್ನು ನನಗೆ ಕೊಡಿ." ಗುಮಾಸ್ತ ಲಕ್ಷ್ಮೀದಾಸ ಉತ್ತರಿಸಿದ.

"ಏನು?! ಯಾವಾಗ?! ನಿನಗೆ ಖಚಿತವಾಗಿ ಗೊತ್ತೇ ಲಕ್ಷ್ಮೀದಾಸ್?"

"ಹೌದು. ಆಲಿ ಸತ್ತು ಮೂರು ತಿಂಗಳಾಯಿತಂತೆ."

ಪೋಸ್ಟ್‌ಮಾಸ್ಟರ್ ದಿಗ್ಭ್ರಮೆಗೊಂಡರು. ಮರಿಯಂಳಿಂದ ಬಂದ ಪತ್ರ ಬಾಗಿಲಲ್ಲಿ ಬಿದ್ದಿತ್ತು. ಆಲಿ ಅವರ ಕಣ್ಣುಗಳಲ್ಲಿ ಪ್ರತಿಬಿಂಬಿಸುತ್ತಿದ್ದ. ಆಲಿ ಹಾಗೂ ಗುಮಾಸ್ತ ಲಕ್ಷ್ಮೀದಾಸರ ಕಡೆಯ ಭೇಟಿಯ ಬಗ್ಗೆ ಕೇಳಿದ ಮೇಲೂ ಅವರಿಗೆ ಆಲಿಯನ್ನು ಕಂಡ ಬಗ್ಗೆ ಅನುಮಾನವಿರಲಿಲ್ಲ. ದಿಗ್ಭ್ರಮೆಗೊಂಡ ಅವರು ಯೋಚಿಸಲಾರಂಭಿಸಿದರು. "ನಾನು ನಿಜವಾಗಿಯೂ ಆಲಿಯನ್ನು ಕಂಡೆನೇ? ಅಥವಾ ಆತನ ಬಗ್ಗೆ ಇರುವ ಕಲ್ಪನೆ ನನ್ನನ್ನು ಮೋಸಗೊಳಿಸಿತೆ?" ಹೊಸದಾಗಿ ಅನುಭವಕ್ಕೆ ಬಂದ ಪಿತೃಹೃದಯದ ತುಮುಲ ಆಲಿಯ ಮನದಾಳವನ್ನು ಅರಿಯದ ತಪ್ಪಿಗೆ ದೋಷಿಯೆಂದು ಅವರನ್ನು ಕರೆದಂತಾಯಿತು.

ಅಂದು ಸಂಜೆ ಗುಮಾಸ್ತ ಲಕ್ಷ್ಮೀದಾಸ ಹಾಗೂ ಪೋಸ್ಟ್‌ಮಾಸ್ಟರ್ ಇಬ್ಬರೂ ಆಲಿಯ ಗೋರಿಯಿದ್ದಲ್ಲಿಗೆ ಹೋಗಿ ಮರಿಯಂಳಿಂದ ಬಂದ ಆ ಪತ್ರವನ್ನು ಅಲ್ಲಿಟ್ಟು ಬಂದರು. ✡

# ಉಬ್ಬಸ ರೋಗ
## ಪರಿಹಾರ ಹಾಗೂ ನಿಯಂತ್ರಣ ಸಾಧ್ಯವೆ?

-ಡಾ. ಎಚ್. ಮಹಾದೇವಪ್ಪ

ನಾಯಕ ಬೆಂಗಳೂರಿನ ಆಫೀಸೊಂದರಲ್ಲಿ ಗುಮಾಸ್ತ. ಅನೇಕ ವರ್ಷ ಮಂಗಳೂರಿನಲ್ಲಿದ್ದು ಮೊನ್ನೆ ತಾನೇ ಬೆಂಗಳೂರಿಗೆ ವರ್ಗಾವಣೆ ಮಾಡಿಸಿಕೊಂಡು ಬಂದಿದ್ದಾನೆ. ಅವನ ಹೆಂಡತಿ ಮೇರಿ ಬೆಂಗಳೂರಿನ ಫ್ಯಾಕ್ಟರಿಯೊಂದರಲ್ಲಿ ಕೆಲಸ ಮಾಡುತ್ತಿದ್ದಾಳೆ. ಬಂದ ನಂತರ, ತನ್ನಷ್ಟು ಸುಖಿ ಯಾರೂ ಇಲ್ಲವೆಂದು ಭಾವಿಸಿದ್ದ ನಾಯಕನಿಗೆ ಭ್ರಮನಿರಸನವಾಗಿದೆ. ವಾತಾವರಣ ಬದಲಾಗಿದ್ದರಿಂದಲೋ ವಂಶಪಾರಂಪರ್ಯವಾಗಿ ಬಂದಿದ್ದರಿಂದಲೋ ಈಗ ಅವನ ಶಾರೀರಿಕ ಸ್ಥಿತಿ ಹದಗೆಟ್ಟಿದೆ.

ಕೆಲವು ರಾತ್ರಿಗಳಲ್ಲಂತೂ ನಾಯಕನಿಗೆ ಉಸಿರಾಡುವುದೇ ಕಷ್ಟವೆನಿಸುತ್ತಿತ್ತು. ಕೆಲವು ದಿನಗಳ ಹಿಂದೆ ಅವನಿಗೆ ನೆಗಡಿ ತಲೆನೋವು ಶುರುವಾಯಿತು. ಸೀನುಗಳು ಬರುವುದೂ ಹೆಚ್ಚಾಗತೊಡಗಿತು. ಏನೋ ಫ್ಲೂ ತರಹ ಇರಬೇಕು ಎಂದುಕೊಂಡ. ಕಾಯಿಲೆ ಕಡಿಮೆಯಾದರೂ ಮತ್ತೆ ಕೆಲವು ದಿವಸಗಳಲ್ಲಿ ಕಾಯಿಲೆಯು ಮೊದಲಿಗಿಂತಲೂ ತೀವ್ರವಾಯಿತು. ತಲೆನೋವು ನಿಲ್ಲಲಿಲ್ಲ. ನೆಗಡಿಯೂ ಹೆಚ್ಚಾಗತೊಡಗಿತು. ಸೀನುವುದಂತೂ ಅವನಿಗೆ ತುಂಬ ಉಪದ್ರವವನ್ನು ಕೊಡುತ್ತಿತ್ತು. "ಈ ಹಾಳು ಮೂಗನ್ನು ಕತ್ತರಿಸಿಬಿಡಲೇ" ಎನ್ನುವಷ್ಟು ಕೋಪ ಬಂದದ್ದೂ ನಿಜ. ಆಫೀಸಿನಲ್ಲಿ ಸೀತರೆ, ಸಹೋದ್ಯೋಗಿಗಳು ಮುಖ ಸಿಂಡರಿಸಿಕೊಳ್ಳುತ್ತಿದ್ದುದು ಅವನಿಗೆ ನೋವಾಗುತ್ತಿತ್ತು. ಮೊದಮೊದಲು ಇವನ ಕಾಯಿಲೆಗೆ ಮರುಕ ಪಟ್ಟವರೂ ಹತ್ತಿರದ ಸಂಪರ್ಕವಿದ್ದರೆ, ಈ ತರದ ಕಾಯಿಲೆ ಎಲ್ಲಿ ತಮಗೂ ಬಂದು ಬಿಡುತ್ತದೆಯೋ ಎಂದು ದೂರವಿರತೊಡಗಿದರು. ಪಕ್ಕದಲ್ಲಿಯೇ ಇರುವ ಜನರಲ್ ಪ್ರ್ಯಾಕ್ಟೀಶನರ್ ಹತ್ತಿರ ಹೋಗಿ ತೋರಿಸಿದ. ಕಾಯಿಲೆ ಕೆಲ ಕಾಲದ ಮಟ್ಟಿಗೆ ಕಡಿಮೆಯಾದರೂ ಮತ್ತೆ ಮರುಕಳಿಸಿತು.

ಆಗಾಗ್ಗೆ ಮೂಗು ಕಟ್ಟಿಕೊಳ್ಳುವುದು, ಅವನಿಗೆ ಸ್ವಲ್ಪ ಅಭ್ಯಾಸವಾಗಿತ್ತಾದರೂ ಪೂರ್ತಿಯಾಗಿ ಏದುಸಿರು ಬಿಡಬೇಕಾದ ಸನ್ನಿವೇಶ ಒದಗಿರಲಿಲ್ಲ. ಒಂದು ರಾತ್ರಿ ಮಾತ್ರ ತೀವ್ರ ಸ್ಥಿತಿಯುಂಟಾಯಿತು. ಉಸಿರಾಡಲೂ ಕಷ್ಟವೆನಿಸಿತು. ಬಾಯಿಯನ್ನು ತೆರೆದು ಉಸಿ-

ರಾಡಲು ಪ್ರಾರಂಭಿಸಿದ. ಊಹುಂ, ಕಡಿಮೆಯಾಗಲಿಲ್ಲ. ಬೆಡ್‌ರೂಮಿನ ಕಿಡಕಿಗಳನ್ನೆಲ್ಲಾ ತೆರೆದ. ಮಲಗಿಕೊಳ್ಳಲೂ ಅಸಾಧ್ಯವೆನಿಸಿತು. ಎದ್ದು ಕುಳಿತ. ಇನ್ನೂ ಸಾಕಷ್ಟು ಗಾಳಿ ಬೇಕು ಎನ್ನಿಸಿತು. ಮೇರಿಯೂ ಎದ್ದು ಕುಳಿತಳು. ಗಂಡನ ಸ್ಥಿತಿಯನ್ನು ಕಂಡು ಗಾಬರಿಯಾದಳು. ಅವಳಿಗೆ ಗಂಡ ಯಾವುದೋ ರೀತಿಯ ಕೆಮ್ಮು ಗೂರಲು ರೋಗದಿಂದ ಬಳಲುತ್ತಿದ್ದಾನೆ ಎನ್ನುವುದಷ್ಟೇ ಗೊತ್ತಾಯಿತು. ನಾಯಕನಿಗೆ ಆಗ ತನ್ನ ಅಜ್ಜಿ ಆಗಾಗ್ಗೆ ಕೆಮ್ಮು, ಉಬ್ಬಸದಿಂದ ಬಳಲುತ್ತಿದ್ದುದು ನೆನಪಿಗೆ ಬಂತು. ಅಜ್ಜಿ ಅದೆಷ್ಟು ಕಷ್ಟಪಡುತ್ತಿದ್ದಳು! ಆದರೆ ತೊಂದರೆ ತಿಂಗಳುಗಳ ಕಾಲ ಮಾತ್ರ. ಆಮೇಲೆ ಎಲ್ಲರಂತೆಯೇ ಇರುತ್ತಿದ್ದಳು. ಈಗ ತನಗೂ ಆ ತರದ ಕಾಯಿಲೆಯೇನಾದರೂ ಬಂದಿದೆಯೇ? ಉಸಿರಾಡಲು ಕಷ್ಟವಾಗುತ್ತಿದೆ. ಹಾಸಿಗೆಯಲ್ಲಿ ಮಲಗಿಕೊಳ್ಳಲೂ ಆಗುತ್ತಿಲ್ಲ. ಹಾಸಿಗೆಯ ಮೇಲೆ ಕೂತರೆ ತೊಂದರೆ ಕಡಿಮೆಯಾಗುತ್ತಿತ್ತು. ಮಧ್ಯರಾತ್ರಿಯಲ್ಲಿ ಆಟೋರಿಕ್ಷಾ ಹಿಡಿದುಕೊಂಡು ತನ್ನ ಫ್ಯಾಮಿಲಿ ಡಾಕ್ಟರರಲ್ಲಿ ಹೋಗಿ ತೋರಿಸಿದ.

ಡಾಕ್ಟರರ ಮನೆ (ಆಸ್ಪತ್ರೆ) ನಾಯಕನ ಮನೆಯಿಂದ ಸುಮಾರು ಎರಡು ಮೈಲಿ ಅಂತರದಲ್ಲಿತ್ತು. ಡಾಕ್ಟರರು ನಾಯಕನನ್ನು ಪರೀಕ್ಷಿಸಿ ತಕ್ಷಣ ಕಾಯಿಲೆಯ ಲಕ್ಷಣಗಳನ್ನು ನಿವಾರಿಸಲು ಚುಚ್ಚುಮದ್ದನ್ನು ಕೊಟ್ಟರು. ಉಬ್ಬಸ ತಕ್ಷಣವೇ ನಿಂತಿತು. ನಾಯಕ ಯಾವುದೇ ತೊಂದರೆಯಿಲ್ಲದೆ ಕ್ಲಿನಿಕ್ಕಿನ ಕುರ್ಚಿಯೊಂದರಲ್ಲಿ ಕುಳಿತ. "ನಿಮಗೆ ಅಸ್ತಮಾ ಕಾಯಿಲೆಯಿದೆ, ಅದಕ್ಕೆ ಸೂಕ್ತ ನಿಯಂತ್ರಣವನ್ನು ಮಾಡಲು ಸಾಧ್ಯ. ಆದರೆ ಪೂರ್ತಿಯಾಗಿ ವಾಸಿಯಾಗುವುದು ಕಷ್ಟ"ವೆಂದರು ಡಾಕ್ಟರ್.

## ಮುಖ್ಯ ಲಕ್ಷಣಗಳೇನು ?

ಉಬ್ಬಸ ರೋಗವು (ಅಸ್ತಮಾ) ವಾತಾವರಣದಲ್ಲಿನ ಅನೇಕ ವಸ್ತುಗಳಿಗೆ ಶೀಘ್ರ ಪ್ರತಿಕ್ರಿಯೆಯನ್ನು (ಅಲರ್ಜಿ) ತೋರುವುದರಿಂದ ಬರುತ್ತದೆ. ಇದರಲ್ಲಿ ಮುಖ್ಯವಾದದ್ದು ಶ್ವಾಸನಾಳದ ಕಾರ್ಯಸಾಮರ್ಥ್ಯ. ಈ ಕಾಯಿಲೆಯಾದಾಗ ಶ್ವಾಸನಾಳದ ಮೇಲ್ಪರೆಯು ಊದಿಕೊಳ್ಳುತ್ತದೆ. ಸ್ವಲ್ಪ ಹೊತ್ತಿನ ನಂತರ ಶ್ವಾಸನಾಳದ ಸುತ್ತಲಿನ ಮಾಂಸಖಂಡಗಳು ಸಂಕುಚಿತಗೊಂಡು ನಂತರ ನಾಳದಲ್ಲಿ ಲೋಳೆಯಂತಹ ದ್ರವವು ಸ್ರವಿಸುವಂತೆ ಮಾಡುತ್ತವೆ. ಇದಕ್ಕೆ ತಕ್ಷಣ ಸೂಕ್ತ ಚಿಕಿತ್ಸೆಯು ದೊರೆಯದೆ ಇದ್ದರೆ ಲೋಳೆಯಂತಹ ದ್ರವವು ಗಟ್ಟಿಯಾಗಿ ನಂತರ ಉಸಿರಾಟಕ್ಕೆ ತೊಂದರೆಯನ್ನುಂಟುಮಾಡಬಹುದು. ಉಬ್ಬಸ ರೋಗದಲ್ಲಿ ಎರಡು ವಿಧಗಳಿವೆ. ಅವರಲ್ಲಿ ಒಂದು ಹೊರಗಣ ಸ್ಥಿತಿಯಿಂದ ಉಂಟಾಗುವ ಉಬ್ಬಸ ರೋಗ. ಇಲ್ಲಿ ಶ್ವಾಸನಾಳದ ಮೇಲ್ಪರೆಯು ವಾತಾವರಣದಲ್ಲಿ ಕಂಡುಬರುವ ಅನೇಕ ವಸ್ತುಗಳಿಗೆ ಶೀಘ್ರ ಪ್ರತಿಕ್ರಿಯೆಯನ್ನು ತೋರುತ್ತದೆ. ಈ ಸ್ಥಿತಿಯಲ್ಲಿ 'ಈ' ಇಮ್ಯುನೋಗ್ಲಾಬುಲಿನ್‌ನ ಪ್ರಮಾಣ ಹೆಚ್ಚಾಗಿರುತ್ತದೆ. ಈ ತರಹ ಪ್ರತಿಕ್ರಿಯೆಯನ್ನುಂಟುಮಾಡುವ ವಸ್ತುಗಳು ವ್ಯಕ್ತಿಯ ದೇಹದೊಳಗಡೆ ಗಾಳಿಯೊಡನೆ ಮಿಶ್ರವಾಗಿ ಹೋಗುತ್ತವೆ. ಇನ್ನೊಂದು ವಿಧವಾದ ಒಳಗಿನ ಸ್ಥಿತಿಯಿಂದುಂಟಾಗುವ ಉಬ್ಬಸ ರೋಗಕ್ಕೆ ಹೊರಗಿನ ವಾತಾವರಣದಲ್ಲಿನ ವಸ್ತುಗಳ ಅವಶ್ಯಕತೆಯೇನೂ ಇಲ್ಲ. ದೇಹದ ಒಳಗೆ ಸೋಂಕು ತಗುಲಿದರೂ ಈ ಕಾಯಿಲೆಯುಂಟಾಗಬಹುದು. ಅಥವಾ ಕೆಲವು ವ್ಯಕ್ತಿಗಳಿಗೆ ಶುದ್ಧವಾದ, ಆದರೆ ತಣ್ಣನೆಯ ಗಾಳಿಯನ್ನು ಸೇವಿಸಿದರೂ ಸಾಕು, ಶೀಘ್ರವೇ ಉಬ್ಬಸ ರೋಗವು ಪ್ರಾರಂಭವಾಗಿ ರೋಗಿಗೆ ಅತಿ ಯಾತನೆಯನ್ನುಂಟುಮಾಡಬಹುದು. ಇನ್ನು ಕೆಲವು ರೋಗಿಗಳಿಗೆ ಸ್ವಲ್ಪ ವ್ಯಾಯಾಮ ಮಾಡಿದರೂ ಸಾಕು, ಇಲ್ಲವೆ ಸ್ವಲ್ಪ ಓಡಾಡಿದರೂ ಸಾಕು, ಈ ರೋಗವು ಹೆಚ್ಚಾಗಿ, ಉಸಿರಾಡಲೂ ಕಷ್ಟವಾಗುತ್ತದೆ. ಇನ್ನು ಕೆಲವು ರೋಗಿಗಳಲ್ಲಿ

ಮನೆಯಲ್ಲಿ ಜಗಳ, ಇಲ್ಲವೆ ಆಫೀಸಿನಲ್ಲಿ ಬಸ್ಸಿನಲ್ಲಿ ವ್ಯಾಗ್ಯುದ್ಧ, ಇಲ್ಲವೆ ಪಕ್ಕದ ಮನೆಯವರೊಡನೆ ಕಲಹ—ಈ ತರಹದ ಅನೇಕ ಸ್ಥಿತಿಗಳಿಂದಲೂ ಮಾನಸಿಕ ಕ್ಲೇಶವು ಹೆಚ್ಚಾಗಿ ಉಬ್ಬಸ ಶುರುವಾಗಬಹುದು. ಆದರೆ ಈ ವಿಧದ ಉಬ್ಬಸ ರೋಗದಲ್ಲಿ 'ಈ' ಇಮ್ಮ್ಯುನೋಗ್ಲಾಬುಲಿನ್‌ನ ಪ್ರಮಾಣವು ಸಾಧಾರಣ ಮಟ್ಟದಲ್ಲಿರುತ್ತದೆ.

ಕೆಲವರಿಗೆ ಕಟ್ಟಿಗೆಯನ್ನು ಸೀಳುತ್ತಿರುವಾಗ ಉಂಟಾಗುವ ಧೂಳಿನಿಂದ ಉಬ್ಬಸವು ಹೆಚ್ಚಾಗುತ್ತಿದ್ದರೆ, ಇನ್ನು ಕೆಲವರಿಗೆ ಫ್ಯಾಕ್ಟರಿಯಲ್ಲಿ ಉಪಯೋಗಿಸುವ ಅನೇಕ ರಸಾಯನಿಕ ವಸ್ತುಗಳು ಉಬ್ಬಸ ರೋಗವನ್ನು ಹೆಚ್ಚು ಮಾಡುತ್ತವೆ. ಲೋಹವನ್ನು ಉಪಯೋಗಿಸುವ ಕೆಲಸಗಾರರೂ ಈ ತೊಂದರೆಗೊಳಗಾಗಿ ಕಷ್ಟವನ್ನು ಅನುಭವಿಸಬಹುದು. ಆದ್ದರಿಂದ ಈ ತರಹದ ಉದ್ಯೋಗಗಳಲ್ಲಿ ಇರುವ ಕಾರ್ಮಿಕರು ತಮ್ಮ ಆರೋಗ್ಯದ ಬಗ್ಗೆ ಕಾಳಜಿಯಿಂದ ಆಗಾಗ್ಗೆ ಡಾಕ್ಟರ ಹತ್ತಿರ ಪರೀಕ್ಷೆ ಮಾಡಿಸುತ್ತಿರಬೇಕು. ರಕ್ತದ ಒತ್ತಡಕ್ಕೆ ಉಪಯೋಗಿಸುವ ಕೆಲವು ಮಾತ್ರೆಗಳೂ (ಉದಾಹರಣೆಗೆ: ಪ್ರೊಪ್ರನಲಾಲ್) ಶ್ವಾಸನಾಳವನ್ನು ಸಂಕುಚಿತಗೊಳಿಸಿ, ಉಬ್ಬಸವನ್ನುಂಟುಮಾಡಬಹುದು. ಇನ್ನು ಕೆಲವು ರೋಗಿಗಳಲ್ಲಿ ಆಸ್ಪಿರಿನ್ನಿನಂತಹ ಮಾತ್ರೆಗಳೂ ಉಬ್ಬಸವನ್ನು ಹೆಚ್ಚಿಸಬಹುದು. ಆದ್ದರಿಂದ ಈ ತರಹದ ಕಾಯಿಲೆಯಿಂದ ಬಳಲುತ್ತಿರುವವರು (ಕಫ, ಕೆಮ್ಮು, ಉಬ್ಬಸ, ಮುಂತಾದ ಲಕ್ಷಣಗಳಿರುವ ರೋಗಿಗಳು) ಡಾಕ್ಟರ ಸಲಹೆಯಿಲ್ಲದೆ ಸ್ವಯಂಚಿಕಿತ್ಸೆಯನ್ನು ಮಾಡಿಕೊಳ್ಳುವದು ಸರಿಯಲ್ಲ.

ಅಸ್ತಮಾ ಕಾಯಿಲೆಯಲ್ಲಿ ರೋಗಿಗೆ ಆಗಾಗ್ಗೆ ಉಬ್ಬಸದಿಂದ ಉಸಿರಾಡಲು ಕಷ್ಟವಾಗತೊಡಗುತ್ತದೆ. ಮೊದಲಿಗೆ ಒಣ ಕೆಮ್ಮು ಶುರುವಾಗುತ್ತದೆ. ಕಾಲ ಕಳೆದಂತೆ ಕೆಮ್ಮಿನೊಡನೆ ಆಗಾಗ್ಗೆ ಲೋಳೆಯಂತಹ ದ್ರವವನ್ನು ಹೊಂದಿದ ಕಫವೂ ಬರತೊಡಗುತ್ತದೆ: ಆಗ ಶ್ವಾಸಕೋಶದಲ್ಲಿ ಸೂಕ್ಷ್ಮಾಣುಜೀವಿಗಳಿಂದ ಸೋಂಕು ತಗಲಿದೆ ಎಂದು ತಿಳಿದುಕೊಳ್ಳಬಹುದು. ಕೆಲವು ರೋಗಿಗಳಲ್ಲಿ ಈ ಕಾಯಿಲೆಯ ತೀವ್ರತೆಯು ಅಲ್ಪ ಮಟ್ಟದಲ್ಲಿದ್ದರೆ ಇನ್ನು ಕೆಲವರಲ್ಲಿ ಈ ಸೋಂಕು ತೊಂದರೆಯು ಕೆಲವು ಸಲ ಪ್ರಾಣಾಂತಕವಾಗಬಹುದು. ಹೊರಗಣ ಸ್ಥಿತಿಯಿಂದ ಉಂಟಾಗುವ ಉಬ್ಬಸ ರೋಗದಲ್ಲಿ ಸಾಮಾನ್ಯವಾಗಿ ಕಾಯಿಲೆಯು ಚಿಕ್ಕಮಕ್ಕಳಲ್ಲಿ ಕಂಡುಬರುತ್ತದೆ. ಮಗುವು ದೊಡ್ಡದಾಗುತ್ತ ಬಂದಂತೆ ಕಾಯಿಲೆಯೂ ತೀವ್ರವಾಗುತ್ತ ಹೋಗಬಹುದು. ಆದರೆ ಕೆಲವು ರೋಗಿಗಳಲ್ಲಿ ಈ ಕಾಯಿಲೆಯು ಹದಿ ವಯಸ್ಸಿನಲ್ಲಿ ಪೂರ್ತಿಯಾಗಿ ಮಾಯವಾಗಿ ಬಿಡಬಹುದು. ಸಾಮಾನ್ಯವಾಗಿ ಕಾಯಿಲೆಯು ಧಿಡೀರನೇ ಬಂದಾಗ, ರೋಗಿಗೆ ಉಸಿರಾಡಲು ಕಷ್ಟವಾಗುವ ಜೊತೆಗೆ ರೋಗಿಯು ಗೊರಗುಟ್ಟುತ್ತಾ ಉಸಿರಾಡಲು ತೊಡಗುತ್ತಾನೆ. ಯಾವುದೋ ಸಂಗೀತ ವಾದ್ಯದಿಂದ ನುಡಿಸುತ್ತಿರುವ ವಿಚಿತ್ರ ಧ್ವನಿಯು ರೋಗಿಯು ಉಸಿರಾಡುವಾಗ ಕಂಡುಬರುತ್ತದೆ. ಈ ಧ್ವನಿಯನ್ನು ಸಾಮಾನ್ಯರೂ ಸ್ಟೆತೋಸ್ಕೋಪಿನ ಸಹಾಯವಿಲ್ಲದೆ ಕೇಳಲು ಸಾಧ್ಯ. ಈ ಸಂದರ್ಭದಲ್ಲಿ ರೋಗಿಯು ಕೆಮ್ಮಬಹುದು ಕೆಮ್ಮದೆ ಸುಮ್ಮನಿರಲೂಬಹುದು. ಕೆಲವು ಅಸ್ತಮಾ ರೋಗಿಗಳಲ್ಲಿ ಮಾತ್ರ ಉಸಿರಾಟದ ತೊಂದರೆಗಿಂತ ಕೆಮ್ಮಿನ ತೊಂದರೆಯೇ ಹೆಚ್ಚಾಗುತ್ತದೆ. ಈ ಉಬ್ಬಸ ರೋಗವು ಧಿಡೀರನೇ ಕಾಣಿಸಿಕೊಂಡಾಗ ತಕ್ಷಣವೇ ಹತ್ತಿರವಿರುವ ವೈದ್ಯರ ಹತ್ತಿರ ಹೋಗಿ, ಸೂಕ್ತ ಚಿಕಿತ್ಸೆಯನ್ನು ತೆಗೆದುಕೊಳ್ಳಬೇಕು. ಈ ತೀವ್ರ ಕಾಯಿಲೆಯು ಒಂದೇ ಸಮನೆ ಹಾಗೆಯೇ ಮುಂದುವರಿದಲ್ಲಿ, ಸೂಕ್ತ ಚಿಕಿತ್ಸೆಯು ದೊರೆಯದೆಯೇ ಸಾವನ್ನು ಉಂಟುಮಾಡಬಹುದು.

ಈ ಕಾಯಿಲೆಯಿಂದ ನರಳುತ್ತಿರುವ ರೋಗಿಗಳ ಕಫ ಸೋಂಕಾಗಿದೆಯೋ ಎಂದು ತಿಳಿಯಲು ಅದನ್ನು ಪರೀಕ್ಷಿಸಬೇಕು. ಇಯೋಸಿನೋಫಿಲ್

ಗುಂಪಿಗೆ ಸೇರಿದ ಬಿಳಿಯ ರಕ್ತ ಕಣಗಳನ್ನು ಸೂಕ್ಷ್ಮಾಣುದರ್ಶಕ ಯಂತ್ರದಲ್ಲಿ ಕಾಣಬಹುದು. ರಕ್ತ ಪರೀಕ್ಷೆಯಲ್ಲಿಯೂ ಈ ಬಿಳಿ ರಕ್ತ ಕಣಗಳು ಸಂಖ್ಯೆಯಲ್ಲಿ ಹೆಚ್ಚಾಗಿರುತ್ತವೆ. ರಕ್ತ ನಾಳಗಳನ್ನು ಪರೀಕ್ಷಿಸಿದಾಗ ಆಮ್ಲಜನಕದ ಕೊರತೆಯು ಕಂಡುಬರುತ್ತದೆ. ರಕ್ತನಾಳಗಳಲ್ಲಿ ಇಂಗಾಲದ ಡೈ ಆಕ್ಸೈಡಿನ ಪ್ರಮಾಣ ಹೆಚ್ಚಾಗ ತೊಡಗುತ್ತದೆ. ಆಗ ರೋಗಿಗೆ ಅನೇಕ ಸಮಸ್ಯಾತ್ಮಕ ತೊಂದರೆಗಳುಂಟಾಗಬಹುದು. ಸಾಮಾನ್ಯವಾಗಿ ಈ ಕಾಯಿಲೆಯಲ್ಲಿ ಕ್ಷ-ಕಿರಣಗ ಳಿಂದ ಹೆಚ್ಚೇನೂ ಉಪಯೋಗವಾಗುವುದಿಲ್ಲ.

## ಚಿಕಿತ್ಸೆ

ಈ ಕಾಯಿಲೆಗೆ ತಕ್ಷಣವೇ ಸೂಕ್ತ ಚಿಕಿತ್ಸೆ ಯನ್ನು ತೆಗೆದುಕೊಳ್ಳುವುದು ತುಂಬ ಒಳ್ಳೆ ಯದು. ಸಾಮಾನ್ಯವಾಗಿ ಧಿಡೀರನೆ ಬಂದ ಉಬ್ಬ ಸಕ್ಕೆ ತಕ್ಷಣವೇ ಸೂಕ್ತ ಚಿಕಿತ್ಸೆಯನ್ನು ಕೊಟ್ಟರೆ, ರೋಗಿಯು ಆರೋಗ್ಯದಿಂದ ಇರಲು ಸಹಾಯ ಮಾಡುತ್ತವೆ. ಅದರಲ್ಲಿ ಎಪಿನೆಫ್ರಿನ್ ಮತ್ತು ಅಮಿನೋಫಿಲಿನ್ ಎನ್ನುವ ಔಷಧಿಗಳು ತುರ್ತು ಪರಿಸ್ಥಿತಿಯನ್ನು ಸರಿಪಡಿಸಲು ಸಹಾಯ ಮಾಡುತ್ತವೆ. ನಂತರ, ರೋಗಿಯು ಕಾಯಿ ಲೆಯು ಮತ್ತೆ ಬರದಂತೆ ಅನೇಕ ಕ್ರಮಗಳನ್ನು ಕೈಗೊಳ್ಳಬೇಕು. ಧಿಡೀರನೆ ಬಂದ ಉಬ್ಬಸ ರೋಗವು ಕೆಲವು ರೋಗಿಗಳಲ್ಲಿ ಔಷಧ ಗಳನ್ನು ತೆಗೆದುಕೊಂಡರೂ ಪೂರ್ತಿಯಾಗಿ ನಿಲ್ಲದೆ ಹಾಗೆಯೇ ಮುಂದುವರಿಯಬಹುದು. ಅಂತಹ ಸಂದರ್ಭಗಳಲ್ಲಿ ರೋಗಿಗೆ ಸ್ಟಿರಾಯ್ಡ್ ಔಷಧಗ ಳನ್ನು ಕೊಡಬೇಕಾಗಬಹುದು. ಆದರೆ ಈ ಸ್ಟೀರಾಯ್ಡ್ ಔಷಧಗಳನ್ನು ಹೆಚ್ಚು ಕಾಲ ಸೇವಿಸುವುದು ಒಳ್ಳೆಯದಲ್ಲ. ಯಾಕೆಂದರೆ, ಈ ಮಾತ್ರೆಗಳನ್ನು ದೀರ್ಘ ಕಾಲ ಸೇವಿಸಿದರೆ ಕೆಲವು ವ್ಯಕ್ತಿಗಳು ಖಿನ್ನತೆಯ ಕಾಯಿಲೆಗೆ ಒಳಗಾಗು ತ್ತಾರೆ. ಆಗ ಈ ಔಷಧಿಯಿಂದ ಅಡ್ಡ ಪರಿಣಾಮ ವುಂಟಾಗಿ ರೋಗಿಯು ಕಾರಣವಿಲ್ಲದೆಯೆ ಆತ್ಮಹತ್ಯೆಗೆ ಪ್ರಯತ್ನಿಸಬಹುದು. ಮೊದಲಿಗೆ ಈ ಔಷಧಿಯು ರೋಗಿಯಲ್ಲಿ ಕಾಯಿಲೆಯನ್ನು ಕಡಿಮೆ ಮಾಡಿ, ಲಕ್ಷಣಗಳನ್ನು ಹೊರಗೋಡಿಸು ವುದರಿಂದ ಅನೇಕ ರೋಗಿಗಳು ವೈದ್ಯರ ಸಲಹೆ ಯಿಲ್ಲದೆ ಹೆಚ್ಚಿನ ಕಾಲ ಸೇವಿಸಲು ತೊಡಗು ತ್ತಾರೆ. ಇದು ಒಳ್ಳೆಯದಲ್ಲ. ಈ ಬಗ್ಗೆ ರೋಗಿ ಗಳು ತಮ್ಮ ಕುಟುಂಬ ವೈದ್ಯರ ಪತ್ತಿರ ವಿವರ ವನ್ನು ತೆಗೆದುಕೊಂಡು ಪಾಲಿಸಬೇಕು.

ಧಿಡೀರನೇ ಉಬ್ಬಸ ರೋಗವು ಬಂದಾಗ ರೋಗಿಗೆ ಗಾಬರಿಯನ್ನುಂಟುಮಾಡದೆ, ಕಾಯಿಲೆಯನ್ನೆದುರಿಸಲು ಬೆಂಬಲ ಕೊಡಬೇಕು. ರೋಗಿಯು ಈ ಹೊತ್ತಿನಲ್ಲಿ ಉದ್ವೇಗಕ್ಕೆ ಒಳ ಗಾಗುವುದು ಸಹಜ. ಶ್ವಾಸಕೋಶದಲ್ಲಿ ಸೋಂಕು ಇರುವುದು ಕಂಡು ಬಂದರೆ, ರೋಗಿಯು ನೀರನ್ನು ಕುಡಿಯಲು ಉತ್ತೇಜಿಸಬೇಕು. ಆಗ ಜೀವಿ ರೋಧಕ (ಆಂಟಿಬಯಾಟಿಕ್ಸ್) ಗ್ಲೂಕೋಸ್ ಇರುವ ನೀರನ್ನು ರೋಗಿಯ ಅಭಿಧಮನಿಗಳ ಮೂಲಕ ಕೊಡಬೇಕಾಗಬಹುದು.

ರೋಗಿಗೆ ಎಪಿನೆಫ್ರಿನ್ ಚುಚ್ಚುಮದ್ದನ್ನು ಕೊಟ್ಟ ನಂತರವೂ ಲಕ್ಷಣಗಳು ಕಡಿಮೆಯಾಗದೆ ಇದ್ದರೆ, ಮತ್ತೆ ವೈದ್ಯನ ಹತ್ತಿರ ಹೋಗಿ ಅದೇ ಔಷಧಿಯನ್ನು ಮರಳಿ ಹಾಕಿಸಿಕೊಳ್ಳಬೇಕು. ಕೆಲವು ರೋಗಿಗಳಲ್ಲಿ ಅಮಿನೋಫಿಲಿನ್ ಔಷಧಿ ಯನ್ನು ಕೊಡಬೇಕಾಗಬಹುದು. ಈಗ ಕೆಲವು ಔಷಧಿಗಳನ್ನು ಅನಿಲ ರೂಪದಲ್ಲಿಯೂ ತೆಗೆದು ಕೊಳ್ಳಬಹುದು. ಅವುಗಳಲ್ಲಿ ಮುಖ್ಯವಾದವು ಗಳೆಂದರೆ–ಐಸೋಪ್ರೊಟೆರಿನಾಲ್, ಐಸೋ ಎಥರಿನ್ ಮತ್ತ ಫಿನೈಲ್ ಎಫ್ರಿನ್ ಹಾಗೂ ಎಪಿನಿಫ್ರಿನ್.

ಕೇವಲ ತೀವ್ರತರವಾದ ಕಾಯಿಲೆಗೆ, ಅಥವಾ ಬೇರೆ ಯಾವ ಔಷಧಿಗಳಿಂದಲೂ ಕಡಿಮೆ ಯಾಗದೆ ಇದ್ದರೆ, ಆಗ, ಕಾರ್ಟಿಕೋ ಸ್ಟೀರಾಯ್ಡ್ ಗುಂಪಿಗೆ ಸೇರಿದ ಔಷಧಿಗಳನ್ನು ಉಪಯೋಗಿಸುವುದು ಒಳ್ಳೆಯದು. ನಂತರ, ಪ್ರತಿನಿತ್ಯ ಈ ಔಷಧಿಯನ್ನು ಮಾತ್ರೆಯ ರೂಪ

ದಲ್ಲಿಯೂ ತೆಗೆದುಕೊಳ್ಳಬಹುದು. ಸಾಮಾನ್ಯ ವಾಗಿ ಈ ಕಾಯಿಲೆಯಲ್ಲಿ ಮತ್ತು ಬರಿಸುವಂತಹ ಹಾಗೂ ನಿದ್ರೆ ತರುವಂತಹ ಔಷಧಿಗಳನ್ನು ಉಪಯೋಗಿಸುವುದು ಒಳ್ಳೆಯದಲ್ಲ. ತೀವ್ರ ತರವಾದ ಕಾಯಿಲೆಯ ಲಕ್ಷಣಗಳು, ಆಮ್ಲಜನಕ ಕೊರತೆಯ ಲಕ್ಷಣಗಳು, ರೋಗಿಯಲ್ಲಿ ಕಂಡು ಬಂದರೆ, ಆಗ, ಆಮ್ಲಜನಕವನ್ನು ಉಪಯೋ-ಗಿಸಬೇಕು. ಎಪಿನೆಫ್ರಿನನ್ನು ರಕ್ತದ ಒತ್ತಡ ವಿರುವ ರೋಗಿಗಳಲ್ಲಿ ಮತ್ತು ಮುದುಕರಲ್ಲಿ ಉಪಯೋಗಿಸದೆ ಇರುವುದು ಉತ್ತಮ.

ಇದು ತಕ್ಷಣವೇ ಚಿಕಿತ್ಸೆ ಕೊಡುವ ಬಗ್ಗೆ ಆಯಿತು. ಆದರೆ ಉಬ್ಬಸವು ಬಂದು ಹೋದ ಮೇಲೆ, ಕಾಯಿಲೆಯು ಬರುವುದನ್ನು ತಡೆ ಗಟ್ಟಲು ಏನು ಮಾಡಬೇಕು? ಈ ಸಮಯದಲ್ಲಿ ರೋಗಿಯು ಯಾವ ಯಾವ ವಸ್ತುಗಳಿಗೆ ಶೀಘ್ರ ಪ್ರತಿಕ್ರಿಯೆಯನ್ನು ತೋರುತ್ತಾನೆ (ಅಲರ್ಜಿ) ಎನ್ನುವುದನ್ನು ಕಂಡುಹಿಡಿಯಲು ಯತ್ನಿಸ ಬೇಕು. ಕೆಲವು ರೋಗಿಗಳಿಗೆ ಶೀಘ್ರ ಪ್ರತಿ ಕ್ರಿಯಿಸದಂತೆ ಮಾಡಲು ಕೆಲವು ಕ್ರಮಗಳನ್ನು ವೈದ್ಯರ ಸಲಹೆಯ ಮೇರೆಗೆ ಅನುಸರಿಸ ಬೇಕು. ಈ ವಿಷಯದ ಬಗ್ಗೆ ಪ್ರತಿ ರೋಗಿಯ ಪ್ರತ್ಯೇಕ ಸ್ಥಿತಿಯು ಬೇರೆ ಬೇರೆಯಾಗಿರುತ್ತದೆ ಯಾದ್ದರಿಂದ, ಹೆಚ್ಚಿನ ವಿಷಯಕ್ಕೆ ಹತ್ತಿರ ವಿರುವ ತಜ್ಞ ವೈದ್ಯರ ಸಲಹೆಯನ್ನು ತೆಗೆದು ಕೊಳ್ಳಬೇಕು. ಅನೇಕ ರೋಗಿಗಳಲ್ಲಿ ಮಾನಸಿಕ ಕ್ಲೇಶಗಳು ರೋಗವನ್ನು ಉಲ್ಬಣಗೊಳಿಸುವುದ ರಿಂದ, ಆದಷ್ಟು ಮಾನಸಿಕವಾಗಿ ಶಾಂತಿ ನೆಮ್ಮದಿಯಿಂದ ಇರಲು ಪ್ರಯತ್ನಿಸಬೇಕು. ಕೆಲವು ರೋಗಿಗಳು ಅಟ್ರೋಪಿನ್‌ನಂತಹ ಮಾತ್ರೆಯಿಂದಲೂ ಗುಣ ಹೊಂದುತ್ತಾರೆ.

ಕಾಯಿಲೆಯಿಲ್ಲದೆ ಇರುವಾಗ, ಕ್ರೋಮೋಲಿನ್ ಸೋಡಿಯಂನಂತಹ ಮಾತ್ರೆಯನ್ನು ತೆಗೆದು ಕೊಳ್ಳುತ್ತಿದ್ದರೆ, ಅದು ಅನೇಕ ವಿಧದ ಉಬ್ಬಸ ರೋಗವನ್ನು ಮರುಕಳಿಸದಂತೆ ಮಾಡುತ್ತದೆ. (ಮುಖ್ಯವಾಗಿ ಹೊರಗಣ ಸ್ಥಿತಿಯಿಂದ ಉಂಟಾ ಗುವ ಅಸ್ತಮಾ ರೋಗ ಮತ್ತು ವ್ಯಾಯಾಮ ದಿಂದ ಉಂಟಾಗುವ ಅಸ್ತಮಾ ರೋಗ). ಈ ಮಾತ್ರೆಯನ್ನು ಕಾಯಿಲೆಯ ಯಾವುದೇ ಲಕ್ಷಣ ಗಳಿಲ್ಲದೆ ಇದ್ದಾಗ ತೆಗೆದುಕೊಳ್ಳಬೇಕು. ಆಗ ಈ ಮಾತ್ರೆಯು ಉಬ್ಬಸರೋಗ ಬರುವುದನ್ನು ತಡೆಗಟ್ಟುತ್ತದೆ. ಈ ಔಷಧಿಯನ್ನು ತೆಗೆದು ಕೊಂಡಾಗ ಶ್ವಾಸನಾಳದಲ್ಲಿ ಹಾಗೂ ಗಂಟಲಿನಲ್ಲಿ ಆಗಾಗ್ಗೆ ಉರಿತ ಉಂಟಾಗುತ್ತದೆ.

ಈ ಕಾಯಿಲೆಯನ್ನು ತಡೆಗಟ್ಟಲು ಸಾಧ್ಯ ವಿರುವ ಮೇಲಿನ ಎಲ್ಲ ಕ್ರಮಗಳನ್ನು ಕೈಕೊಂ ಡರೆ, ರೋಗಿಯು ಆರೋಗ್ಯದಿಂದಿರಲು ಸುಲಭ ಸಾಧ್ಯ. ಧಿಡೀರನೇ ಬಂದಾಗ, ತಕ್ಷಣವೇ ಕಾಯಿ ಲೆಗೆ ಸೂಕ್ತ ಚಿಕಿತ್ಸೆಯನ್ನು ತೆಗೆದುಕೊಂಡರೆ, ಕಾಯಿಲೆಯನ್ನು ಸುಲಭದಲ್ಲಿ ನಿಯಂತ್ರಣ ಮಾಡಬಹುದು. ಸರಿಯಾದ ನಿಯಂತ್ರಣ ಮಾಡದೆ ಇದ್ದರೆ, ಅಥವಾ ಕಡಿಮೆ ಪ್ರಮಾಣ ದಲ್ಲಿ ಮಾತ್ರೆಯನ್ನು ಸೇವಿಸುತ್ತಿದ್ದರೆ, ಅಥವಾ ಈ ಕಾಯಿಲೆಯಿಂದ ಅನೇಕ ಸಮಸ್ಯಾತ್ಮಕ ತೊಂದರೆಗಳುಂಟಾದರೆ, ಆಗ, ರೋಗಿಗೆ ಕೆಲವು ಸಲ ಪ್ರಾಣಕ್ಕೂ ಅಪಾಯ ಒದಗಬಹುದು. ಆದ್ದರಿಂದ ಈ ಕಾಯಿಲೆಯನ್ನು ಆದಷ್ಟು ಬರ ದಂತೆ ನಿಯಂತ್ರಣ ಮಾಡುವುದು ಒಳ್ಳೆ ಯದು. ✡



**ಮದುವೆ: ಹೆಣ್ಣಿನ ಬೆರಳಿಗೂ ಗಂಡಿನ ಮೂಗಿಗೂ ಉಂಗುರ ಕೂಡಿಸುವ ಸಮಾರಂಭ.**

- ಹರ್ಬರ್ಟ್ ಸ್ಪೆನ್ಸರ್

ಸಂಗ್ರಹ : ಎಸ್. ವಿಶ್ವನಾಥ

ವರಕವಿ ಬೇಂದ್ರೆಯವರು ಹಂಪಿ ಪ್ರದೇಶವನ್ನು 'ನಾಡ ನಡುಮನೆ'ಯೆಂದು ಒಂದು ಕವನದಲ್ಲಿ ವರ್ಣಿಸಿದರು. ದೊಡ್ಡದಾದ ಮನೆಯಲ್ಲಿ-ರಾಜ್ಯದಲ್ಲಿ-ದೊಡ್ಡ ಮನೆತನ-ನೆಲೆಸುತ್ತಿದ್ದಾಗ-ಆಳುತ್ತಿದ್ದಾಗ 'ನಡುಮನೆ'ಗೆ ವಿಶೇಷ ಮಹತ್ವವಿತ್ತು. ದೊಡ್ಡದಾದದ್ದು ವಿಚ್ಛಿನ್ನವಾಗಿ ಸಣ್ಣ ಸಣ್ಣ ಸಂಸಾರಗಳು ತಲೆ ಊರಿದಾಗ 'ನಡುಮನೆ' ಕಡೆಗಣಿಸಲ್ಪಡಬಹುದು. ಇದೀಗ ವಿಚ್ಛಿನ್ನವಾಗಿದ್ದ ಕನ್ನಡನಾಡು ಮತ್ತೆ ಒಂದುಗೂಡಿದೆ. 'ನಡುಮನೆ' ಮತ್ತೆ ತಲೆಯೆತ್ತಬೇಕು.

ವಿಜಯನಗರ ಸಾಮ್ರಾಜ್ಯದ ವೈಭವದ ಕಾಲದಲ್ಲಿ ಹೊಸಪೇಟೆಗೆ ಹೊಂದಿಕೊಂಡಿರುವ ಹರಪನಹಳ್ಳಿ, ಕೊಟ್ಟೂರು, ಕೂಡಲಗಿ ಪ್ರದೇಶದ ಜನ ಸುಖ ಸಂಪತ್ತುಗಳಿಂದ ನೆಮ್ಮದಿಯಿಂದಯಾಗುವ ಸಂದರ್ಭಗಳೂ ಮೇಲಿಂದ ಮೇಲೆ ಬರುವುದುಂಟು. ಕೊಟ್ಟೂರು-ಹರಪನಹಳ್ಳಿ-ಹಡಗಲಿ ವಿಭಾಗ ಮುಂಗಾರು ಮಳೆ ತಪ್ಪಿದರೆ ಹಿಂಗಾರು ಮಳೆಯನ್ನಾದರೂ ಪಡೆಯುತ್ತದೆ. ಇದ್ದುದರಲ್ಲಿ ಒಂದು ತರಹದ ನೆಮ್ಮದಿ ಆ ಪ್ರದೇಶಕ್ಕೆ ಈಗಲೂ ಇದೆಯನ್ನಬಹುದು. ಆದರೆ ಆಧುನಿಕ ನಾಗರಿಕತೆಯ ಪ್ರಭಾವ-ಆಧುನಿಕ ಸಾರಿಗೆ-ಸಂಪರ್ಕಗಳ ಪರಿಣಾಮ ಆ ಭಾಗದಲ್ಲಿ ಆದದ್ದು ಕಡಿಮೆಯೆಂದೇ ಹೇಳಬೇಕು.

ಮೊಟ್ಟ ಮೊದಲು ಬಳ್ಳಾರಿವರೆಗೂ ರೈಲು ಬಂದದ್ದು ಒಂದು ಬರಗಾಲದ ಸಮಯದಲ್ಲೇ (೧೮೭೬). ಮದರಾಸು-ಗುಂತಕಲ್ಲು-ಬಳ್ಳಾರಿ ಮುಖಾಂತರ ಕಾರವಾರದ ವರೆಗೆ ಬ್ರಾಡ್‌ಗೇಜ ರೈಲಿನ ಯೋಜನೆಯ ಅಂಗವಾಗಿ ರಚನೆ

# ಕೊಟ್ಟೂರು ರೈಲು ಕೊಡುವ ಭಾಗ್ಯ

ವಿಠ್ಠಲ ಕುಲಕರ್ಣಿ

ಬಾಳಿದವರು. ಈಗಿನ ದೆಹಲಿಯ ಸಾಮೀಪ್ಯದ ಭಾಗ್ಯ ಪಡೆದ ಹರಿಯಾನಾ ಪ್ರದೇಶದಂತೆ, ವಿಜಯನಗರದ ಸಮೀಪದ ಕೊಟ್ಟೂರು-ಹರಪನಹಳ್ಳಿ ವಿಭಾಗಕ್ಕೆ ಅಂದು ವಿಶೇಷ ಮಹತ್ವವಿತ್ತು. ಹೂವಿನಹಡಗಲಿ ಪ್ರದೇಶ ಮಲ್ಲಿಗೆಗೆ ಪ್ರಸಿದ್ಧ. ಅದು ವಿಜಯನಗರಕ್ಕೆ ಮಲ್ಲಿಗೆಗಳನ್ನು ನಿತ್ಯವೂ ಪೂರೈಸುತ್ತಿತ್ತಂತೆ! ಆದರೆ ಆ 'ನಾಡ ನಡುಮನೆ' 'ಕಾಳ ರಕ್ಕಸನ ಕಡೆಕೊಳು ಬಾಳಕ'ವಾದ ಮೇಲೆ ಈ ಪ್ರದೇಶ ರಾಜಧಾನಿಗಳಿಂದ ದೂರವಾಗಿ ಮೂಲೆಗುಂಪಾದದ್ದು "ಕರ್ಮ ಬಲದಿಂದ ಇಳಿದದ್ದು" ಎನ್ನಬೇಕೆ?

ಬಳ್ಳಾರಿಯ ಪ್ರದೇಶವೂ ಬರಗಾಲಕ್ಕೆ ಹೊರತಾದದ್ದಲ್ಲ. ತುಂಗಭದ್ರಾ ತೀರದ ಪ್ರದೇಶವನ್ನು ಬಿಟ್ಟರೆ, ಬರಗಾಲದ ತೀವ್ರತೆಗೆ ಬಲಿ-ಗೊಂಡಿತ್ತು. ಆದರೆ ಕಳೆದ ಶತಮಾನದ ವಿಚಿತ್ರ ಆಗು ಹೋಗುಗಳು ಗುಂತಕಲ್ಲು-ಬಳ್ಳಾರಿ ವರೆಗೆ ರಚಿತವಾದ ಬ್ರಾಡ್‌ಗೇಜು ರೈಲನ್ನು ಪರಿವರ್ತಿಸಿ ೧೮೮೫ರಲ್ಲಿ ಮೀಟರ್‌ಗೇಜಿನ ರೈಲುಗಾಡಿಗಳ ಓಡಾಟವನ್ನು ಹುಬ್ಬಳ್ಳಿ ವರೆಗೆ ಮಾತ್ರ ಸೀಮಿತಗೊಳಿಸಿದವು. ಇದೀಗ ಸರಿಯಾಗಿ ಒಂದು ನೂರು ವರ್ಷಗಳ ತರುವಾಯ ಬಳ್ಳಾರಿ-ಹೊಸಪೇಟೆಗಳಿಗೆ ಬ್ರಾಡ್‌ಗೇಜ್ ಗಾಡಿಗಳ ಓಡಾಟವೂ ಪ್ರಾರಂಭವಾಗಿದೆ.

ಕೊಟ್ಟೂರು ಸೀಮೆಯು ಹಿಂದಿನ ಮದರಾಸು ಸರಕಾರದ ಗಮನ ಸೆಳೆದದ್ದೂ ಮತ್ತೊಂದು ಬರಗಾಲದ ಸಮಯದಲ್ಲೇ. ಆ

ಪ್ರದೇಶದ ಹುಟ್ಟುವಳಿಯಲ್ಲಿ ಆಸ್ಥೆ ಬೆಳೆದದ್ದೂ ಆಗಲೇ. ಎಂತಲೇ ೧೯೦೫ರಲ್ಲಿ ಹೊಸಪೇಟೆ–ಕೊಟ್ಟೂರು ರೈಲು ನಿರ್ಮಾಣವಾಯಿತು. ಆದರೆ ಸದ್ಯದ ಈ ಮಾರ್ಗ ಹೆಸರಿಗೆ ಮಾತ್ರ ಅಸ್ತಿತ್ವದಲ್ಲಿದೆಯೆನ್ನಬೇಕು. ದಿನಕ್ಕೆ ಒಂದೇ ಮಿಶ್ರ ಗಾಡಿ ಹೋಗುತ್ತದೆ; ಅದೇ ಗಾಡಿ ಹಿಂತಿರುಗುತ್ತದೆ. ರಾಜ್ಯರಾಜಧಾನಿಗಳ ಆಸ್ಥೆ ಕೊಟ್ಟೂರಿಗೆ ದೊರಕಿಲ್ಲವಾದರೆ, ಕೊಟ್ಟೂರಿನವರ ಆಸ್ಥೆ ಹೊಸಪೇಟೆಯುನ್ನು ಮೀರಿ ಬೆಳೆಯುವಂತಿಲ್ಲ. ವ್ಯಾಪಾರದ ಸೆಳೆತ ದಾವಣಗೆರೆ–ಹರಿಹರಗಳ ಕಡೆಗೆ ಹೆಚ್ಚು. ಆದರೆ ಅಲ್ಲಿಗೆ ರೈಲು ಸೌಕರ್ಯವಿಲ್ಲ. ಇದ್ದ ಹೊಸಪೇಟೆ–ಕೊಟ್ಟೂರು ರೈಲ್ದಾರಿಯೂ ಭದ್ರವಾದದ್ದಲ್ಲ. ಮಳೆಯ ಹೊಡೆತಕ್ಕೆ ಒಮ್ಮೊಮ್ಮೆ ರೈಲು ಓಡಾಟ ರದ್ದಾಗುವದೂ ಉಂಟು.

ಸುಮಾರು ಮೂವತ್ತು ವರ್ಷಗಳ ಹಿಂದೆ ಬಳ್ಳಾರಿ ಜಿಲ್ಲೆ ಮೈಸೂರು ರಾಜ್ಯದೊಂದಿಗೆ ಸೇರಿಕೊಂಡಾಗಲಾದರೂ ಇಲ್ಲಿಯ ಸಂಚಾರ ಸಾಧನಗಳು ಮೈಸೂರಿಗೆ ಅನುಕೂಲವಾಗುವಂತೆ ಬೆಳೆಯುಬಹುದೆಂಬ ಬಲವಾದ ನಿರೀಕ್ಷೆ ಇತ್ತು. ಆದರೆ ಬಳ್ಳಾರಿ ಸ್ವಲ್ಪ ಕಾಲ ಮೈಸೂರು ರಾಜ್ಯದಲ್ಲಿ ಬೇಡವಾದ ಅತಿಥಿಯಂತೆ ಬಾಳಬೇಕಾಯಿತೇನೋ! ವಿಶಾಲ ಮೈಸೂರು ರಾಜ್ಯದ ರಚನೆಯ ನಂತರ ರಸ್ತೆ ಸಾರಿಗೆಯ ಬೆಳವಣಿಗೆ ಈ ಭಾಗದಲ್ಲಿಯೂ ಗಣನೀಯ ಪ್ರಮಾಣದಲ್ಲಿ ಆಗಿದೆ. ರೈಲು ಸಾರಿಗೆ ಮಾತ್ರ ಯಾವ ಬೆಳವಣಿಗೆಯನ್ನೂ ಕಾಣದೆ ಕುಳಿತಿದೆ. ಮದರಾಸಿನವರಿಗೆ ಇದ್ದಂತಹ ಕೊಟ್ಟೂರಿನ ಆಸ್ಥೆ ಬೆಂಗಳೂರಿನವರಿಗೆ ಇನ್ನೂ ಉಂಟಾಗಿಲ್ಲವೇನೋ! ಕೊಟ್ಟೂರು ಪ್ರದೇಶದ ಜನರೇ ರೈಲು ಯೋಜನೆಗಾಗಿ ಹಣ ಕೂಡಿಸುವ ಉತ್ಸಾಹ ತೋರಿದರೆ ಬೆಂಗಳೂರಿನಲ್ಲಿಯ ಶಾಸಕರು ಕೊಟ್ಟೂರು–ಹರಿಹರ ರೈಲಿನ ಬಗ್ಗೆ ಏನೂ ಗೊತ್ತಿಲ್ಲವೆಂದು ಹೇಳಬಲ್ಲರು!

ಸದ್ಯದ ಹೊಸಪೇಟೆ–ಕೊಟ್ಟೂರು ರೈಲು ಮಾರ್ಗ ತುಂಗಭದ್ರಾ ಜಲಾಶಯ ನಿರ್ಮಾಣದಿಂದಲೂ ಸ್ವಲ್ಪ ಮಾರ್ಪಾಟು ಹೊಂದಬೇಕಾಯಿತು. ಆದರೆ ಪ್ರಯೋಜನದಲ್ಲಿ ಮಾತ್ರ ಏನೂ ಬದಲಾವಣೆಯಾಗಲಿಲ್ಲ. ಕರ್ನಾಟಕದಲ್ಲಿಯ ಈ ಸಲದ ಬರಗಾಲ ಈ ಮಾರ್ಗದ ಬೆಳವಣಿಗೆಯತ್ತ ಮತ್ತೆ ಗಮನ ಸೆಳೆಯುತ್ತಿದೆ. ಕೊಟ್ಟೂರು–ಹರಿಹರ ಮಾರ್ಗದ ನಿರ್ಮಾಣವನ್ನು ಬರಗಾಲದ ಪರಿಹಾರ ಕಾರ್ಯದ ರೂಪದಲ್ಲಿ ಕೈಗೆತ್ತಿಕೊಳ್ಳುವಂತೆ ನಮ್ಮ ಮುಖ್ಯಮಂತ್ರಿಗಳು ರೈಲು ಮಂತ್ರಿಗಳನ್ನು ಬಿನ್ನವಿಸಿದ್ದು ಯೋಗ್ಯವೇ ಆಗಿದೆ.

'ನಾಡ ನಡುಮನೆ'ಗೆ ಎಲ್ಲ ದಿಕ್ಕುಗಳಿಂದ ರೈಲು ಸಂಪರ್ಕ ಬೆಳೆಯುವದವಶ್ಯ. ಬೇರೆ ಬೇರೆ ದಿಕ್ಕಿಗೆ ಮುಖ ಮಾಡಿದ್ದ–ಹಂಚಿಹೋಗಿದ್ದ "ನಡುಮನೆಯ ಪಕ್ಕದ ಭಾಗಗಳು" ಈಗ ಮತ್ತೆ ಒಂದಾಗಿ ಮೂರು ದಶಕಗಳೇ ಆದರೂ ಅವಶ್ಯದ ಈ ಬೆಳವಣಿಗೆಗಳು ರೂಪಗೊಂಡಿಲ್ಲ. ಈಗಲಾದರೂ ಕೊಟ್ಟೂರು–ರೈಲು ಹರಿಹರವನ್ನು ತಲಪಬೇಕಾದದ್ದು ಒಂದು ಹಂತದ ಬೆಳವಣಿಗೆ ಮಾತ್ರ. ಸುಮಾರು ೭೦ ಕಿ.ಮೀ.ನ ದೂರದ ಈ ಮಾರ್ಗದ ನಿರ್ಮಾಣಕ್ಕೆ ೬–೭ ಕೋಟಿ ರೂಪಾಯಿಗಳ ವೆಚ್ಚ ತಗಲೀತು. ಹರಿಹರದಿಂದ ಹರಪನಹಳ್ಳಿಯುವರೆಗೆ ದಕ್ಷಿಣ ರೈಲು ವಲಯದವರೂ ಕೊಟ್ಟೂರಿನಿಂದ ಹರಪನಹಳ್ಳಿ ಭಾಗದ ರೈಲು ರಚನೆಯನ್ನು ದಕ್ಷಿಣ–ಮಧ್ಯ ರೈಲಿನವರೂ ಏಕಕಾಲದಲ್ಲಿ ಕೈಕೊಂಡರೆ, ಎರಡು ಮೂರು ವರ್ಷಗಳಲ್ಲಿಯೋ ರೈಲು ಸಿದ್ಧವಾಗಬಹುದು. ಅಂಶತಃ, ಎರಡೂ ದಿಕ್ಕಿನಿಂದ ಒಂದು ವರ್ಷದಲ್ಲಿಯೇ ರೈಲು ಓಡಾಟ ಪ್ರಾರಂಭವಾಗುವದೂ ಸಾಧ್ಯವಾಬಹುದು.

ನಮ್ಮ ಗುರಿ ಇಷ್ಟಕ್ಕೇ ಮುಗಿಯಬಾರದು. ಹೊಸಪೇಟೆ–ಕೊಟ್ಟೂರು ರೈಲು ಎರಡೂ ದಿಕ್ಕಿನಲ್ಲಿ ಬೆಳೆದು ರಾಯಚೂರು–ಮಾನ್ವಿ–ಸಿಂಧನೂರು – ಗಂಗಾವತಿ – ಮುನಿರಾಬಾದ–ಹೊಸಪೇಟ–ಕೊಟ್ಟೂರು– ಹರಿಹರ–ಶಿವಮೊಗ್ಗ

ಗಳ ನೇರ ಜೋಡಣೆ ಒದಗುವಂತಾಗಬೇಕು. ನಾಡನಡುಮನೆಯ ವಿಕಾಸ–ಮಹತ್ವ ಬೆಳೆಯುವ ದಕ್ಕೆ ಇದು ಅವಶ್ಯ. ಹೈದರಾಬಾದ ಕರ್ನಾಟಕ, ಬಳ್ಳಾರಿ–ಮೈಸೂರು–ಮುಂಬಯಿ ಕರ್ನಾಟಕಗಳ ಭಾವ ಬಂಧನವನ್ನು ಬಲಪಡಿಸುವಲ್ಲಿ ಈ 'ನಡುಮನೆ'ಯ ರೈಲು ಮಹತ್ವದ ಪಾತ್ರ ವಹಿಸಬೇಕು. ಹೊಸ ಮಾರ್ಗಗಳನ್ನು ಬೆಳೆಸಿ ಈ ಪ್ರದೇಶಕ್ಕೆ ೧೯–೨೦ನೇ ಶತಮಾನದ ಸೌಕರ್ಯಗಳನ್ನು ಈಗಲಾದರೂ ಒದಗಿಸಿ ೨೧ನೇ ಶತಮಾನಕ್ಕೆ ಅಣಿಗೊಳಿಸಬೇಕು. ರೈಲು ನಾಗರಿಕತೆಯಿಂದ ಅಸ್ಪೃಶ್ಯರಾಗಿ ಉಳಿದ ಈ ಜನರಿಗೆ ಹೊಸ ಜೀವನದ ಸಂಪರ್ಕವನ್ನು ಒದಗಿಸಬೇಕು. ಇಪ್ಪತ್ತು ಸಾವಿರದ ಮೇಲಿನ ಜನಸಂಖ್ಯೆಯುಳ್ಳ ಇಲ್ಲಿಯ ಪಟ್ಟಣಗಳಿಗೆ ರೈಲು ಭಾಗ್ಯ ದೊರಕಬೇಕು. ಕೊಟ್ಟೂರಿನ ಜನ ನೇರವಾಗಿ ಮೈಸೂರು ಸೇರುವ ಅನುಕೂಲತೆ ಪಡೆಯಬೇಕು. ಪ್ರವಾಸಿಗರು ಮೈಸೂರಿನಿಂದ ಹಂಪಿದರ್ಶನಕ್ಕೆ ನೇರವಾಗಿ ಬರುವಂತಾಗಬೇಕು. "ಪೂರ್ವಧರ್ಮಬಲದಿಂದೀ ಕರ್ಮಬಲದಿಂದಿಳಿದ ಧರ್ಮಕರ್ಮದ ಪುರಾತನ ಪುರಗಳ", "ನಡುನಾಡ" ಕರಾವಳಿಯ ಮಂಗಳೂರು–ಕಾರವಾರಗಳು ಹೆಬ್ಬಾಗಿಲೆನಿಸಿ ನಾಡಿನ ವ್ಯಾಪಾರ ಉದ್ಯೋಗಗಳನ್ನು ಬೆಳೆಸಲು ಕಾರಣವಾಗಬೇಕು.

ಕೊಟ್ಟೂರು – ಹರಿಹರದ ರೈಲು ಒಂದು ಹೊಸ ಅಧ್ಯಾಯವನ್ನು ಪ್ರಾರಂಭಿಸಬೇಕು. ಹರಪನಹಳ್ಳಿಯಿಂದ ಮುಂಡರಗಿ – ಡಂಬಳ–ಲಕ್ಕುಂಡಿಗಳ ಮೂಲಕ ಗದಗಿಗೂ ರೈಲು ಸಂಪರ್ಕ ಬೆಳೆಯಬೇಕು. ರೈಲು ಸರಾಸರಿಯ ದೃಷ್ಟಿಯಿಂದ ಬಳ್ಳಾರಿ ಜಿಲ್ಲೆ ಮುಂದುವರೆದಿದ್ದರೂ ಕನ್ನಡನಾಡಿನ ಇತರ ಜಿಲ್ಲೆಗಳೊಂದಿಗೆ ಸೂಕ್ತ ಸಂಪರ್ಕವಿಲ್ಲದೆ ಪ್ರಯೋಜನ ದೃಷ್ಟಿಯಿಂದ ತೀರ ಹಿಂದುಳಿದಿವೆ. ನಮ್ಮ ನಾಡಿನಲ್ಲಿ ರೈಲು ಇನ್ನೂ ಹೆಚ್ಚು ಪ್ರಮಾಣದಲ್ಲಿ ಬೆಳೆಯುವದು ಅವಶ್ಯವಾಗಿರುವಂತೆಯೇ ಇಂತಹ ಚಿಕ್ಕ ಜೋಡಣೆಗಳ ಪ್ರಯೋಜನವೂ ಹೆಚ್ಚಾಗಬೇಕಾಗಿದೆ.

ಹಾಗೆ ನೋಡಿದರೆ, ರೈಲು ಬೆಳವಣಿಗೆ ೧೯ ನೇ ಶತಮಾನದ ಕೊಡುಗೆಯೆನ್ನಬೇಕು. ಅದು ಕೂಡ ನಮ್ಮ ನಾಡಿಗೆ ೨೦ನೇ ಶತಮಾನದ ಅಂತ್ಯದಲ್ಲಿಯೂ ಸಮರ್ಪಕವಾಗಿ ದೊರಕಿಲ್ಲ. ಹೆಚ್ಚು ರೈಲು ಬೇಕೆಂದರೂ ರಸ್ತೆ ಸಾರಿಗೆಯಷ್ಟು ಸಾರ್ವತ್ರಿಕವಾಗಿ ರೈಲು ಬೆಳೆಯಲಾರದು. ಆದರೂ ಸಮೂಹ ಸಂಚಾರ ಸಾಧನಗಳಲ್ಲಿ ರೈಲು ಸಾರಿಗೆಯೇ ಕಡಿಮೆ ವೆಚ್ಚದ್ದು. ಬಸ್ಸುಗಳೇ ರೈಲುಕಂಬಿ(ಹಳಿ)ಗಳ ಮೇಲೆ ಓಡಿದರೆ ಇಂಧನದ ಉಳಿತಾಯವಿದೆ. ನಾಡಿನಲ್ಲಿ ಕಡಿಮೆ ವೆಚ್ಚದ ಸಾರಿಗೆ ಅನುಕೂಲತೆ ಬೆಳೆಯಬೇಕೆಂದರೆ ನಮ್ಮ ನಾಡಿನ ಯಾವ ಊರೂ–ಹಳ್ಳಿಯೂ– ರೈಲಿನಿಂದ ೧೫ ಕಿ.ಮೀ.ಗಿಂತ ಹೆಚ್ಚು ದೂರ ವಿರಬಾರದು. ಅಂತಹ ರೈಲು ಯೋಜನೆಗಳು ರೂಪುಗೊಳ್ಳಬೇಕು. ಬಸ್ಸುಗಳ ಬೆಳವಣಿಗೆ ರೈಲಿಗೆ ಪೂರಕವಾಗಿದ್ದರೆ ಸಾಕು. ಆದರೂ ರಾಜ್ಯಗಳ ಸದ್ಯದ ಸಾರಿಗೆ ನೀತಿಗಳನ್ನು ನೋಡಿದರೆ ರೈಲು ಸಾರಿಗೆ ಕರ್ನಾಟಕದಲ್ಲಿ ಸಾಕಷ್ಟು ಗಮನ ಪಡೆಯುತ್ತಿಲ್ಲ. ೨೧ನೇ ಶತಮಾನವನ್ನು ಎದುರು ನೋಡುತ್ತಿರುವ ೧೯ನೇ ಶತಮಾನದ ಸೌಕರ್ಯಗಳನ್ನೂ ಸರಿಯಾಗಿ ಪಡೆಯದ ಸ್ಥಿತಿಯಲ್ಲಿದ್ದೇವಲ್ಲ!

ಬಸ್ಸು ಸಾರಿಗೆಯ ದರಗಳು ಏರುತ್ತಿರುವದು ಅನಿವಾರ್ಯವೆನ್ನುತ್ತಾರೆ ರಸ್ತೆ ಸಾರಿಗೆ ಸಂಸ್ಥೆಯವರು. ಆದರೆ ರಸ್ತೆ ಸಾರಿಗೆಗಿಂತ ಕಡಿಮೆ ವೆಚ್ಚದ್ದಾದ ರೈಲು ಸಾರಿಗೆಯ ಬೆಳವಣಿಗೆಯತ್ತ ರಾಜ್ಯ ಸರಕಾರದ ದೃಷ್ಟಿ ಹರಿಯುತ್ತಿಲ್ಲ. ಕರ್ನಾಟಕದಲ್ಲಿ ರೈಲಿನ ಸೌಕರ್ಯ ಈ ಕಾರಣದಿಂದಲೂ ಹೆಚ್ಚಬೇಕಾಗಿದೆ. ರೈಲು ಸಾರಿಗೆಯಲ್ಲಿ ಅಚ್ಚುಕಟ್ಟುತನವನ್ನೂ ಮಿತವ್ಯಯವನ್ನೂ ಒದಗಿಸಬೇಕು. ಕೊಟ್ಟೂರು ರೈಲು ಬೆಳವಣಿಗೆ ನಡುನಾಡಿನಲ್ಲಿ ಅಂತಹ ಸೌಕರ್ಯಗಳನ್ನು ಬೇಗನೆ ಒದಗಿಸುವಂತಾಗಲಿ. ✿

# ಜಮ್ಮು

ಟೇಕಲ್ ಗೋಪಾಲಕೃಷ್ಣ

ಜಮ್ಮು-ಕಾಶ್ಮೀರ ಎಂದ ತಕ್ಷಣ ಸುಂದರವಾದ ಪರ್ವತ ಶ್ರೇಣಿ, ದಾಲ್ ಸರೋವರ, ಸುಂದರ ವನಗಳಿಂದ ಕೂಡಿದ ರಮಣೀಯ ಸ್ಥಳ ನಮ್ಮ ಕಣ್ಣ ಮುಂದೆ ಸುಳಿಯುವುದು ಸಹಜ. ಆದರೆ ಜಮ್ಮುವಿನಲ್ಲಿ ಹಿಂದೂ ದೇವಾಲಯಗಳು ರಾರಾಜಿಸುತ್ತಿವೆಯೆಂಬುದು ಬಹು ಜನರಿಗೆ ಗೊತ್ತಿಲ್ಲ.

ಇಲ್ಲಿಯ ರಘುನಾಥ ಮಂದಿರ ೩೩ ಕೋಟಿ ಸಾಲಿಗ್ರಾಮಗಳಿಂದ ಸ್ಥಾಪಿಸಲ್ಪಟ್ಟಿದೆ ಎನ್ನಲಾಗುತ್ತಿದೆ. ಇದನ್ನು ಡಾ. ಕರಣಸಿಂಗರ ಪೂರ್ವಜರು ಸ್ಥಾಪಿಸಿದರು. ಈ ವಿಶಾಲ ಮಂದಿರ ಪೇಟೆಯ ಮಧ್ಯೆ ಸ್ಥಾಪಿತವಾಗಿದ್ದು ಜಮ್ಮೂವಿಗೆ ಬಂದವರಲ್ಲಿ ಇದನ್ನು ನೋಡದೆ ಹೋಗುವವರು ವಿರಳ.

ಇಲ್ಲಿಂದ ೪೦ ಕಿಲೋಮೀಟರು ದೂರದಲ್ಲಿ ಪರಮಂಡಲ್ ಎಂಬ ಪುಣ್ಯ ಸ್ಥಾನವಿದೆ. ಇಲ್ಲಿ ಕಶ್ಯಪ ಮಹಾ ಮುನಿಗಳು ತಪಸ್ಸು ಮಾಡಿ ಇಲ್ಲಿಯ ಜನರಿಗೆ ಸ್ಥಳ ಕಲ್ಪಿಸಿಕೊಟ್ಟರಂತೆ. ಇಲ್ಲಿ ನಾಗನ ವಿಗ್ರಹ ಉದ್ಭವವಾಗಿದೆ. ಈ ಮಂದಿರ ಎರಡು ಸಾವಿರ ವರ್ಷಗಳಷ್ಟು ಹಳೆಯದೆಂದು ಪ್ರತೀತಿಯಿದೆ. ಇದರ ಮುಂದೆ ಹರಿಯುವ ನದಿ ಅಂತರ್ವಾಹಿನಿಯಾಗಿದೆ. ಮರಳು ಬಗೆದರೆ ಬೇಕಾದಷ್ಟು ನೀರು ಬರುವುದು.

ಇಲ್ಲಿಯ ಪೂಜಾರಿ ಮದರಾಸಿನ ಈರೋಡಿನಿಂದ ಬಂದ ಶ್ರೀ ಶಿವಾನಂದರು. ಇಲ್ಲಿ ಕೋಟಿ ಲಿಂಗಗಳು ಪ್ರತಿಷ್ಠಾಪಿಸಲ್ಪಟ್ಟಿವೆ.

ಜಮ್ಮುವಿನಿಂದ ಹತ್ತು ಕಿಲೋಮೀಟರು ದೂರದಲ್ಲಿ ಬೀರ್‌ಪುರ್ ಎಂಬ ಹಳ್ಳಿಯಿದೆ. ಇಲ್ಲಿಯ ಶ್ರೀ ರಾಧಾಕೃಷ್ಣ ಮಂದಿರವನ್ನು ಡಾ. ಕರಣಸಿಂಗರ ತಾತಂದಿರು ತಮ್ಮ ಪತ್ನಿಯ (ಚಾಂಡಕಿದೇವಿ) ಜ್ಞಾಪಕಾರ್ಥವಾಗಿ ೧೮೭೦ ರಲ್ಲಿ ಕಟ್ಟಿಸಿದರು.

ಇಲ್ಲೊಂದು ದೊಡ್ಡ ಕಲ್ಯಾಣಿಯಿದೆ. ಇಲ್ಲಿ ಯಾವಾಗಲೂ ನೀರಿರಬೇಕೆಂಬ ಇಚ್ಛೆಯಿಂದ ಯಜ್ಞ ಮಾಡಿ ಬಂಗಾರದ ಇಟ್ಟಿಗೆಗಳು ಹಾಗು ಬೆಳ್ಳಿಯ ಮೀನನ್ನು ಹೂಳಿಡಲಾಗಿದೆ.

ಬೀರ್‌ಪುರ್ ಹಾಗು ಜಮ್ಮುವಿನ ಮಧ್ಯೆ ಪತ್ತ ತಲಾಬ್ ಎಂಬ ದೊಡ್ಡ ಕೆರೆಯಿದೆ. ಇದು ಬಹಳ ಪುರಾತನವಾದದ್ದು. ಇದಕ್ಕೊಂದು ಚರಿತ್ರೆಯಿದೆ. ಆ ಪ್ರಕಾರ ಇಲ್ಲಿ ಒಬ್ಬ ಬ್ರಾಹ್ಮಣ ಗುರುವಿದ್ದ. ಎರಡು ಪಂಗಡಗಳ ಗುರು. ಒಂದು ಸಲ ಎರಡು ಪಂಗಡಗಳಲ್ಲಿ ಜಗಳವಾಗಲು ಈತ ಪಂಚಾಯಿತಿ ಮಾಡಿದ. ಬೇರೊಂದು ಪಂಗಡದವರಿಗೆ ಇದು ಸರಿ ಬೀಳಲಿಲ್ಲ. ಮತ್ತೊಬ್ಬ ಬ್ರಾಹ್ಮಣನಿಂದ ಇವನ ತಲೆ ಕಡಿಸಿದರು. ಇವನ ಜತೆಯಿದ್ದ ನಾಯಿ ಹಾಗು

ಕುದುರೆ ಅವನ ಕತ್ತರಿಸಿದ ದೇಹವನ್ನು ಬಚ್ಚಿಟ್ಟು ಅವರ ಮನೆಯವರಿಗೆ ತಿಳಿಸಲು ಅವರು ದಹನ ಸಂಸ್ಕಾರ ಮಾಡಿದರು. ಆ ಗುರು ಎಷ್ಟು ಪ್ರಭಾವಶಾಲಿ ಆಗಿದ್ದನೆಂದರೆ ಗುರುವನ್ನು ಕೊಂದವನ ವಂಶ ನಿರ್ನಾಮವಾಯಿತಂತೆ. ಇಲ್ಲಿ ಯಾರು ಕೆರೆಗೆ ಸೇವೆ ಮಾಡುತ್ತಾರೋ ಅವರ ಕೆಲಸವಾಗುತ್ತದೆಂಬ ಭಾವನೆ ಪ್ರಚಲಿತವಾಗಿದೆ. ಆದ್ದರಿಂದ ಸಾವಿರಾರು ಜನರು ಪ್ರತಿ ವರ್ಷ ಇಲ್ಲಿಗೆ ಬರುತ್ತಾರೆ.

ಎಲ್ಲಕ್ಕಿಂತ ಹೆಚ್ಚು ಜನಪ್ರಿಯ ದೇವಸ್ಥಾನ ವೆಂದರೆ ಶ್ರೀ ವೈಷ್ಣವದೇವಿಯದು. ಜೈಮಾತಾಜಿ ಜೈಮಾತಾಜಿ ಎಂದು ಲಕ್ಷೋಪಲಕ್ಷ ಭಕ್ತರು ತ್ರಿಕೂಟ ಪರ್ವತವನ್ನು ಕಟರಾ ಎಂಬ ಸ್ಥಳ ದಿಂದ ಹತ್ತುವರು. ತಿರುಪತಿಯಲ್ಲಿದ್ದಂತೆ ಬೆಟ್ಟದ ಮೇಲೆ ಬಸ್ಸು ಹೋಗುವುದಿಲ್ಲ. ನಡೆದೇ ಹೋಗಬೇಕು. ಅರ್ಧ ದಾರಿ ಸವೆದಾಗ ಅರ್ಧ ಕುಮಾರಿ ಎಂಬ ಸ್ಥಳವಿದೆ. ಈ ಗುಹೆ ಕಲ್ಲಿನದು; ಇದು ಗರ್ಭಾಕಾರದಲ್ಲಿದೆ. ಇದು ವೈಷ್ಣವದೇವಿ ತಪಸ್ಸು ಮಾಡಿದ ಸ್ಥಳ. ಇಲ್ಲಿಂದ ಭಕ್ತರು ನುಸುಳಿ ಬಂದರೆ ಅವರ ಪಾಪವೆಲ್ಲಾ ಸವೆದು ಹೋಗುತ್ತದೆಂಬ ನಂಬಿಕೆಯಿದೆ. ನಂತರ ವೈಷ್ಣವದೇವಿ ಇರುವ ಗುಹೆಯಲ್ಲಿ ಒಬ್ಬರು ಮಾತ್ರ ಹೋಗುವಷ್ಟು ಜಾಗವಿದೆ. ಅಲ್ಲಿಂದ ನುಸುಳಿ ಕೆಳಗೆ ಇಳಿದ ತಕ್ಷಣ ಅಲ್ಲಿ ತಣ್ಣಗೆ ನೀರು ಹರಿಯುತ್ತಿರುತ್ತದೆ. ನಂತರ ಮಾತಾ ಶ್ರೀ ವೈಷ್ಣವದೇವಿಯ ದರ್ಶನ ಮಾಡಿ ಜನರು ಸಂತುಷ್ಟರಾಗಿ ಹಿಂತಿರುಗುವರು.

ಕೇಳಿದ ವರವನ್ನು ಮಾತಾಜೀ ನೀಡುವಳೆಂಬ ಭರವಸೆ ಭಕ್ತರಿಗಿದೆ. ಇಲ್ಲಿಂದ ನಂತರ ಭೈರವ ಮಂದಿರಕ್ಕೆ ಹೋಗಿ ದೇವರ ದರ್ಶನ ಮಾಡ ಬೇಕು. ಆಗಲೇ ಯಾತ್ರೆ ಸಫಲವಾಗುವುದು. ಇಲ್ಲಿಯ ಪ್ರಸಾದ ಅಕ್ರೋಟ್ ಎಂಬ ಒಣಗಿದ ಫಲ.

ಶ್ರೀ ವೈಷ್ಣವದೇವಿ ಯುಗಯುಗಗಳಿಂದ ಕನ್ಯೆಯಾಗಿದ್ದಾಳೆ. ಕಟರಾ ಎಂಬ ಸ್ಥಳದಲ್ಲಿ ಶ್ರೀಧರ ಪಂಡಿತನೆಂಬ ಬ್ರಾಹ್ಮಣನಿದ್ದ. ಅವ ನಿಗೆ ಮಕ್ಕಳಿರಲಿಲ್ಲ. ಆತನು ನಿತ್ಯ ಐದು ಕನ್ಯೆ ಯರ ಕಾಲು ತೊಳೆದು ಸೇವೆಮಾಡಿ ದಕ್ಷಿಣೆ ಕೊಟ್ಟು ಮಕ್ಕಳನ್ನು ತೃಪ್ತಿಪಡಿಸಿ ಸಂತೋಷ ಪಡುತ್ತಿದ್ದ.

ಒಂದು ದಿನ ಒಬ್ಬ ತೇಜಸ್ವಿಯಾದ ಕನ್ಯೆ ಸೂರ್ಯನ ಪ್ರತಿಭೆಯಂತೆ ಕಂಡಳು. ತನ್ನ ಪಾದಗಳನ್ನು ಪಂಡಿತನ ಮುಂದಿಡಲು ಶ್ರೀಧರ ಪಂಡಿತನಿಗೆ ಆಶ್ಚರ್ಯವಾಯಿತು. ಆ ಕನ್ಯೆ ತಮ್ಮ ಹಳ್ಳಿಯವಳಲ್ಲ, ಎಲ್ಲಿಂದ ಬಂದಿರ ಬಹುದು ಎಂದು ತರ್ಕಿಸುತ್ತಿದ್ದ. ಆ ಕನ್ಯೆ ಹೋಗುವ ಮುನ್ನ ಶ್ರೀಧರ ಪಂಡಿತನಿಗೆ ಮಾರನೆ ದಿನ ತನ್ನ ಮನೆಯಲ್ಲಿ ಎಲ್ಲರನ್ನು ಊಟ ಸಮಾರಾಧನೆಗೆ ಕರೆಯಲು ಹೇಳಿದಳು. ತಕ್ಷಣ ಅಂತರ್ಧಾನವಾದಳು. ಶ್ರೀಧರ ಪಂಡಿ ತನಿಗೆ ಪೀಕಲಾಟಕ್ಕಿಟ್ಟಿತು. ಮನೆಯಲ್ಲಿ ಒಂದು ಕಾಳಿಲ್ಲ. ಇಷ್ಟು ಜನರನ್ನು ಊಟಕ್ಕೆ ಕರೆದರೆ ಹೇಗೆ ಎಂದು ಯೋಚಿಸಿದ. ನಂತರ ಆ ಕನ್ಯೆಯ ತೇಜಸ್ಸು ಜ್ಞಾಪಕಕ್ಕೆ ಬಂದು ತಕ್ಷಣ ಹಳ್ಳಿಯಲ್ಲಿ ಎಲ್ಲರಿಗೂ ಆಮಂತ್ರಣ ಕೊಟ್ಟು ಬರುತ್ತಿರಲು ಶ್ರೀ ಗೋರಖನಾಥರು ೩೬೦ ಶಿಷ್ಯರೊಂದಿಗೆ ಈ ಹಳ್ಳಿಯಲ್ಲಿ ಬೀಡು ಬಿಟ್ಟಿ ದ್ದರು. ಅವರನ್ನು ಊಟಕ್ಕೆ ಆಮಂತ್ರಿಸಲು ಅವರ ಶಿಷ್ಯ ಭೈರವ ನಕ್ಕು "ಪಂಡಿತರೆ ಇಂದ್ರನು ಒಮ್ಮೆ ನಮ್ಮನ್ನು ಔತಣಕ್ಕೆ ಕರೆದ. ನಾವು ಊಟ ಮಾಡಲು ಪ್ರಾರಂಭಿಸಿದೆವು. ಫಲವಾಗಿ ದೇವಲೋಕದಲ್ಲಿ ಅಕಾಲ ಪ್ರಾಪ್ತವಾಯಿತು. ಆದರೂ ನಮ್ಮ ಹೊಟ್ಟೆ ತುಂಬಲಿಲ್ಲ. ನಮ್ಮ ಸಹವಾಸ ನಿಮಗೆ ಬೇಡ. ಹೊರಡಿ" ಎಂದು ವಿನಂತಿಸಿದ.

ಆದರೆ ಶ್ರೀಧರ ಪಂಡಿತ ಹಟ ಹಿಡಿದ. "ಊಟ ಹಾಕುವುದು ನಾನಲ್ಲ, ಆ ತೇಜಸ್ವಿ ಕನ್ಯೆ" ಎಂದ. ಭೈರವನಿಗೆ ಕುತೂಹಲವುಂಟಾಯಿತು. ಇದು ಯಾವ ಶಕ್ತಿಯೆಂಬುದನ್ನು ಪರೀಕ್ಷಿಸಬೇಕೆಂದು ಔತಣಕ್ಕೆ ಒಪ್ಪಲು ಎಲ್ಲರೂ ಮಾರನೆಯ ದಿನ

ಪಂಡಿತರ ಮನೆ ಮುಂದೆ ನೆರೆದರು. ಮಧ್ಯಾಹ್ನ ವಾದರೂ ಪಂಡಿತರು ತಲೆ ಮೇಲೆ ಕೈ ಹೊತ್ತು ಕುಳಿತಿದ್ದರು. ಜನ ಗೇಲಿಮಾಡುತ್ತಿದ್ದರು. ಅಷ್ಟರಲ್ಲಿ ಆ ತೇಜಸ್ವಿ ಕನ್ಯೆ ಪ್ರತ್ಯಕ್ಷಳಾದಳು. ಗೋರಖನಾಥ ಮತ್ತು ಅವನ ಶಿಷ್ಯರನ್ನು ಕುಟೀರದಲ್ಲಿ ಕರೆಯಲು ಅವರು ನಕ್ಕು "ಇಷ್ಟು ಜಾಗ ಕುಟೀರದಲ್ಲಿ ಎಲ್ಲಿದೆ. ನಮಗೆ ಹೊರಗೆ ಬಡಿಸಿ" ಎಂದರು. ಆದರೆ ಆ ಕನ್ಯೆ ಒಳಗೆ ಬರಬೇಕೆಂದು ಆಗ್ರಹಮಾಡಲು ಒಬ್ಬೊಬ್ಬರಾಗಿ ೩೬೦ ಜನ ಒಳಗೆ ಬಂದು ಕೂತರು. ಆದರೂ ಇನ್ನೂ ಒಬ್ಬರು ಕೂಡುವಷ್ಟು ಜಾಗ ಉಳಿದಿತ್ತು. ಭೈರವನಿಗೆ ಆಶ್ಚರ್ಯವಾಯಿತು. ಎಲ್ಲರಿಗೂ ಅವರು ಇಷ್ಟ ಪಟ್ಟ ಭೋಜನ ಬಡಿಸಿ ಕನ್ಯೆ ನಕ್ಕಳು. ಭೈರವನ ಬಾರಿ ಬರಲು ಅವನು "ನನಗೆ ಮಾಂಸ, ಮದಿರೆ ಬೇಕು" ಎಂದ. ಆಕೆಗೆ ಸಿಟ್ಟು ಬಂದಿತು. "ಇದು ಶ್ರೀ ವೈಷ್ಣವ ಆಚಾರದ ಶ್ರೀಧರ ಪಂಡಿತರ ಮನೆ. ಈ ಅಪಚಾರ ನೀವು ಎಸಗಬಾರದು" ಎಂದು ಹೇಳಿ ಅಂತರ್ಧಾನವಾದಳು. ಆದರೆ ಭೈರವ ಯೋಗಿ. ಸಿದ್ಧಿಪುರುಷ. ತನ್ನ ಯೋಗಶಕ್ತಿಯಿಂದ ಈ ಕನ್ಯೆ ಗಾಳಿಯಂತೆ ತ್ರಿಕೂಟ ಪರ್ವತದ ಕಡೆ ಹೋದುದನ್ನು ಕಂಡ. ಶ್ರೀ ಗೋರಖನಾಥರ ಅಪ್ಪಣೆ ಪಡೆದು ಆಕೆಯ ಹಿಂದೆ ಬಿದ್ದ. ಆಕೆ ಅರ್ಧ ಕುಮಾರಿಯಲ್ಲಿ ಗುಹೆಯಲ್ಲಿ ಅಡಗಿ ತಪಸ್ಸು ಮಾಡುತ್ತಿರಲು ಯೋಗ ಜ್ಞಾನದಿಂದ ಭೈರವ ಅಲ್ಲಿ ಬಂದು ಅಡಗಿದ.

ಆಕೆ ತ್ರಿಕೂಟ ಪರ್ವತದ ಗುಹೆಯನ್ನು ತ್ರಿಶೂಲದಿಂದ ಭೇದಿಸಿ ಹೊರಗೆ ಬಂದು ಆ ಪರ್ವತದ ತುತ್ತತುದಿಯಲ್ಲಿರುವ ಒಂದು ದೊಡ್ಡ ಗುಹೆಯಲ್ಲಿ ಬಂದು ಅಡಗಿದಳು.

ಅಲ್ಲಿಯೇ ಇದ್ದ ಒಂದು ಕೋತಿಗೆ ಗದೆಯನ್ನು ಕೊಟ್ಟು ಯಾರನ್ನೂ ಒಳಗೆ ಬರಲು ಬಿಡಕೂಡದೆಂದು ಆಜ್ಞೆ ಇತ್ತಳು. ಭೈರವನು ತನ್ನ ಯೋಗ ಶಕ್ತಿಯಿಂದ ಅಲ್ಲಿಗೂ ಬಂದ. ಒಳಗೆ ಹೋಗಲು ಕೋತಿ ಅಡ್ಡಬರಲು ಅದರಿಂದ ಗದೆಯನ್ನೆ ಕಿತ್ತುಕೊಂಡ. ಇನ್ನೇನು ಕೋತಿ ಸೋಲುವ ಸ್ಥಿತಿ ಬಂದಾಗ ಶ್ರೀ ವೈಷ್ಣವದೇವಿ ಕೋಪದಿಂದ ಹೊರಗೆ ಬಂದು ಕತ್ತಿಯಿಂದ ಭೈರವನ ಶಿರಸ್ಸನ್ನು ಕಡಿಯಲು ಅದು ಭೈರವ ಘಾಟಿಯಲ್ಲಿ ಹೋಗಿ ಬಿತ್ತು. ಆದರೆ ಭೈರವ ಸಿದ್ಧಿಪುರುಷ. ಸಾಯಲಿಲ್ಲ. ಮಾತೆಯನ್ನೇ ಭೈರವ ಪ್ರಾರ್ಥಿಸಿದ. ತನಗೆ ಕೆಟ್ಟ ಹೆಸರು ಬರಬಾರದೆಂದು ಈ ಕಳಂಕವನ್ನು ಹೋಗಲಾಡಿಸಬೇಕೆಂದು ಕೇಳಿಕೊಂಡ. ಮಾತೆ ಅವನಿಗೆ ಆಗ ವರವಿತ್ತಳು, "ನನ್ನನ್ನು ಬಂದು ನೋಡುವ ಭಕ್ತರು ನಿನ್ನನ್ನು ಖಂಡಿತ ದರ್ಶನಮಾಡಿ ಆರಾಧಿಸಬೇಕು" ಎಂದು.

ಇಲ್ಲಿ ಶ್ರೀಧರ ಪಂಡಿತ ಉಪವಾಸ ವ್ರತ ಕೈಕೊಂಡು ಪ್ರಾಣ ತ್ಯಜಿಸಲು ಹಟ ಹಿಡಿದ. ಕನ್ಯೆ ಕನಸಿನಲ್ಲಿ ಬಂದು ಶ್ರೀಧರ ಪಂಡಿತನಿಗೆ ತಾನಿರುವ ಸ್ಥಳ ಹೇಳಿದಳು. ಶ್ರೀಧರ ಪಂಡಿತ ತ್ರಿಕೂಟ ಪರ್ವತ ಏರಿ ಬಂದು ಕೊನೆಗೂ ಮಾತೆಯ ಜಾಗ ಕಂಡುಹಿಡಿದು ಸಂತಸದಿಂದ ಪೂಜೆ ಮಾಡಿಕೊಂಡಿದ್ದ. ಆಗ ಮಾತೆ ಅವನಿಗೆ ಆರು ಗಂಡು ಮಕ್ಕಳಾಗುವಂತೆ ವರ ನೀಡಿದಳು."ಯುಗ ಯುಗಗಳವರೆಗೆ ನಿನ್ನ ವಂಶಸ್ಥರು ನನ್ನನ್ನು ಆರಾಧಿಸಿ ಸಕಲ ಸಂಪದ್ಯುಕ್ತರಾಗಿ ಜೀವನ ನಡೆಸಲಿ" ಎಂದು ಹರಿಸಿದಳು ಎಂಬ ಕಥೆ ಈ ಭಾಗದಲ್ಲಿ ಪ್ರಚಲಿತವಾಗಿದೆ.

ಶ್ರೀಧರ ಪಂಡಿತನಿಂದ ಶೋಧವಾದ ಈ ಗುಹೆಯಲ್ಲಿ ಶ್ರೀ ವೈಷ್ಣವ ದೇವಿಯ ಮಂದಿರಕ್ಕೆ ಉತ್ತರ ಭಾರತದವರು ಆಗಾಗ ಬರುತ್ತಿರುತ್ತಿರುತ್ತಾರೆ.

✡



# ಆ ಸಂಜೆ

ಮೂಲ : ಎಚ್. ಎಚ್. ಮನ್ರೋ
ಕನ್ನಡಕ್ಕೆ : ಕೆ. ಎಲ್. ವಿದ್ಯಾಗೌರಿ

ನಾರ್ಮನ್ ಗೋರ್‌ಬೀ ಪಾರ್ಕಿನ ಒಂದು ಬೆಂಚಿನ ಮೇಲೆ ಕುಳಿತಿದ್ದ. ಹೈಡ್‌ಪಾರ್ಕ್ ಅವನು ಕುಳಿತಲ್ಲಿಂದ ಕಾಣುತ್ತಿತ್ತು. ಅಲ್ಲಿನ ವಾಹನಗಳ, ಜನಗಳ ಗಲಾಟೆ ಅವನಿಗೂ ಕೇಳಿಸುತ್ತಿತ್ತು. ಆಗ ಸಂಜೆ ಆರು ಗಂಟೆಯ ಸಮಯ. ಸಂಜೆಗತ್ತಲು ಆಗಲೇ ಮುಸುಕುತ್ತಿತ್ತು. ಜನಗಳ ಓಡಾಟ ಅಷ್ಟು ಇರದಿದ್ದರೂ ಅಲ್ಲೊಬ್ಬರು ಇಲ್ಲೊಬ್ಬರು ಬೀದಿ ದೀಪದ ಬೆಳಕಲ್ಲಿ ಓಡಾಡುತ್ತಿದ್ದರು. ಗೋರ್‌ಬೀ ತರಹ ಎಷ್ಟೋ ಜನ ಆ ಪಾರ್ಕಿನ ಬೆಂಚುಗಳ ಮೇಲೆ ಕುಳಿತಿದ್ದರು.

ಗೋರ್‌ಬೀಗೆ ಈ ಮುಚ್ಚಂಜೆ ಎಂದರೆ ಏನೋ ಇಷ್ಟ. ಈ ವೇಳೆಯನ್ನು ಅವನು ಹೇಡಿಗಳ ಸಮಯ ಎಂದು ಕರೆಯುತ್ತಿದ್ದ. ಜೀವನದಲ್ಲಿ ಸೋತ ಎಷ್ಟೋ ಜನರು ಹೊರಬಂದು, ದುಃಖದಿಂದ ಪ್ರಪಂಚವನ್ನು ನೋಡುತ್ತಿದ್ದ ವೇಳೆ ಇದಾಗಿತ್ತು ಗೋರ್‌ಬೀಗೆ. ದೂರದಲ್ಲಿ ಹೊಳೆಯುತ್ತಿದ್ದ ರಸ್ತೆಯ ದೀಪಗಳು ಹಾಗೂ ಪಾರ್ಕಿನಲ್ಲಿ ಮುಸುಕುತ್ತಿದ್ದ ಕತ್ತಲೆ ಗೋರ್‌ಬೀಯನ್ನು ಏನೇನೋ ಯೋಚನೆಗೆ ದಾರಿಮಾಡಿಕೊಟ್ಟವು. ಹಾಗೆಂದು ಗೋರ್‌ಬೀ ಏನೂ ತುಂಬಾ ದುಃಖಿಯಲ್ಲ; ಆದರೆ ಜೀವನದಲ್ಲಿ ಬೇಕಾದಷ್ಟು ಪೆಟ್ಟುಗಳನ್ನು ತಿಂದಿದ್ದ.

ಪಾರ್ಕಿನ ಬೆಂಚಿನ ಮೇಲೆ ಗೋರ್‌ಬೀಯ ಪಕ್ಕದಲ್ಲೇ ಒಬ್ಬ ಮುದುಕ ಕುಳಿತಿದ್ದ. ಅವನೇನೂ ಅಂತಹ ಬಡವನಾಗಿರಲಿಲ್ಲ. ಆದರೂ ಆತನತ್ತ ಯಾರಿಗೂ ಈ ಪ್ರಪಂಚದಲ್ಲಿ ಹೆಚ್ಚು ಗಮನ ಕೊಡಲಾಗುತ್ತಿರಲಿಲ್ಲ. ಆ ಮುದುಕ ಹೊರಡಲು ಎದ್ದು ನಿಂತಾಗ, ಗೋರ್‌ಬೀ ಆತನ ಮನೆ ಹೇಗಿರಬಹುದೆಂದು ಯೋಚಿಸತೊಡಗಿದ. ಬಹುಶಃ ಅಲ್ಲಿ ಯಾರೂ ಅವನನ್ನು ಗಣನೆಗೇ ತೆಗೆದುಕೊಳ್ಳುತ್ತಿರಲಿಲ್ಲವೇನೋ, ಅಥವಾ ಆತ ಯಾವುದಾದರೂ ಒಂದು ಹೊಟೇಲಿನಲ್ಲಿ ಬಿಲ್ ಕೊಡಲಾಗದೇ ಕಷ್ಟದಿಂದ ಜೀವಿಸುತ್ತಿರಬಹುದೆಂದು ಗೋರ್‌ಬೀ ಯೋಚಿಸತೊಡಗಿದ. ಆ ಮುದುಕ ಎದ್ದು ಹೋಗುತ್ತಿದ್ದಂತೆಯೇ ಇನ್ನೊಬ್ಬ ವ್ಯಕ್ತಿ ಬಂದು ಅದೇ ಸ್ಥಳದಲ್ಲಿ ಕುಳಿತ. ಈ ವ್ಯಕ್ತಿ ಯುವಕನಾಗಿದ್ದ. ಆದರೆ ಮೊದಲಿನ ಮುದುಕನಷ್ಟೇ ಸಪ್ಪೆ ಮುಖ ಮಾಡಿಕೊಂಡಿದ್ದ. ಅಲ್ಲದೆ, ಬೆಂಚಿನ ಮೇಲೆ ಕುಳಿತುಕೊಳ್ಳುವಾಗಲೇ ಆತ ಕೋಪಗೊಂಡಂತೆ ಗೋರ್‌ಬೀಗೆ ತೋರಿತು.

"ತಾವು ಬಹಳ ಕೋಪದಿಂದ ಇರುವಂತಿದೆಯಲ್ಲಾ?" ಎಂದ ಮೆಲ್ಲಗೆ ಗೋರ್‌ಬಿ ಆ ಯುವಕನನ್ನು ನೋಡಿ.

ಆ ಯುವಕ ಅದನ್ನೇ ಕಾದಿದ್ದಂತೆ ಇವನತ್ತ ತಿರುಗಿ, ಇವನನ್ನೇ ದಿಟ್ಟಿಸಿ ನೋಡಿದ. ಗೋರ್‌ಬಿ ತಕ್ಷಣ ಹುಷಾರಾದ.

"ಸ್ವಾಮಿ, ನಾನು ಸಿಕ್ಕಿರುವಂಥ ಪೇಚಿಗೆ ನೀವೂ ಸಿಕ್ಕಿದ್ದರೆ, ನೀವೂ ನನ್ನ ಹಾಗೇ ಇರುತ್ತಿದ್ದಿರಿ. ನಾನು ಎಂಥ ಪೆದ್ದು ಕೆಲಸ ಮಾಡಿದ್ದೇನೆಂದರೆ..." ಎಂದ ಯುವಕ ತಾನು ಹೇಳುವುದನ್ನು ಗೋರ್‌ಬಿ ಕೇಳಿಸಿಕೊಳ್ಳುತ್ತಿದ್ದಾನೋ ಇಲ್ಲವೋ ಎಂದು ಖಚಿತಪಡಿಸಿಕೊಂಡು ಮತ್ತೆ "ನಾನು ಇವತ್ತು ಮಧ್ಯಾಹ್ನ ಈ ಊರಿಗೆ ಬಂದೆ. ಪೆನ್‌ಟಗನ್ ಹೋಟೇಲ್‌ನಲ್ಲಿ ಇರಬೇಕೆಂದು-ಕೊಂಡು ಅಲ್ಲಿಗೆ ಹೋದಾಗ, ಅದನ್ನು ಕೆಡವಿಬಿಟ್ಟು ಒಂದು ಸಿನೆಮಾ ಮಂದಿರ ಕಟ್ಟಿರುವುದು ನನಗೆ ತಿಳಿಯಿತು. ಸರಿ, ನಾನು ಬಂದ ಟ್ಯಾಕ್ಸಿ ಡ್ರೈವರ್ ಇನ್ನೊಂದು ಯಾವುದೋ ಹೋಟೇಲ್‌ಗೆ ನನ್ನನ್ನು ಕರೆದುಕೊಂಡು ಹೋದ. ಅಲ್ಲಿಗೆ ಹೋದ ತಕ್ಷಣ, ಅಂಗಡಿಯಿಂದ ಒಂದು ಸೋಪ್ ಕೊಳ್ಳಲು ಹೊರಟೆ. ಹೋಟೇಲ್‌ನ ಸೋಪನ್ನು ಉಪಯೋಗಿಸಲು ನನಗೆ ಇಷ್ಟವಿಲ್ಲ ನೋಡಿ. ಸರಿ, ಹಾಗೇ ಹೋದವನ ಅಲ್ಲಿ ಇಲ್ಲಿ ಸುತ್ತಾಡಿ ಒಂದು ಬಾರ್‌ಗೂ ನುಗ್ಗಿದೆ. ಇನ್ನೂ ಕೆಲವು ಅಂಗಡಿಗಳನ್ನು ನೋಡಿಕೊಂಡು ಇನ್ನೇನು ಹೊಟೇಲ್‌ಗೆ ಬರಬೇಕು ಎಂದುಕೊಳ್ಳುತ್ತಿದ್ದಂತೆಯೇ ನಾನು ಆ ಹೊಟೇಲ್‌ನ ಹೆಸರನ್ನು ಮರೆತುಬಿಟ್ಟಿದ್ದೆ; ಅಲ್ಲದೆ ಅದು ಯಾವ ಬೀದಿಯಲ್ಲಿದೆ ಎಂಬುದೂ ನನಗೆ ಸರಿಯಾಗಿ ತಿಳಿದಿರಲಿಲ್ಲ. ಲಂಡನ್ನಿನಂಥ ದೊಡ್ಡ ನಗರದಲ್ಲಿ ಹೊಸಬನಾದ ನನ್ನದು ನಿಜವಾಗಿಯೂ ವಿಚಿತ್ರವಾದ ಪ್ರಸಂಗವಾಗಿದೆ. ನನಗೆ ಇಲ್ಲಿ ಯಾರೂ ಇಲ್ಲ. ನನ್ನ ಮನೆಯವರಿಗೆ ನಾನು ಒಂದು ತಾರು ಕಳುಹಿಸಬಹುದಾದರೂ, ನನ್ನಲ್ಲಿದ್ದ ಸ್ವಲ್ಪವೇ ಹಣವನ್ನು ಆಗಲೇ ಸೋಪ್‌ಗೆ ಖರ್ಚುಮಾಡಿಬಿಟ್ಟಿದ್ದೇನೆ. ಈಗ ನನ್ನಲ್ಲಿ ಏನೂ ಇಲ್ಲ, ನಾನು ಹೊಟೇಲ್‌ಗೆ ಹೋಗುವ ಬಗೆ ಹೇಗೆ?" ಎಂದು ಹೇಳಿ ಆತ ಸುಮ್ಮನಾದ. ಕೆಲಕಾಲದ ನಂತರ ಆತನೇ ಮತ್ತೆ "ನಾನು ಹೇಳಿದ್ದನ್ನು ನೀವು ಕಟ್ಟುಕಥೆ ಎಂದು ತಿಳಿಯುವುದರಲ್ಲಿ ಸಂದೇಹವೇ ಇಲ್ಲ



ಅಲ್ಲವೆ?" ಎಂದ ಗೋರ್‌ಬಿಯನ್ನು ನೋಡುತ್ತಾ.

"ಖಂಡಿತ ಇಲ್ಲ. ಇಂಥದೇ ಒಂದು ಪೇಚಿನಲ್ಲಿ ನಾನೂ ಒಮ್ಮೆ ಸಿಕ್ಕಿಕೊಂಡಿದ್ದೆ. ಆದರೆ ನಾನು ಇದ್ದ ಹೊಟೇಲ್ ಒಂದು ಸೇತುವೆಯ ಮೇಲೆ ಇತ್ತು ಎಂಬುದು ನನಗೆ ಜ್ಞಾಪಕವಿದ್ದುದರಿಂದ ಹೇಗೋ ವಾಪಸ್ ಬಂದೆ." ಎಂದ ಗೋರ್‌ಬಿ.

ಇದನ್ನು ಕೇಳುತ್ತಿದ್ದಂತೆಯೇ ಆ ಯುವಕನ ಮುಖಕ್ಕೆ ಸ್ವಲ್ಪ ಕಳೆ ಬಂದಿತು. "ಬೇರೇ ದೇಶದಲ್ಲಿ ಹೀಗಾದರೆ ಪರವಾಗಿಲ್ಲ. ಅಲ್ಲಿನ ರಾಯಭಾರಿ ಕಛೇರಿಗೆ ಹೋಗಿ ಸಹಾಯ ಪಡೆಯಬಹುದು. ಆದರೆ ನಮ್ಮದೇ ದೇಶದಲ್ಲಾದರೆ ಕಷ್ಟ ನೋಡಿ. ಯಾರಾದರೂ ನಾವು ಹೇಳಿದ್ದನ್ನು ನಂಬಿ ಸ್ವಲ್ಪ ಹಣ ಕೊಟ್ಟರೆ ಸರಿ. ಇಲ್ಲದಿದ್ದರೆ ಬೀದಿಯೇ ಗತಿ. ಸದ್ಯ ನೀವಾದರೂ ನನ್ನ ಕಥೆಯನ್ನು ನಂಬಿದ್ದೀರಲ್ಲಾ ಅಷ್ಟೇ ಸಾಕು." ಕೊನೆಯ ವಾಕ್ಯವನ್ನು ಹೇಳುವಾಗ ಆತ ಅತ್ಯಂತ ಸ್ನೇಹಪೂರ್ಣ ದೃಷ್ಟಿಯಿಂದ ಗೋರ್‌ಬೀಯನ್ನು ನೋಡುತ್ತಾ, ತಾನು ಕೊಟ್ಟ ಸುಳಿವು ಅವನಿಗೆ ತಿಳಿಯಿತೋ ಇಲ್ಲವೋ ಎಂದು ಕಾಯುತ್ತಾ ನಿಂತ.

"ಅದು ಸರಿ. ಆದರೆ ನಿಮ್ಮ ಕಥೆ ನಿಜವೆನಿಸಬೇಕಾದರೆ ನೀವು ಕೊಂಡ ಸೋಪ್ ತೋರಿಸಬೇಕಲ್ಲಾ" ಗೋರ್‌ಬಿ ಕೇಳಿದ. ತಕ್ಷಣ ಆ ಯುವಕ ಎದ್ದು ನಿಂತು ತನ್ನ ಜೇಬುಗಳಲ್ಲಿ ತಡಕಾಡತೊಡಗಿದ. "ಓ, ಅದನ್ನು ನಾನು ಕಳೆದುಕೊಂಡಿರಬೇಕು" ಎಂದು ಪೆಚ್ಚು ಮುಖ ಹಾಕಿಕೊಂಡು ಎದ್ದು ಹೊರಟೇಬಿಟ್ಟ.

"ಹೊಟೇಲಿನ ಹೆಸರು ಮರೆಯುವುದಲ್ಲದೇ, ಸೋಪ್‌ನೂ ನಿಜವಾಗಿಯೂ ತಮಾಷೆ. ಅವನು ಒಂದು ಹೊಸಾ ಸೋಪನ್ನೂ ಕೊಂಡು ತಂದು ಬಿಟ್ಟಿದ್ದರೆ, ಅವನ ಕಥೆ ನಿಜವಾಗಿಯೂ ನಂಬುವಂತೆಯೇ ಇತ್ತು, ಪರವಾಗಿಲ್ಲ" ಎಂದುಕೊಂಡ ಗೋರ್‌ಬಿ. ಹಾಗೇ ಸುತ್ತಾಡೋಣವೆಂದು ಗೋರ್‌ಬಿ ಎದ್ದು ನಿಂತಾಗ, ಅಲ್ಲಿಯೇ ಬೆಂಚಿನ ಕೆಳಗೆ ಒಂದು ಹೊಸಾ ಸೋಪ್ ಬಿದ್ದಿದ್ದು ಕಾಣಿಸಿತು. ಅದು ಆಗ ತಾನೇ ಅಂಗಡಿಯಿಂದ ತಂದದ್ದಾಗಿತ್ತು. ಆ ಯುವಕನ ಜೇಬಿನಿಂದ ಬಿದ್ದದ್ದಿರಬೇಕು: ತಕ್ಷಣ ಅದನ್ನು ಎತ್ತಿಕೊಂಡ ಗೋರ್‌ಬಿ ಆ ಯುವಕ ನಡೆದುಹೋದ ದಿಕ್ಕಿಗೇ ಓಡಿದ. ಕತ್ತಲಲ್ಲಿ ಸುಮಾರು ದೂರ ಹೋದ ಮೇಲೆ ಆ ಯುವಕ ಮುಂದೆ ನಡೆಯುತ್ತಿರುವುದು ಕಾಣಿಸಿತು. ಓಡುತ್ತಾ ಅವನನ್ನು ಸಮೀಪಿಸಿದ ಗೋರ್‌ಬಿ ಅವನ ಬೆನ್ನನ್ನು ತಟ್ಟಿದ.

"ನಿಮ್ಮ ಕಥೆಯು ನಿಜವೆನ್ನುವುದಕ್ಕೆ ಬೇಕಿದ್ದ ಸಾಕ್ಷಿ ನೋಡಿ, ಅಲ್ಲೇ ಬೆಂಚಿನ ಕೆಳಗೆ ಬಿದ್ದಿತ್ತು. ನಿಮ್ಮ ಜೇಬಿನಿಂದ ಬಿದ್ದಿರಬೇಕು. ನೀವು ಹೋದ ಮೇಲೆ ನಾನು ನೋಡಿದೆ. ನಿಮ್ಮ ಕಥೆಯನ್ನು ನಾನು ನಂಬದಿದ್ದುದಕ್ಕೆ ನನ್ನ ಕ್ಷಮಿಸಿ. ಈಗಂತೂ ನಾನು ನಿಮ್ಮನ್ನು ಖಂಡಿತ ನಂಬುತ್ತೇನೆ. ತೆಗೆದುಕೊಳ್ಳಿ ಈ ಹಣ... ಒಂದು ಸಾವಿರ ಇವೆ... ಸಾಕಾಗುತ್ತಲ್ಲವೆ? ಹಾಗೇ ಇದು ನನ್ನ ವಿಳಾಸ. ಈ ವಾರದಲ್ಲಿ ಯಾವಾಗಲಾದರೂ ಹಿಂದೆ ಕೊಟ್ಟರೆ ಸಾಕು. ಹಾಗೇ, ಈ ಸೋಪ್‌ನೂ ತೆಗೆದುಕೊಳ್ಳಿ. ಇದು ನಿಮಗೆ ಇವತ್ತು ಬಹಳ ಸಹಾಯ ಮಾಡಿದೆ, ಬರುತ್ತೇನೆ" ಎಂದು ಗೋರ್‌ಬಿ ತಾನು ಬಂದ ದಾರಿಯಲ್ಲೇ ಹಿಂತಿರುಗಿದ.

"ಪಾಪ, ಆ ಯುವಕ ಇನ್ನೇನು ಅತ್ತೇ ಬಿಡುತ್ತಿದ್ದನೇನೋ ಇರಲಿ. ಇನ್ನು ಮೇಲಾದರೂ ನಾನು ಜನಗಳ ಜೊತೆ ಅಷ್ಟು ಕಠಿಣವಾಗಿರಬಾರದು" ಎಂದುಕೊಳ್ಳುತ್ತಾ ಗೋರ್‌ಬಿ ತಾನು ಕುಳಿತ್ತಿದ್ದ ಬೆಂಚಿನತ್ತಲೇ ಬಂದ. ಅಲ್ಲಿಗೆ ಬಂದಾಗ ತನ್ನ ಜೊತೆ ಮೊದಲು ಕುಳಿತಿದ್ದ ಮುದುಕ ಅಲ್ಲಿ ಏನನ್ನೋ ಹುಡುಕುತ್ತಿರುವುದು ಕಾಣಿಸಿತು.

"ಏನು ಸ್ವಾಮಿ ಏನಾದರೂ ಕಳೆದುಕೊಂಡಿರಾ?" ಗೋರ್‌ಬಿ ಆ ಮುದುಕನನ್ನು ಕೇಳಿದ.

"ಹೌದು ಸ್ವಾಮಿ ಒಂದು ಹೊಸಾ ಸೋಪ್ ಇಲ್ಲೆಲ್ಲೋ ಬಿದ್ದು ಕಳೆದು ಹೋಗಿದೆ" ಎಂದ ಆ ಮುದುಕ. ✡

# ನಿಮ್ಮ ನಡೆ-ನುಡಿ ಹೇಗೆ ?

ಕೆ. ಮಾಧವಾಚಾರ್ಯ

ಈ ವಿಷಯಗಳನ್ನು ನೀವು ಗಮನಿಸಿದ್ದೀರಾ? ದಿನನಿತ್ಯದ ಚಟುವಟಿಕೆಗಳಲ್ಲಿ ನಿಮ್ಮ ವ್ಯಕ್ತಿತ್ವವನ್ನು ಮೂರನೆಯವನ ಮನಸ್ಸಿನಲ್ಲಿ ಚಿತ್ರಿಸುವ ನಡೆನುಡಿಗಳನ್ನು? ನಮಗರಿವಿಲ್ಲದೆಯೇ ನಮ್ಮತನವನ್ನು ತೋರ್ಪಡಿಸುವ ನಮ್ಮ ಚಟುವಟಿಕೆಗಳಿವು. ಓದಿ, ಮರುಯೋಚನೆ ನೀಡಿ, ನಿಮ್ಮಲ್ಲಿ ಅಳವಳಿಸಿಕೊಂಡರೆ ನಿಮ್ಮ ವ್ಯಕ್ತಿತ್ವವನ್ನು ಉತ್ತಮವಾಗಿಸುವುದರಲ್ಲಿ ಖಂಡಿತ ಸಹಾಯವಾಗದಿರದು.

೧. ನೀವೊಬ್ಬರೇ ದಾರಿಯಲ್ಲಿ ನಡೆಯುತ್ತಿರಬೇಕಾದರೆ ಬೆನ್ನಹಿಂದೆ ಯಾರೋ 'ರೀ ಮಿಸ್ಟರ್' ಅಥವಾ 'ಲೋ ಮಗನೇ' ಎಂದು ಅಥವಾ ಚಪ್ಪಾಳೆ ಹೊಡೆದು ಕರೆದಂತಾಯಿತೇ? ನೀವು ಹಿಂದಿರುಗಿ ನೋಡಿದಿರಾ? ಛೇ ತಪ್ಪಿದಿರಿ! ಎಷ್ಟೋ ಜನ ಇದೇ ತಪ್ಪು ಮಾಡುತ್ತಾರೆ. ಈ ರೀತಿ ಆದಾಗ ಸಾಮಾನ್ಯವಾಗಿ ವ್ಯಕ್ತಿಯ ಮನಸ್ಸಿಗೆ ತನ್ನನ್ನೇ ಕರೆದಂತೆನಿಸುತ್ತದೆ. ಆದರೆ ಹಿಂತಿರುಗಿ ಕರೆದ ವ್ಯಕ್ತಿಯನ್ನು ನೋಡಿದಾಗ, ತಮಗಲ್ಲವೆಂದು ತಿಳಿದು ಪೆಚ್ಚಾಗುತ್ತದೆ. ನಾವು ಅಗ್ಗವಾಗುವ ಸಾಧ್ಯತೆಗಳಿವೆ.

ಇದನ್ನು ತಪ್ಪಿಸುವುದು ತೀರಾ ಸುಲಭ. ನಮ್ಮನ್ನು ಯಾರು ಕರೆಯುತ್ತಾರೆ? ನಮ್ಮ ಪರಿಚಯವಿರುವವರು ಮಾತ್ರ ತಾನೇ? ಅವರಿಗಂತೂ ನಮ್ಮ ಹೆಸರು ಗೊತ್ತೇ ಇರುತ್ತದೆ. ಯಾರಾದರೂ ನಮ್ಮ ಹೆಸರು ಹಿಡಿದು ಕೂಗಿದ ಹೊರತು ಹಿಂತಿರುಗಿ ನೋಡಲು ಬಾರದು. ಹೆಸರಿನಿಂದ ಕೂಗಿದರೆ ಖಂಡಿತಾ ನಮಗೇ ತಾನೇ.

೨. ರಸ್ತೆಯಲ್ಲಿ ನಡೆಯಬೇಕಾದರೆ ಥಕ್ಕನೆ ಉಗಿದಿರಾ? ಅದಕ್ಕಿಂತ ಒಂದು ಕ್ಷಣ ಮೊದಲು ನಿಮ್ಮ ಕಣ್ಣುಗಳು ಯಾರೋ ಎದುರಿನಿಂದ ಬರುವವರ ಕಣ್ಣುಗಳನ್ನು ಸಂಧಿಸಿದ್ದಿರಬಹುದು. ಆಗ ನೀವು ಉಗಿದಿರಾದರೆ ನಿಮ್ಮ ಬಗ್ಗೆ ಅವರಲ್ಲಿ ತಿರಸ್ಕಾರ ಭಾವನೆ ಮೂಡುವ ಸಾಧ್ಯತೆಗಳಿವೆ. ಏನು ಈ ರೀತಿ ಮುಖ ನೋಡಿದಾಕ್ಷಣ ಉಗಿಯುತ್ತಾನಲ್ಲ ಎಂಬ ತಾತ್ಸಾರ ಭಾವನೆ ಬೆಳೆಯಬಹುದು. ನೀವು ಸಹಜವಾಗಿ ಆ ರೀತಿ ಮಾಡಿದ್ದರೂ ಆ ಕ್ರಿಯೆ ಬೇರೊಂದು ಅರ್ಥವನ್ನು ಕಲ್ಪಿಸಬಹುದು. ಇದನ್ನು ಬಹು ಮಟ್ಟಿಗೆ ತಪ್ಪಿಸಬಹುದಲ್ಲವೇ?

೩. ಹುಡುಗಿಯರ ವಿಷಯ ಎಂದ ಮೇಲೆ ಬಹಳ ನಾಜೂಕಾದದ್ದು. ಬಸ್ಸಿನಲ್ಲಿರಬೇಕಾದರೋ ಹೋಟೆಲ್ಲಿನಲ್ಲಿರಬೇಕಾದರೋ ಅಥವಾ ನಡೆಯುತ್ತಿರಬೇಕಾದರೋ ನೀರೆಯರು ನಿಮ್ಮ ಮುಂದೆ ಚಲಿಸಬಹುದು. ಇದಕ್ಕೆ ಸಾಮಾನ್ಯ ಪ್ರತಿಕ್ರಿಯೆ ಎಂದರೆ ಸುತ್ತ ಇದ್ದವರೆಲ್ಲರ ಕಣ್ಣುಗಳು ಆಕೆಯತ್ತ ದಾಳಿಯಿಡು-ವುದು. ನೀವು ಕೂಡಾ ಸಹಜ ಚಪಲತೆಯಿಂದ ಆ ಬಿಂಕಗಾತಿಯನ್ನು ನೋಡಿಬಿಟ್ಟರೋ, ನೀವೂ

ಅಗ್ಗವಾದಿರಿ. ಅಂತಹ ಸಂದರ್ಭದಲ್ಲಿ ಆಕೆ ಯಾರನ್ನೂ ಎದುರಿಸದೆ ಬಿಂಕದಿಂದ ನಡೆಯುವ ಸಂಭವವೇ ಹೆಚ್ಚು. ಕದಲದೆ ಗಂಭೀರ ರಾಗಿರುವವರಿಗೇನೇ ಮರ್ಯಾದೆ! ಇನ್ನು ಆಕೆಯು ಒಬ್ಬಳಿದ್ದು, ನೀವು ಒಬ್ಬರಾಗಿದ್ದರೆ ಕಣ್ಣುಗಳ ಮಿಲನದ ಚಾನ್ಸ್‌ಗಾಗಿ ಹಾತೊರೆಯ ಬಹುದು.

೪. ಇದೀಗ ಚಿಲ್ಲರೆ ವಿಷಯ. ನಾಲಿಗೆ ಕಡ್ಡಿ ಖರೀದಿಸುವಿರಿ. ನಿಮಗೆ ಅದರ ಬೆಲೆಯು ಅಂದಾ-ಜಿಲ್ಲ. ಬೆಲೆ ಕೇಳುವುದು ಅಂತಸ್ತಿಗೆ ತಕ್ಕದ್ದಲ್ಲ ಎಂದು ಭಾವಿಸಿದರೆ ತಪ್ಪೇನಿಲ್ಲ! ನಾವಾಗೇ ಕೊಟ್ಟ ಎಂಟಾಣೆ ಬಿಲ್ಲೆ ಕಡಿಮೆಯಾದರೆ ಮುಖಭಂಗ. ಆಗ ಅಂಗಡಿಯಾತನದು ಮೇಲುಗೈಯಾಗ ಬಹುದು. ಅದರ ಬದಲು ಎರಡು ರೂಪಾಯಿಯ ನೋಟು ಕೊಟ್ಟು ಚಿಲ್ಲರೆ ಮರಳಿ ಪಡೆಯುವುದು ಒಳಿತು. ಅದರ ಬೆಲೆ ಎರಡು ರೂಪಾಯಿಗೆ ಮೀರದೆಂದು ಖಂಡಿತಾ ಗೊತ್ತು. ಆತ ಇನ್ನೂ ಜಾಸ್ತಿ ಕೇಳಿದರೆ ನಾವು ದಬಾಯಿಸಬಹುದು. ಆಗ ನಮ್ಮದೆ ಮೇಲುಗೈ!

೫. ನೀವು ಯಾವ ರೀತಿ ಡ್ರೆಸ್ ಮಾಡಿಕೊಳ್ಳು ವಿರಿ? ಅದೇನೇ ಇದ್ದರೂ ಈ ಕೆಳಗಿನ ಮಾತುಗ ಳನ್ನು ಗಮನದಲ್ಲಿಟ್ಟುಕೊಂಡು ಡ್ರೆಸ್ ಮಾಡಿ ಕೊಂಡರೆ ಒಳಿತಾಗಬಹುದು.

ನೀವು ಆಫೀಸಿಗೆ, ಕ್ಲಬ್‌ಗಳಿಗೆ, ಸಭೆಗಳಿಗೆ, ಔತಣ ಕೂಟಗಳಿಗೆ ಅಥವಾ ನಿಮಗಿಂತ ಮೇಲಿನ ಸ್ತರದವರ ಕಡೆಗೆ ಹೋಗುವವರಿದ್ದರೆ ನಿಮ್ಮಲ್ಲಿ ಇರುವ ಪೈಕಿಯ ಉತ್ತಮ ಬಟ್ಟೆಗಳನ್ನು ಧರಿಸಿ-ದರೆ ಒಳ್ಳೆಯದು. ಆದರೆ ಪರಸ್ಥಳಗಳಿಗೆ, ಹಳ್ಳಿಗಳಿಗೆ ಅಥವಾ ನಿಮಗಿಂತ ಕೆಳಗಿನವರೊಡನೆ ಖಾಸಗಿಯಾಗಿ ವ್ಯವಹರಿಸುವಾಗ ಸಾಧಾರಣ ವಾಗಿ, ಸರಳವಾಗಿ ಡ್ರೆಸ್ ಮಾಡಿಕೊಂಡರೆ ಒಳಿತು. ಇದು ನಿಮ್ಮ ಕೆಲಸದ ಪೂರೈಕೆಗೆ ಸಹಾಯವಾಗುತ್ತದೆ ಹಾಗೂ ಇಲ್ಲಿ ಕೂಡಾ ನೀವು ಒಳ್ಳೆಯ ಪ್ರಭಾವವನ್ನು ಬೀರಬಹುದು.

೬. ಬಸ್ಸಿನಲ್ಲಿ ಪ್ರಯಾಣಿಸುತ್ತಿರಬೇಕಾದರೆ ಇಳಿಯುವ ಜಾಗ ಬಂತೆ? ಕಂಡಕ್ಟರ್ ನಿಮಗಿಂತ ಮುಂದೆ ಇದ್ದಾನೆಯೇ? ಹಾಗಿದ್ದರೆ ಏನು ಮಾಡುವುದೆಂದು ಕಾಣದೆ ಸುಮ್ಮನಿರಬೇಡಿ. ಅಥವಾ ಬಾರದ ಶಿಳ್ಳೆಗೆ ಪ್ರಯತ್ನಪಡಬೇಡಿ! ಆದರೆ ನಿಮ್ಮ ಜೋರಾದ ಸ್ವರದ ಬಗ್ಗೆ ಅನುಮಾನ ಪಡದೆ 'ಹೋಲ್ಡಾನ್' ಎಂದು ಕಿರುಚಿ! ಕೂಡಲೆ ಬಸ್ ನಿಲ್ಲುತ್ತದೆ. ಜನ ಎಲ್ಲಾ ನಿಮ್ಮ ಕಡೆ ನೋಡಿದರೂ ಮನಸ್ಸಿನಲ್ಲಿ ನಿಮ್ಮ ಧೈರ್ಯವನ್ನು ಮೆಚ್ಚುತ್ತಾರೆ. ನಿಮ್ಮ ಕೆಲಸವೂ ಆಗುತ್ತದೆ. ಇದನ್ನು ಒಂದು ಸಲ ಮಾಡಿ ನೋಡಿ (ಅಂದರೆ ಕಂಡಕ್ಟರ್ ಸೀಟಿ ಹೊಡೆಯದಿದ್ದರೆ ಮಾತ್ರ. ಇಲ್ಲದಿದ್ದರೆ ನೀವು 'ಹೀರೋ' ಹೋಗಿ 'ಜೀರೋ' ಆಗುವಿರಿ!)

೭. ನೀವೊಬ್ಬರೆ ನಡೆದುಕೊಂಡು ಹೋಗುತ್ತಿದ್ದೀರಾ? ಹಾಗಾದರೆ ಆದಷ್ಟು ಮಟ್ಟಿಗೆ ಸುತ್ತ ಮುತ್ತ ನೋಡದೆ ದೃಷ್ಟಿಯನ್ನು ದಾರಿಯಲ್ಲಿ ಕೇಂದ್ರೀಕರಿಸಿ ನಡೆಯಿರಿ. ಇಲ್ಲದಿದ್ದರೆ ನೀವು ಅಕ್ಕ ಪಕ್ಕದಲ್ಲಿರುವ, ನಡೆದಾಡುವ ನೂರಾರು ಜನರ ದೃಷ್ಟಿಯಿರಿತವನ್ನು ಅನುಭವಿಸಿ ಮಾನಸಿಕ ವಾಗಿ ಅಸ್ವಸ್ಥರಾಗಬಹುದು. ಮೇಲೆ ಹೇಳಿದಂತೆ ಗಂಭೀರವಾಗಿ ನಡೆಯುವುದರಿಂದ ಈ ಅನಗತ್ಯ ಶ್ರಮವನ್ನು ತಪ್ಪಿಸಬಹುದು.

ಹಾಗಲ್ಲದೆ ನೀವು ಗೆಳೆಯರೊಂದಿಗೆ ಅಥವಾ ಗುಂಪಿನೊಂದಿಗಿದ್ದಿರೋ? ಈಗ ಎದೆಯುಬ್ಬಿಸಿ, ಕೈ ಬೀಸುತ್ತ ಅತ್ತಿತ್ತ ನೋಡುತ್ತಾ, ಮಾತನಾಡುತ್ತಾ, ನಗುತ್ತಾ ನಡೆಯಿರಿ. ಇದು ಗುಂಪಿನ ನಡುವೆ ನಿಮ್ಮ ಅಸ್ತಿತ್ವವನ್ನು ಎತ್ತಿ ತೋರಿಸುತ್ತದೆ. ನೋಡುವವರ ದೃಷ್ಟಿಯಲ್ಲಿ ನಿಮ್ಮ ಬಗೆಗೆ ಗೌರವ ಹೆಚ್ಚಾಗುತ್ತದೆ.

ಮೇಲಿನ ವಿಷಯಗಳನ್ನು ಗಮನದಲ್ಲಿಟ್ಟು ಕೊಂಡು ವ್ಯವಹರಿಸಿದರೆ. ನಿಮ್ಮ ಬದಲಾದ ವ್ಯಕ್ತಿತ್ವಕ್ಕೆ ಖಂಡಿತಾ ಒಳ್ಳೆಯ ಪ್ರತಿಕ್ರಿಯೆ ಯನ್ನು ನಿರೀಕ್ಷಿಸಬಹುದು. ●



ಆಶ್ಚರ್ಯ ಹುಟ್ಟಿಸುವ
ಅಡ್ಡಹೆಸರುಗಳ ಹಿನ್ನೆಲೆ

# ನಾಮ ವೈಶಿಷ್ಟ್ಯ

ಶಂ. ಬಾ. ಮುನಗೋಳಿ

ಮಾನವ ಪ್ರಾಣಿಯನ್ನು ಗುರುತಿಸುವದಕ್ಕಾಗಿ ಶಿಶುವು ಜನ್ಮತಳೆದ ನಂತರ ೧೨- ಅಥವಾ ೧೩ನೆಯ ದಿನದಲ್ಲಾಗಲಿ, ಇಲ್ಲವೆ ತಮ್ಮ ಧಾರ್ಮಿಕ ಸಾಂಪ್ರದಾಯಕ್ಕನುಸರಿಸಿ ಗೊತ್ತು ಪಡಿಸಿದ ದಿನವಾಗಲಿ ಆ ಶಿಶುವಿನ ನಾಮಕರಣ ಸಮಾರಂಭವನ್ನು ಏರ್ಪಡಿಸುವುದುಂಟು. ವಿಶಾಲವಾದ ಈ ನಮ್ಮ ಭರತಖಂಡದಲ್ಲಿ ಅನೇಕ ಧರ್ಮಗಳು, ಜಾತಿ-ಉಪಜಾತಿಗಳಿದ್ದು ಈ ನಾಮಕರಣ ಸಮಾರಂಭದಲ್ಲಿ ವೈವಿಧ್ಯವೂ ಉಂಟು. ಮುಂದೆ ಶಿಶುವು ವರ್ಧಮಾನ ಹೊಂದುತ್ತ ಸಾಗಿದಂತೆ ನಾಮಕರಣ ಸಮಾರಂಭದಲ್ಲಿ ಇಟ್ಟ ಹೆಸರಿನಿಂದಲೇ ಆ ವ್ಯಕ್ತಿ ಪರಿಚಿತವಾಗುವದು.

ಸಾಮಾನ್ಯವಾಗಿ ಎಲ್ಲ ಸಮಾಜಗಳಲ್ಲಿ ಆಯಾ ಧರ್ಮಗಳಲ್ಲಿಯ ದೇವ-ದೇವತೆಗಳ, ಸಾಧು ಸತ್ಪುರುಷರ, ಸಂತರ ನಾಮಗಳು ರೂಢಿಯಲ್ಲಿರುವವು. ಕೆಲವೊಂದು ಪ್ರದೇಶದಲ್ಲಿ ವ್ಯಕ್ತಿಯ ಹೆಸರು, ಅನಂತರ ತಂದೆಯ ಹೆಸರು, ಕೊನೆಗೆ ಅಂಕಿತನಾಮ (ಅಡ್ಡಹೆಸರು) ರೂಢಿಯಲ್ಲಿದ್ದರೆ, ಮತ್ತೆ ಕೆಲವು ಪ್ರದೇಶಗಳಲ್ಲಿ ಮೊದಲು ಅಂಕಿತನಾಮ, ನಂತರ ತಂದೆಯ ಹೆಸರು, ಕೊನೆಗೆ ವ್ಯಕ್ತಿಯ ಹೆಸರು ಹೀಗೆ ರೂಢಿಯಲ್ಲಿರುವದು. ಪಾರ್ಸಿ ಸಮಾಜದಲ್ಲಿ ಮೊದಲಿನದು ವ್ಯಕ್ತಿಯ ಹೆಸರು, ಅನಂತರ ತಂದೆಯ ಹೆಸರು, ಆಮೇಲೆ ತಂದೆಯ ತಂದೆಯ (ಅಜ್ಜನ) ಹೆಸರು, ಕೊನೆಗೆ ಅಂಕಿತ-ನಾಮ ಬರುವುದು.

ಈ ನಾಮ, ಅಂಕಿತನಾಮಗಳ ಬಗ್ಗೆ ವಿಶ್ಲೇಷಿಸಿದಾಗ ಅನೇಕ ಮನೋರಂಜಕ ಅಂಶಗಳನ್ನು ಕಾಣಬಹುದು. ಈ ನಾಮಾಭಿಧಾನದಲ್ಲಿ ಸಾಮಾನ್ಯವಾಗಿ ಗೌರವಸೂಚಕವಾಗಿ ಕೆಳಗಿನಂತೆ ಪ್ರತ್ಯಯಗಳನ್ನು ಕಾಣಬಹುದು. ಉದಾಹರಣೆಗೆ ಅಪ್ಪ, ಅಯ್ಯ, ಅಪ್ಪಯ್ಯ, ಅಣ್ಣ, ಅಣ್ಣಯ್ಯ, ರಾಯ, ರಾವ್, ಸಾಬ, ಸಾಹೇಬ, ಖಾನ,-ಜಿ, ಪಂತ, ಭಟ್ಟ, ಆಚಾರ್ಯ, ಗೌಡ, ಆರಾಧ್ಯ ಶಾಸ್ತ್ರಿ, ದೀಕ್ಷಿತ ಇತ್ಯಾದಿ ಇತ್ಯಾದಿ.

ಸಾಮಾನ್ಯವಾಗಿ ರೂಢಿಯಲ್ಲಿರುವ ಹಿಂದೂ ದೇವ ದೇವತೆಗಳ, ಸಂತ ಸತ್ಪುರುಷರ ಹೆಸರುಗಳೆಂದರೆ, ರಾಮ, ಕೃಷ್ಣ, ಶಿವ, ಶಂಕರ, ನಾರಾಯಣ ಮಾಧವ, ಗೋವಿಂದ, ವಿಷ್ಣು, ಇತ್ಯಾದಿ.

ಜೈನ ಸಮಾಜದಲ್ಲಿ ರೂಢಿಯಲ್ಲಿರುವ ಹೆಸರುಗಳು: ಜಿನರಾಜ, ಬಾಹುಬಲಿ, ಬ್ರಹ್ಮಪ್ಪ,

ಪದ್ಮಪ್ಪ, ನೇಮಿನಾಥ, ಭುಜಬಲಿ, ಪಾರ್ಶ್ವನಾಥ, ರಾಮ, ಲಕ್ಷ್ಮಣ, ದಶರಥ ಇತ್ಯಾದಿ.

ವೀರಶೈವ ಸಮಾಜದಲ್ಲಿ ರೂಢಿಯಲ್ಲಿರುವಂಥವು: ಬಸವ, ಸಿದ್ಧ, ಈಶ್ವರ, ಶಿವ, ಲಿಂಗ, ಇಷ್ಟಲಿಂಗ, ಸಿದ್ಧಲಿಂಗ, ಬಸವಲಿಂಗ, ನಿಜಲಿಂಗ, ರುದ್ರ, ಮಹಾರುದ್ರ, ಚಂದ್ರಶೇಖರ, ಸೋಮಶೇಖರ, ಗುರುಸಿದ್ಧ, ಗುರುಲಿಂಗ, ಮಹಾಲಿಂಗ, ಶಶಿಧರ, ಇಂದುಧರ, ಫಾಲಾಕ್ಷ, ಮಲ್ಲೇಶ, ಮಲ್ಲಿಕಾರ್ಜುನ, ಮಹಾದೇವ, ರಾಜಶೇಖರ, ಇತ್ಯಾದಿ.

ರೂಢಿಯಲ್ಲಿರುವ ಅಂಕಿತನಾಮಗಳಲ್ಲಿ ವೃತ್ತಿ ವಾಚಕ ಹೆಸರುಗಳೆಂದರೆ; ಬಡಿಗೇರ, ಕಮ್ಮಾರ, ಪತ್ತಾರ, ಜೋಯಿಸ, ಬೇಪಾರಿ, ಕಾಪಡಿಯಾ, ಸೋನಾವಾಲಾ, ಸುತಾರಿಯಾ, ಲೋಹಿಯಾ, ನೀಲಗಾರ, ಬಣಕಾರ, ಪೂಜಾರ, ಇತ್ಯಾದಿ.

ವ್ಯಕ್ತಿಯು ಕೈಗೊಂಡ ಉದ್ಯೋಗದಿಂದಲೂ ಆ ವ್ಯಕ್ತಿಗೆ ಬಂದ ಅಂಕಿತನಾಮಗಳು: ಉಳ್ಳಾಗಡ್ಡಿ, ಮೆಣಶಿನಕಾಯಿ, ಬೆಲ್ಲದ, ಗೂಡವಾಲಾ, ಬಳ್ಳೊಳ್ಳಿ, ಜೋಳದ, ಅಕ್ಕಿ, ಗೋದಿ, ತುಪ್ಪದ, ಬೆಣ್ಣಿ, ಬ್ಯಾಳಿ, ಸಾಖರೆ, ಸಕ್ಕರಿ, ಅಡಿಕೆ, ಥೇಪೆ, ತಂಬಾಕೆ, ಕೋತಂಬ್ರಿ, ಇತ್ಯಾದಿ.

ವ್ಯವಹಾರಸ್ಥರ ಅಂಕಿತನಾಮಗಳು: ಶೆಟ್ಟಿ, ಶ್ರೇಷ್ಠಿ, ಲಕ್ಷೆಟ್ಟಿ, ದೋಲಾಖಿಯಾ, ಮಹಾಜನ ಶೆಟ್ಟಿ, ಮಹಾಂತಶೆಟ್ಟಿ, ಕತ್ತಿಶೆಟ್ಟಿ, ಪಾಣಶೆಟ್ಟಿ, ಪಟ್ಟಣಶೆಟ್ಟಿ, ಸರಾಫ, ಮಗ್ಗದ ಇತ್ಯಾದಿ.

ಮನೆಗಳ ಅಂಕಿತ ನಾಮಗಳು: ಹೊಸಮನಿ, ಹಳೆಮನಿ, ಮೇಲ್ಮನಿ, ಕಡೇಮನಿ, ತೆಗ್ಗಿಮನಿ, ಮಾಮನಿ, ಗುಡಸಲಮನಿ, ಕಟ್ಟಿಮನಿ, ಮಿಟ್ಟಿ ಮನಿ, ದೊಡ್ಮನಿ, ಹಿರೇಮನಿ, ಸಾಲಮನಿ, ಹಂಚಿನಮನಿ ಇತ್ಯಾದಿ.

ಗೌರವಾನ್ವಿತ ಅಂಕಿತನಾಮಗಳು: ಜಹಾಗೀರದಾರ, ಇನಾಮದಾರ; ದೇಸಾಯಿ, ದೇಶಪಾಂಡೆ, ದೇಶಮುಖ, ದೇಶಕುಲಕರ್ಣಿ, ಮಾಮಲೆ ದೇಸಾಯಿ, ಮಾಮಲೇದೇಶಪಾಂಡೆ, ಮಹಾಜನ, ವರ್ಪ್ಯಾಡಪಾಂಡೆ, ಕುಲಕರ್ಣಿ, ಶಾನಭೋಗ, ಶಾನಭಾಗ, ಸಾವಕಾರ, ಹೆಗ್ಗಡೆ, ಮೋಟಿ, ದೊಡ್ಮೇಟಿ, ಸಾಲುಡೋಣಿ, ಸಾಲಢಾಣಾ, ಪಾಟೀಲ, ನಾಡಗೀರ, ನಾಡಕರ್ಣಿ, ಇರ್ನಿರಾಯು, ನಾಯಕ ಇತ್ಯಾದಿ.

ಕರಾವಳಿ ಪ್ರದೇಶದಲ್ಲಿ ರೂಢಿಯಲ್ಲಿರುವ ಅಂಕಿತ ನಾಮಗಳು: ಶಾನಭಾಗ, ಪ್ರಭು, ಶೇಣ್ವೆ, ನಾಯಕ, ಕಾಮತ, ಕಮತಿ, ಕೇಶವೈನ, ಭಟ್ಟ, ಮಹಾಲೆ, ಮಲ್ಯ-ಇವಲ್ಲದೆ ಹೆಚ್ಚಿನ ಸಂಖ್ಯೆ ತಮ್ಮ ತಮ್ಮ ಗ್ರಾಮಗಳನ್ನೇ ಅಂಕಿತ ನಾಮವನ್ನಾಗಿ ಬಳಸುವುದೂ ಉಂಟು. ಶಿರೂರ, ಬಲಸೆ, ನಾಗರಕಟ್ಟಿ, ಶಿರಾಳಿ, ಭಟ್ಕಳ, ಪಾಡಿ, ಮಾವಿನಕುರ್ವೆ, ಅಘನಾಶಿನಿ, ಗೋಕರ್ಣ, ಅಂಕೋಲಾ, ಮಲ್ಲಾಪುರ, ಕುಂದಾಪುರ, ನೀಲಾವರ, ಬ್ರಹ್ಮಾವರ, ಉಪ್ಪುಂದ ಇತ್ಯಾದಿ:

ತುಳುನಾಡಿನಲ್ಲಿ ಇಂದಿಗೂ ತುಳು ಭಾಷೆಯ ಅಂಕಿತ ನಾಮಗಳೇ ರೂಢಿಯಲ್ಲಿರುವವು. ಆದ್ಯಂತಾಯ, ಮಧ್ಯಂತಾಯ, ಪುಣಂ-ಚಿತ್ತಾಯ, ಇರ್ನಿರಾಯ ಇತ್ಯಾದಿ.




"ಎರಡೂ ಸಲ ಬಂದ ಫೋನು ನನ್ನ ಹೆಂಡ್ತೀದೇ ಅಂತ ಅದ್ಹ್ಯಾಗೆ ಹೇಳ್ತೀಯೋ?!"

ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ರೂಢಿಯಲ್ಲಿರುವ ಅಂಕಿತ ನಾಮಗಳು "ಕರ" ಪ್ರತ್ಯಯದೊಂದಿಗೆ ಇರುವ ಗ್ರಾಮ, ನಗರಗಳ ಹೆಸರುಗಳು. ಧಾರವಾಡಕರ, ಬೆಳಗಾಂವಕರ, ನರಗುಂದಕರ, ಹಾವೇರಿ, ವಿಜಾಪುರ, ಬಾಗಲಕೋಟಿ ಇತ್ಯಾದಿ.

ವೈದಿಕ ಸಮಾಜದಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿರುವ ಅಂಕಿತ ನಾಮಗಳು: ಶಾಸ್ತ್ರಿ, ಪುರೋಹಿತ, ಪುರಾಣಿಕ, ಜೋಶಿ, ದ್ವಿವೇದಿ, ತ್ರಿವೇದಿ, ಚತುರ್ವೇದಿ, ಯಜುರ್ವೇದಿ, ಸಾಮಗ, ಭಟ್ಟ, ಆಚಾರ್ಯ, ಪಂಡಿತ, ಘನಪಾಠಿ, ತ್ರಿಪಾಠಿ, ಸಮರ್ಥ, ಸಂತ, ಅಗ್ನಿಹೋತ್ರಿ, ಉಪಾಧ್ಯ, ಭಾಗವತ, ಪಾಠಕ, ಯಾಜ್ಞಿಕ, ಶ್ರೋತ್ರಿಯ, ಸೋಮಯಾಜಿ, ಧರ್ಮಾಧಿಕಾರಿ ಇತ್ಯಾದಿ.

ಪೇಶ್ವೆ ಕಾಲದಿಂದ ರೂಢಿಯಲ್ಲಿ ಬಂದಿರುವ ಅಂಕಿತ ನಾಮಗಳು: ಚಿಟನೀಸ, ಮಾಕನೀಸ, ಟಿಪನೀಸ, ಫಡಣನೀಸ, ಹಿಸೋಬನೀಸ, ಪೋತನೀಸ, ಪಾಗನೀಸ, ಅಕಬರವೀಸ, ಚಿಟಣೀಸ, ಹಸಬನೀಸ, ಮಹಾಲನೋಬತ, ಕಾರಖಾನೀಸ, ಸರದಾರ, ಮಹಾಲ್ದಾರ, ರಿಸಾಲ್ದಾರ, ಪೋತದಾರ, ಜಮಾದಾರ, ಹವಾಲ್ದಾರ, ಫೌಜದಾರ, ದೇಶಮುಖ, ಪಟವರ್ಧನ, ಪಂತಪ್ರತಿನಿಧಿ, ಪಂತ ಅಮಾತ್ಯ, ಮಾಂಡಲೀಕ, ಅಧಿಕಾರಿ, ಅಧ್ಯಾಪಕ, ದಿವಾಣ, ಪಾಂಡೆ, ಮಹಾಜನ, ಠಾಕುರ ಇತ್ಯಾದಿ.

ಕೆಲವು ವಿಕ್ಷಿಪ್ತ ಅಂಕಿತನಾಮಗಳು; ತೂಪಸಾಂಡೆ, ಆಮಟೆ, ಕೋಣನತಂಬಿಗಿ, ಪಾವಟೆ, ಫಾಟಕ, ಫಡಕೆ, ಆಗಲಾವೆ, ಮೋಡಕ, ಚೊಣ್ಣದ, ಇಜಾರೆ, ಸಾಂಬಾರೆ, ಚಿವಟಿ, ಲತ್ತೆ, ಕಾಳೆ, ಗೋರೆ, ನೀಲಿ, ಗೋಡಬೋಲೆ, ಕರಮರಕರ, ಛತ್ರೆ, ಗಂಡಮಾಳೆ, ಗಂಡಮಾಲಿ, ಇತ್ಯಾದಿ.

ಭಾಷಾಂತರಿತ ನಾಮಗಳು: ವೃಷಭೇಂದ್ರ, ದೇಶಿಕೇಂದ್ರ, ಮರುಳಾರಾಧ್ಯ ಇತ್ಯಾದಿ.

ಅಕ್ಕರೆಯಿಂದ ಪಶುಗಳ ಕ್ರಿಮಿಕೀಟಕಗಳ ಹೆಸರು ಕೂಡ ಬಳಕೆಯಲ್ಲಿರುವವು. ಉದಾ: ಕೋಣಪ್ಪ, ಕತ್ತೆಣ್ಣ, ಆನೆಪ್ಪ, ಗೂಳಪ್ಪ, ಕುದರಿ, ಮಹಿಷಿ, ಎಮ್ಮಿ, ಒಂಟೆಪ್ಪ, ಜೋಳಪ್ಪ, ಹಾವಪ್ಪ, ಗುಬ್ಬಣ್ಣ.

ಜಾತಿ ವಾಚಕ ಅಂಕಿತನಾಮಗಳು: ರಡ್ಡೇರ, ರಡ್ಡಿ, ಮಾದರ, ಚಲವಾದಿ, ಮಠದ, ಮಸೂತಿ, ಕುರುಬರ, ತಳವಾರ, ಉಪ್ಪಾರ, ಶಿಂಪಿ, ಗಾಣಿಗೇರ, ಸಜ್ಜನ, ಗಾಣಿಗೇರ, ಇತ್ಯಾದಿ.

ವೀರಶೈವ ಮಠಗಳ ಅಂಕಿತನಾಮಗಳು: ಹಿರೇಮಠ, ಚಿಕ್ಕಮಠ, ಸಾಲೀಮಠ, ಹನ್ನೆರಡುಮಠ, ಮೂರುಸಾವಿರಮಠ, ಮರಡೀಮಠ, ಸಂಶೀಮಠ, ಹುಬಳೀಮಠ, ಶಾಸ್ತ್ರೀಮಠ, ಮಠಪತಿ, ರುದ್ರಾಕ್ಷಿಮಠ, ಸಂಸ್ಥಾನಮಠ, ಪಂಚಾಂಗಮಠ ಇತ್ಯಾದಿ.

ಸುಶಿಕ್ಷಿತ ಸಮಾಜದಲ್ಲಿ ತಮ್ಮ ಹೆಸರುಗಳನ್ನು ಸಂಕ್ಷೇಪಗೊಳಿಸುವುದು ಕೂಡ ರೂಢಿಯಲ್ಲಿದೆ. ಉದಾ: ಲಕ್ಷ್ಮೀನರಸಿಂಹ–ಎಲ್. ಎನ್. ಸಿಂಹ ಆಗಿದೆ. ಭೀಮಸೇನ–ಬಿ.ಸೇನ್ ಆಗಿದೆ. ಬೆಂಗಳೂರು ಗೋಪಾಲ– ಬಿ. ಜಿ. ಪಾಲ ಆಗಿದೆ. ರಾಜಮಹೇಂದ್ರಿ ತಿರುವೆಂಕಟಾಚಾರಿ– ಆರ್. ಟಿ. ಚಾರಿ ಆಗಿದೆ. ವೆಲ್ಲೂರು ಸುಬ್ರಹ್ಮಣ್ಯ– ವ್ಹಿ. ಎಸ್. ಮಣಿ ಆಗಿದೆ. ರಾಯಸಂ ಶ್ರೀನಿವಾಸನ್– ಆರ್. ಎಸ್. ವಾಸನ್ ಆಗಿದೆ.

ನಮ್ಮ ಪೂರ್ವಕಾಲದ ಋಷಿಗಳು ಕೂಡ ಆಧುನಿಕ ಯುಗದಲ್ಲಿ ಅಂಕಿತನಾಮಗಳಿಂದ ಪ್ರಚಾರದಲ್ಲಿ ಬಂದಿದ್ದಾರೆ. ಜಮದಗ್ನಿ, ಭಾರದ್ವಾಜ, ಗೌತಮ, ಕಾಶ್ಯಪ, ಕೌಂಡಿಣ್ಯ, ಅತ್ರಿ, ವಶಿಷ್ಠ, ವಿಶ್ವಾಮಿತ್ರ, ಶಾಂಡಿಲ್ಯ, ಕಪಿಲ, ಕೌಶಿಕ, ಭಾರ್ಗವ, ಶ್ರೀವತ್ಸ, ಗಾರ್ಗ್ಯ ಪರಾಶರ, ವ್ಯಾಸ, ಋಷಿ, ಇತ್ಯಾದಿ.

ಹೀಗಿದೆ ನಮ್ಮ ದೇಶದ ನಾಮ ವೈಶಿಷ್ಟ್ಯ. ✡



# ಜಗತ್ತಿನ ಅತಿ

ಜಗತ್ತಿನಲ್ಲೇ ಅತ್ಯಂತ ವೇಗದಿಂದ ಓಡುವ 'ಟಿ. ಜಿ. ವಿ.' — ಟ್ರೈನ್ ಗ್ರಾಂಡ್ ವಿಟೆಸ್ (ಅತ್ಯಂತ ವೇಗದ ರೈಲು ಗಾಡಿ) ಯೂರೋಪಿನಲ್ಲಿದೆ. ಈ ರೈಲುಗಾಡಿ ಫ್ರಾನ್ಸಿನಲ್ಲಿ, ಪ್ಯಾರಿಸ್ ಮತ್ತು ಆ ದೇಶದ ದಕ್ಷಿಣಕ್ಕಿರುವ ಲಿಯೋನ್ ಮಾರ್ಸೇಲ್ಸ್ ಮೊದಲಾದ ಊರುಗಳ ನಡುವೆ ಓಡುತ್ತದೆ. 'ಎಸ್. ಎನ್. ಸಿ. ಎಫ್.' (Societe Nationale des Chemins de Fer Francaias) ಎಂದರೆ 'ಫ್ರಾನ್ಸಿನ ರಾಷ್ಟ್ರೀಯ ರೈಲು ಮಾರ್ಗಗಳ ಸಂಸ್ಥೆ' ಎಂಬ ಹೆಸರುಳ್ಳ ಫ್ರೆಂಚ್ ರೈಲ್ವೆ ಇದನ್ನು ನಡೆಸುತ್ತದೆ. ಫ್ರಾನ್ಸಿನ ಊರುಗಳಿಗಷ್ಟೇ ಅಲ್ಲದೇ ಕಳೆದ ಕೆಲವು ವರ್ಷಗಳಿಂದ ಸ್ವಿಟ್ಸರ್ಲೆಂಡಿನಲ್ಲಿರುವ ಜಿನೀವ ಮತ್ತು ಲಾಸೆನ್ ನಗರಗಳಿಗೂ ಇದು ಸಂಪರ್ಕ ಸಾಧನವಾಗಿದೆ. ಜಪಾನಿನ 'ಬುಲೆಟ್' ರೈಲು ಗಾಡಿಯನ್ನು ವೇಗದಲ್ಲಿ ಹಿಂದಕ್ಕೆ ಹಾಕಿರುವ ಈ ಗಾಡಿ ಗಂಟೆಗೆ ೧೬೮ ಮೈಲುಗಳ ವೇಗದಿಂದ ಧಾವಿಸುತ್ತದೆ. ಇದೇ ವೇಗದ ಗಾಡಿ ನಮ್ಮಲ್ಲಿದ್ದಿದ್ದರೆ ಬೆಂಗಳೂರಿನಿಂದ ಹುಬ್ಬಳ್ಳಿ ತಲುಪಲು ನಿಮಗೆ ಕೇವಲ ೧ ಘಂಟೆ ೪೫ ನಿಮಿಷ ಸಾಕಾಗುತ್ತಿತ್ತು. ಬೆಂಗಳೂರು ಮೈಸೂರು ಪ್ರಯಾಣ ಅರ್ಧ ಗಂಟೆಯಲ್ಲಿ ಮುಗಿಯುತ್ತಿತ್ತು. ಪ್ಯಾರಿಸ್ಸಿನಿಂದ ಹೊರಟು ಅದರ ಆಗ್ನೇಯಕ್ಕಿರುವ ಲಿಯೋನ್ ನಗರವನ್ನು ತಲುಪಲು ಇದಕ್ಕೆ ಎರಡು ಗಂಟೆಗಳು ಸಾಕು. ಇವಲ್ಲದೆ, ತೀವ್ರಗತಿಯಲ್ಲಿ ಚಲಿಸುವ ಟಿ. ಇ. ಇ.–ಟ್ರಾನ್ಸ್ ಯೂರೋಪಿಯನ್ ಎಕ್ಸ್‌ಪ್ರೆಸ್‌ ಹಾಗೂ 'ಇಂಟರ್ ಸಿಟಿ' ಎಕ್ಸ್‌ಪ್ರೆಸ್ ಗಾಡಿಗಳು ಪಶ್ಚಿಮ ಯೂರೋಪಿನ ವಿವಿಧ ನಗರಗಳಿಗೆ ಸಾರ್ವಜನಿಕ ಸಂಪರ್ಕವನ್ನು ಒದಗಿಸಿಕೊಟ್ಟಿವೆ. ಕೆಲವು ದಿನಗಳ ಹಿಂದೆ ಪ್ರಧಾನಿ ಶ್ರೀ ರಾಜೀವ ಗಾಂಧಿಯವರು ಫ್ರಾನ್ಸಿಗೆ ಭೇಟಿಕೊಟ್ಟಾಗ ಓದುಗರಿಗೆ ಈ ವಿಷಯದ ಪರಿಚಯವಾಗಿರಬಹುದು.

ಯೂರೋಪಿನಲ್ಲಿ ಇಂತಹ ದೂರದೂರುಗಳಿಗೆ ಹೋಗಬೇಕಾದರೆ ರೈಲು ಪ್ರಯಾಣದಷ್ಟು ಉತ್ತಮ ಪ್ರಯಾಣ—ಅದರಲ್ಲೂ ಹೊರ ದೇಶದ ಪ್ರವಾಸಿಗಳಿಗೆ — ಮತ್ತೊಂದಿಲ್ಲ. ಯೂರೋಪ್ ಚಿಕ್ಕಪುಟ್ಟ ದೇಶಗಳಿಂದ ತುಂಬಿ ಹೋಗಿರುವುದರಿಂದ—ಅನೇಕ ದೇಶಗಳು ನಮ್ಮ ರಾಜ್ಯಗಳಿಗಿಂತ ಚಿಕ್ಕವು—ಈ ರೀತಿಯ ರೈಲ್ವೆ ಸಂಪರ್ಕವಿಲ್ಲದಿದ್ದರೆ ಪ್ರಯಾಣ ಕಷ್ಟಕರವಾಗುತ್ತಿತ್ತು. ಪ್ರತಿಯೊಂದು ದೇಶಕ್ಕೂ ಅದರದೇ ವಿಶಿಷ್ಟವಾದ ರೈಲು ವ್ಯವಸ್ಥೆ ಇದ್ದರೂ, ಇವೆಲ್ಲವೂ ಒಂದಕ್ಕೊಂದು ಸಹಕರಿಸಿ ಕೆಲಸ ಮಾಡುತ್ತವೆ. ಅದರಲ್ಲೂ ಫ್ರಾನ್ಸ್, ಜರ್ಮನಿ, ಇಟಲಿ, ಸ್ವಿಟ್ಸರ್ಲೆಂಡ್ ಇತ್ಯಾದಿ ಪಶ್ಚಿಮ ರಾಷ್ಟ್ರಗಳು ಒಟ್ಟಿಗೆ ಸೇರಿ, ಯಾತ್ರಿಕರು ಎಲ್ಲ ಕಡೆಗೂ ತೊಂದರೆಯಿಲ್ಲದೆ 'ಓಡಾಡುವ ವ್ಯವಸ್ಥೆ ಮಾಡಿವೆ.' ಕಡಲ್ಗಾಲುವೆಯಾಚೆ ಇರುವ ಬ್ರಿಟನ್ ಮಾತ್ರ ಈ ಏರ್ಪಾಡಿಗೆ ಪೂರ್ಣವಾಗಿ ಒಳಪಟ್ಟಿಲ್ಲ.

ದಿನನಿತ್ಯವೂ ದೂರದ ಊರುಗಳಿಗೆ ಹೋಗುವ ಅಥವಾ ಬೆಳಿಗ್ಗೆ ಹೋಗಿ ಕೆಲಸ ಮುಗಿಸಿಕೊಂಡು ಸಂಜೆ ವಾಪಸು ಬರಲು ಇಚ್ಛಿಸುವ ಉದ್ಯಮಿಗಳು, ಆಫೀಸು ಸಿಬ್ಬಂದಿ, ವರ್ತಕರು—ಇಂತಹ ಪ್ರಯಾಣಿಕರಿಗೇ ಅಲ್ಲದೆ, ಪ್ರವಾಸಿಗಳಿಗೂ ಸಹ 'ಟಿ. ಜಿ. ವಿ.' ಅತ್ಯುತ್ತಮ

ಸಿ. ವಿಶ್ವೇಶ್ವರ



# ವೇಗದ ರೈಲು

ವಾಹನವಾಗಿದೆ. ಇದರಲ್ಲಿ ಮಾಡುವ ಪ್ರಯಾಣ ವಿಮಾನ ಪ್ರಯಾಣಕ್ಕಿಂತ ಅನೇಕ ರೀತಿಯಲ್ಲಿ ಉತ್ತಮವೆಂದರೆ ನೀವು ಮೂಗಿನ ಮೇಲೆ ಬೆರಳೇರಿಸಬಹುದು. ಆದರೆ ಇದು ನಿಜ. ಕೆಲವು ದಿನಗಳ ಹಿಂದೆ ನಾನು ಜಿನೀವಾದಿಂದ ಪ್ಯಾರಿಸ್ಸಿಗೆ ಈ ಗಾಡಿಯಲ್ಲಿ ಪ್ರಯಾಣ ಮಾಡಿದೆ. ಒಟ್ಟು ಪ್ರಯಾಣದ ಅವಧಿ ಸುಮಾರು ಮೂರೂವರೆ ಗಂಟೆಗಳು. ವಿಮಾನದಲ್ಲಿ ಬಹುಶಃ ಒಂದು ಗಂಟೆಯ ಪ್ರಯಾಣವಿರಬಹುದು. ಆದರೆ ವಿಮಾನ ನಿಲ್ದಾಣವನ್ನು ಬಿಡುವುದಕ್ಕೆ ಒಂದು ಗಂಟೆ ಮುಂಚೆಯೇ ಯಾತ್ರಿಕರು ನಿಲ್ದಾಣ ದಲ್ಲಿರಬೇಕು ಎಂಬ ಸೂಚನೆಯಿರುವುದು ಎಲ್ಲ-ರಿಗೂ ತಿಳಿದಿರುವ ಸಂಗತಿ. ಅಲ್ಲದೆ ಊರಿ-ನೊಳಗಿಂದ, ಊರಿಗೆ ಸುಮಾರು ದೂರದಲ್ಲಿರುವ ನಿಲ್ದಾಣವನ್ನು ತಲಪಲು, ವಾಹನ ಸಂಚಾರ ಹೆಚ್ಚಾಗಿರುವ ಹೊತ್ತಿನಲ್ಲಂತೂ ಕಡಿಮೆ ಎಂದರೆ ಅರ್ಧ ಗಂಟೆ ಹಿಡಿಯುತ್ತದೆ. ನಿಲ್ದಾಣದಲ್ಲಿ ವೈಮಾನಿಕ ಸಂಸ್ಥೆಯ ಅಧಿಕಾರಿಗಳು ಟಿಕೆಟ್ ಹಾಗೂ ಸಾಮಾನುಗಳನ್ನು ಪರೀಕ್ಷಿಸಿ ಹೊರ-ಡಲು ಒಪ್ಪಿಗೆ ಕೊಡಲು ಕೊನೆಯ ಪಕ್ಷ ಅರ್ಧ ಗಂಟೆಯಾದರೂ ಬೇಕು. ವಿಮಾನ ಪ್ರಯಾಣ ಮುಗಿದ ಮೇಲೂ, ತಲಪಿದ ಊರಿನ ನಿಲ್ದಾಣದಿಂದ ಊರೊಳಕ್ಕೆ ಹೋಗಲು ಹೀಗೆಯೇ ಸಮಯ ಕಳೆಯುತ್ತದೆ. ವಿಮಾನ ದಿಂದಿಳಿದು ನಿಲ್ದಾಣದೊಳಗೆ ನಮ್ಮ ಸಾಮಾನು-ಗಳನ್ನು ವಾಪಸು ಪಡೆಯಲು ಅರ್ಧ ಗಂಟೆ, ಆಮೇಲೆ ಟ್ಯಾಕ್ಸಿ ಇತ್ಯಾದಿ ವಾಹನಗಳಲ್ಲಿ ಮನೆ, ಅಥವಾ ಹೊಟೇಲು ಸೇರಲು ಅರ್ಧಗಂಟೆ ಹೀಗೆ. ಆದರೆ ರೈಲು ನಿಲ್ದಾಣ ಸಾಮಾನ್ಯವಾಗಿ ಊರ ನಡುವೆಯೇ ಇರುವುದರಿಂದ ವಿಮಾನ ಪ್ರಯಾಣದ ಅನೇಕ ಸಮಸ್ಯೆಗಳು ರೈಲು ಪ್ರಯಾಣದಲ್ಲಿ ಉದ್ಭವಿಸುವುದಿಲ್ಲ. ಇವಲ್ಲದೆ ವಿಮಾನ ಪ್ರಯಾಣದ ದರ ರೈಲು ಪ್ರಯಾಣದ ಫಸ್ಟ್ ಕ್ಲಾಸ್ ದರಕ್ಕಿಂತ ಎರಡು ಪಟ್ಟಾದರೂ ಜಾಸ್ತಿ ಇರುತ್ತದೆ. ಜೊತೆಗೆ ಜಾಸ್ತಿ ತೂಕದ ಅಥವಾ ಅಳತೆಯ ಸಾಮಾನುಗಳಿದ್ದರೆ ವಿಮಾನ ಪ್ರಯಾಣದಲ್ಲಿ ಹೆಚ್ಚಿನ ಶುಲ್ಕ ಕೊಡಬೇಕಾ-ಗುತ್ತದೆ. ಹಣ ಮತ್ತು ಸಮಯ ಎರಡೂ ಕಡಿಮೆಯಾಗುವುದರಿಂದ ಹೆಚ್ಚು ಪ್ರಯಾಣಿಕರು 'ಟಿ. ಜಿ. ವಿ.' ಯನ್ನೇ ಅಪೇಕ್ಷಿಸುವುದು ಆಶ್ಚರ್ಯವೇನಲ್ಲ.

'ಟಿ. ಜಿ. ವಿ.' ರೈಲು ಗಾಡಿಯನ್ನು ೧೯೮೨ ನೆಯ ಇಸವಿ ಮಾರ್ಚ್ ೨೪ನೇ ತಾರಿಖಿನಂದು ವಿಧ್ಯುಕ್ತವಾಗಿ ಪ್ರಾರಂಭಿಸಲಾಯಿತು;

೧೯೮೧ರ ಫೆಬ್ರುವರಿ ೨೬ನೇ ತಾರೀಖು 'ಟಿ. ಜಿ. ವಿ'ಯ ೧೬ನೇ ನಂಬರ್ ಗಾಡಿಯು ಗಂಟೆಗೆ ೩೮೦ ಕಿ. ಮಿ. ಗಳಷ್ಟು (ಸುಮಾರು ೨೩೫ ಮೈಲು) ರಭಸದಿಂದ ಓಡಿ ಹೊಸ ವಿಕ್ರಮವನ್ನು ಸ್ಥಾಪಿಸಿತು. 'ಟಿ.ಜಿ.ವಿ' ಗಾಗಿಯೇ ಹೊಸ ರೈಲು ಮಾರ್ಗವನ್ನು ರಚಿಸಬೇಕಾಯಿತು. ಕಂಬಿಗಳನ್ನು ಹಾಸಲು ಮರದ ಸ್ಲೀಪರುಗಳಿಗೆ ಬದಲಾಗಿ ಕಾಂಕ್ರೀಟ್ ಸ್ಲೀಪರುಗಳನ್ನು ಉಪಯೋಗಿಸಿದ್ದಾರೆ. ಗಾಡಿ ವಿದ್ಯುಚ್ಛಕ್ತಿಯಿಂದ ನಡೆಯುವುದರಿಂದ ಎಷ್ಟೇ ವೇಗವಾಗಿ ಚಲಿಸಿದರೂ ಹೊಗೆ, ಧೂಳುಗಳ, ಸಮಸ್ಯೆಯಿಲ್ಲ. ಪ್ರತಿ ರೈಲುಗಾಡಿಯಲ್ಲೂ ಎಂಟು ಬಂಡಿಗಳಿರುತ್ತವೆ. ಸುಮಾರು ೩೮೦ ಪ್ರಯಾಣಿಕರು ಕುಳಿತುಕೊಳ್ಳಬಹುದಾದಷ್ಟು ಸ್ಥಳವಿರುತ್ತದೆ. ರೈಲುಗಾಡಿಯ ಎರಡೂ ತುದಿಗಳಲ್ಲಿ ವಿದ್ಯುತ್ ಎಂಜಿನ್ನುಗಳನ್ನು ಜೋಡಿಸಿರುತ್ತಾರೆ. ಎದುರುಗಾಳಿಯ ಒತ್ತಡ ಆದಷ್ಟು ತಗ್ಗುವಂತೆ ಎಂಜಿನ್ನಿನ ಮೂತಿಯನ್ನು ಚೂಪಾಗಿ (Stream-lined) ಮಾಡಿರುತ್ತಾರೆ. ಗಾಡಿ ಹೋಗುವ ಹಾದಿಯಲ್ಲಿ ಸುರಂಗಮಾರ್ಗಗಳಿಲ್ಲ.

ಆದರೆ ವಿಮಾನ ಪ್ರಯಾಣದಲ್ಲಿ ಅನ್ನಿಸುವಂತೆಯೇ, ಇದರಲ್ಲೂ ನಾವು ಅತ್ಯಂತ ಶೀಘ್ರವಾಗಿ ಚಲಿಸುತ್ತಿದ್ದೇವೆಂಬ ಭಾವನೆ ಬರುವುದಿಲ್ಲ. ಪ್ರಯಾಣದ ಅನುಭವ ಬೇರೆ ಗಾಡಿಗಳಲ್ಲಿರುವಂತೆಯೇ. ಬಹುಶಃ ಅದುರಾಟ, ಸದ್ದು ಇನ್ನೂ ಕಡಿಮೆ ಎನ್ನಬಹುದು. ಜಗತ್ತಿನಲ್ಲೇ ಅತ್ಯಂತ ತೀವ್ರಗತಿಯುಳ್ಳ ರೈಲು ಗಾಡಿಯಲ್ಲಿ ಪ್ರಯಾಣ ಮಾಡಿದೆ ಎಂದು ಹೇಳಿಕೊಳ್ಳಬಹುದೇ ಹೊರತು, ಬೇರೇನೂ ವಿಶೇಷ ಕಾಣುವುದಿಲ್ಲ. ಈ ಗಾಡಿಯ ಪ್ರಯಾಣ ಶುಲ್ಕ ಇತರೆ ಗಾಡಿಗಳಷ್ಟೇ. ಆದರೆ ಜನರು ಹೆಚ್ಚು ಸಂಚಾರ ಮಾಡುವ ವೇಳೆಗಳಲ್ಲಿ ಎಂದಿನ ದರಕ್ಕಿಂತ ಅಧಿಕ ಬೆಲೆ ಕೊಡಬೇಕಾಗುತ್ತದೆ. ಇನ್ನೊಂದು ಮುಖ್ಯ ಸಂಗತಿಯೆಂದರೆ 'ಟಿ.ಜಿ.ವಿ.' ಯಲ್ಲಿ ಯಾವಾಗ ಪ್ರಯಾಣ ಮಾಡಿದರೂ ಕುಳಿತುಕೊಳ್ಳುವ ಸ್ಥಳವನ್ನು ಮೊದಲೇ ಕಾದಿರಿಸಿರಬೇಕು. ಕೈಯಲ್ಲಿ ಗಾಡಿಯ ಟಿಕೆಟ್ ಇದೆಯೆಂದು, ಅದು ಫಸ್ಟ್‌ಕ್ಲಾಸೇ ಆಗಲಿ, ಸೆಕೆಂಡ್ ಕ್ಲಾಸೇ ಆಗಲಿ ನೇರವಾಗಿ ಹತ್ತಲು ಅವಕಾಶವಿಲ್ಲ. ಆದ್ದರಿಂದ 'ಟಿ.ಜಿ.ವಿ.'ಯ ಒಳಗೆ ಪ್ರವೇಶಿಸುವ ಮೊದಲು ನಿಮ್ಮ ರೈಲು ಟಿಕೆಟ್ (ಫಸ್ಟ್ ಅಥವಾ ಸೆಕೆಂಡ್-ಕ್ಲಾಸ್), ನಿಮ್ಮ ಸ್ಥಳವನ್ನು ಕಾದಿರಿಸಲಾಗಿದೆಯೆಂದು ತೋರಿಸುವ ರಿಸರ್ವೇಷನ್ ಕಾರ್ಡ್ (ನಿಮ್ಮ ಟಿಕೆಟ್ ತೋರಿಸಿ ರಿಸರ್ವೇಷನ್ನಿಗೆ ಹಣ ಕೊಟ್ಟು ಇದನ್ನು ಪಡೆದುಕೊಳ್ಳಬಹುದು), ಹೆಚ್ಚು ಜನಸಂಚಾರವಿರುವ ವೇಳೆಗಳಲ್ಲಿ ಪ್ರಯಾಣ ಬೆಳೆಸಬೇಕಾದರೆ ಅಗತ್ಯವಾದ ಹೆಚ್ಚಿನ ಶುಲ್ಕದ ಕೂಪನ್‌ಗಳು ನಿಮ್ಮೊಡನಿರಬೇಕು. ನೀವು ಫಸ್ಟ್‌ಕ್ಲಾಸ್ ಪ್ರಯಾಣಿಕರಾಗಿದ್ದು, ದಾರಿಯಲ್ಲಿ ನಿಮಗೆ ಊಟಮಾಡುವ ಅವಶ್ಯಕತೆಯಿರುವುದಾದರೆ ಅದಕ್ಕಾಗಿ ಊಟವನ್ನು ಕಾದಿರಿಸುವ ಟಿಕೆಟ್ಟನ್ನೂ ಪಡೆದಿರಬೇಕು.

ಯೂರೋಪಿನಲ್ಲಿ ಹಾಗೂ ಬ್ರಿಟನ್ನಿನಲ್ಲಿ ಸಾಮಾನ್ಯವಾಗಿ ಎಲ್ಲ ಗಾಡಿಗಳಲ್ಲಿರುವಂತೆಯೇ ಇದರಲ್ಲೂ ಹೊಗೆಬತ್ತಿ ಸೇದುವವರಿಗಾಗಿ ಮತ್ತು ಸೇದದಿರುವವರಿಗಾಗಿ ಬೇರೆ ಬೇರೆ ಅಂಕಣ (Compartment)ಗಳಿರುತ್ತವೆ. ಈ ಗಾಡಿಯಲ್ಲಿ ಕುಳಿತುಕೊಳ್ಳುವ ಪೀಠಗಳು ರೈಲಿನ ಚಕ್ರದ ಮೇಲ್ಭಾಗಕ್ಕೆ ಬರದಿರುವಂತೆ ಅವನ್ನು ಜೋಡಿಸಿದ್ದಾರೆ; ಈ ಕಾರಣದಿಂದ ಕುಲುಕಾಟ ಬಹಳಷ್ಟು ಕಡಮೆಯಾಗುತ್ತದೆ. ಫಸ್ಟ್‌ಕ್ಲಾಸಿನಲ್ಲಿ ಒಂದು ಗೋಡೆಯ ಬದಿಯಲ್ಲಿ ಎರಡೆರಡು ಪೀಠಗಳೂ ಇನ್ನೊಂದರ ಬದಿಯಲ್ಲಿ ಒಂದೊಂದೇ ಪೀಠವೂ ಇರುವಂತೆ ವ್ಯವಸ್ಥೆ ಮಾಡಿದ್ದಾರೆ. ಸೆಕೆಂಡ್ ಕಾಸಿನಲ್ಲಿ ಎರಡು ಬದಿಗೂ ಎರಡೆರಡು ಪೀಠಗಳಿರುತ್ತವೆ. ಇಂತಹ ಒಂದೆರಡು ವೈಶಿಷ್ಟ್ಯಗಳನ್ನು ಬಿಟ್ಟರೆ ಫಸ್ಟ್ ಹಾಗೂ ಸೆಕೆಂಡ್ ಕ್ಲಾಸುಗಳಲ್ಲಿ ಹೆಚ್ಚಿನ ಅಂತರವಿರುವುದಿಲ್ಲ. ಎರಡು ದರ್ಜೆಗಳ ಪೀಠಗಳಿಗೂ ಮೆತ್ತೆಗಳನ್ನು ಒದಗಿಸಿರುತ್ತಾರೆ. ಯಾತ್ರಿಯು ಕೂಡುವ ಪೀಠದ ಮುಂದೆ,

ವಿಮಾನಗಳಲ್ಲಿ ಮಾಡಿರುವಂತೆ, ಮಡಿಸುವ ಮಣೆಯೊಂದನ್ನು ಇಟ್ಟಿದ್ದು (ಮುಂದಿನ ಪೀಠದ ಹಿಂಭಾಗದ ಅಂಗವಾಗಿ), ಅದನ್ನು ತಿಂಡಿ ತೀರ್ಥ ಗಳನ್ನಿಡಲು ಉಪಯೋಗಿಸಿಕೊಳ್ಳಬಹುದು. ಅಲ್ಲಿಯೇ ಪತ್ರಿಕೆಗಳನ್ನಿಡುವ ಚೀಲವೂ ಇರುತ್ತದೆ. ಉಳಿದ ಕಡೆಗಳಲ್ಲಿರುವಂತೆಯೇ ತಿನ್ನುವ ಪದಾರ್ಥಗಳು, ಕುಡಿಯುವ ಪಾನೀಯಗಳನ್ನು ಮಾರುವ ಸ್ಥಳವೊಂದು ಈ ಗಾಡಿಯಲ್ಲೂ ಇದೆ. ಅಲ್ಲದೆ ಪತ್ರಿಕೆಗಳು, ಪುಸ್ತಕಗಳು, ಸಿಗರೇಟು ಇವುಗಳನ್ನು ಮಾರುವ ಜಾಗವೂ ಉಂಟು.

ಇದರಷ್ಟು ತೀವ್ರಗತಿಯಿಂದ ಓಡದಿದ್ದರೂ, ಇದರಷ್ಟೇ ಸುಖಕರವಾಗಿರುವ ರೈಲುಗಾಡಿ 'ಟಿ.ಇ.ಇ.' ಆದರೆ ಇದರಲ್ಲಿ ಫಸ್ಟ್‌ಕ್ಲಾಸ್ ಪ್ರಯಾಣಿಕರು ಮಾತ್ರ ಸಂಚರಿಸಬಹುದು. 'ಟಿ.ಜಿ.ವಿ.'ಯಷ್ಟಲ್ಲದಿದ್ದರೂ ಇದೂ ಬಹಳ ವೇಗವಾಗಿಯೇ ಚಲಿಸುತ್ತದೆ. ಇದರಂತೆಯೇ, 'ಇಂಟರ್‌ಸಿಟಿ' ರೈಲುಗಾಡಿಗಳು ಪಶ್ಚಿಮ ಯೂರೋಪಿನ ಅನೇಕ ದೊಡ್ಡ ಪಟ್ಟಣಗಳಿಗೆ ಸಂಪರ್ಕವನ್ನೇರ್ಪಡಿಸಿವೆ. ಬಹು ರಭಸವಾಗಿ ಓಡುವ ಈ ಗಾಡಿಗಳಲ್ಲಿ ಫಸ್ಟ್, ಸೆಕೆಂಡ್–ಎರಡು ದರ್ಜೆಗಳೂ ಉಂಟು. 'ಟಿ.ಇ.ಇ.' ಮತ್ತು 'ಟಿ.ಜಿ.ವಿ.' ಗಾಡಿಗಳು ಸಹಜವಾಗಿಯೇ 'ಇಂಟರ್‌ಸಿಟಿ'ಯಷ್ಟು ವ್ಯಾಪಕವಾಗಿಲ್ಲ.

ಯೂರೋಪಿನ ಜನ ಕಷ್ಟಪಟ್ಟು ಕೆಲಸ ಮಾಡುವಂತೆಯೇ ಸುಖವನ್ನೂ ಅನುಭವಿಸು ತ್ತಾರೆ. ನಾನು ಒಂದು ಗಾಡಿಯಲ್ಲಿ ಪ್ರಯಾಣ ಮಾಡುವಾಗ ಪೀಠದ ಕೆಳಗೆ ಕಾಲಿಗೆ ಏನೋ ಸಿಕ್ಕಿತು. ಏನೆಂದು ತೆಗೆದು ನೋಡಿದರೆ ಅದು ಪಾದಗಳನ್ನು ಇಟ್ಟುಕೊಳ್ಳಲು ಇರುವ ಮಣೆ ಯೆಂದು ತಿಳಿಯಿತು. ಈ ಮಣೆಗೆ ಸಹ ಮೆತ್ತೆ ಹಾಕಿ ಮೃದುವಾಗಿ ಇಟ್ಟಿರುತ್ತಾರೆಂದರೆ ಈ ಜನ ಎಷ್ಟು ಭೋಗಪ್ರಿಯರು ಎಂಬುದು ತಿಳಿಯು ತ್ತದೆ. ಆದರೆ ಅವರು ಇಷ್ಟೆಲ್ಲ ಸೌಕರ್ಯಗಳನ್ನು ಒದಗಿಸಿಕೊಳ್ಳಲು ಎಷ್ಟು ಕಷ್ಟಪಟ್ಟಿರುವರೆಂಬು ದನ್ನು ಮರೆಯಲಾಗದು.

ರೈಲುಗಾಡಿಯ ಒಂದು ಪಕ್ಕದಲ್ಲಿ ನಮ್ಮ ಗಾಡಿಗಳಲ್ಲಿರುವಂತೆಯೇ ಓಡಾಡಲು ಒಂದು ಕಿರು ದಾರಿ ಇರುತ್ತದೆ. ಅಂಕಣಗಳೊಳಗೆ ಕುಳಿತಿರುವ ಪ್ರಯಾಣಿಕರಿಗಾಗಿ (ನಮ್ಮ ರೈಲು ಗಾಡಿಗಳಲ್ಲಿರುವಂತೆಯೇ) ಹೊರಗಡೆಯ ರಮ- ಣೀಯ ದೃಶ್ಯಗಳನ್ನು ನೋಡಲು ಗಾಜಿನ ಹಲಗೆಗಳು ಇರುತ್ತವೆ. ಜೊತೆಗೆ, ಕಿರುದಾರಿಯ ಬದಿಗಿರುವ ಇನ್ನೊಂದು ಗೋಡೆಗೂ ಇವುಗಳಿಗಿಂತ ವಿಶಾಲವಾದ ಗಾಜಿನ ಹಲಗೆಗಳನ್ನು ಹಾಕಿರು ತ್ತಾರೆ. ಗಾಡಿಯು ಹೆಚ್ಚು ಕುಲುಕದೆ ಇರುವುದ- ರಿಂದ ಇಲ್ಲಿಯೂ ನಿಂತುಕೊಂಡು ಗಾಜಿನ ಮೂಲಕ ಹೊರಗಿನ ಸುಂದರ ದೃಶ್ಯಗಳನ್ನು ನೋಡ ಬಹುದು. ಗಾಡಿಯ ಒಳಗೆ ಹೋಗಲು ಇರುವ ಬಾಗಿಲುಗಳು ನಾವು ಮೆಟ್ಟಲುಗಳ ಮೇಲೇರುತ್ತಿ ರುವಂತೆಯೇ ತಂತಾನೇ ತೆಗೆದುಕೊಂಡು, ಒಳಗೆ ಹೋದನಂತರ ಮುಚ್ಚಿಕೊಳ್ಳುತ್ತವೆ. ಹಾಗೆಯೇ ಗಾಡಿಯ ಒಂದು ಬಂಡಿಯಿಂದ ಮತ್ತೊಂದು ಬಂಡಿಗೆ ಹೋಗಬೇಕಾದರೂ, ಕದಗಳ ಹಿಂದೆ ಹೆಜ್ಜೆಯಿಟ್ಟ ಕೂಡಲೇ ಅವು ತೆಗೆದುಕೊಂಡು ಒಳಗೆ ಹೋದಮೇಲೆ ಮುಚ್ಚಿಕೊಳ್ಳುತ್ತವೆ. ಈ ಸೌಕರ್ಯ ಇಲ್ಲದಿದ್ದರೆ, ಚಳಿಗಾಲದಲ್ಲಂತೂ, ಕೊರೆತವನ್ನು ತಡೆಯುವುದು ಕಷ್ಟ.

ಇಷ್ಟೆಲ್ಲ ಸೌಕರ್ಯಗಳಿದ್ದರೂ, 'ಟಿ ಜಿ.ವಿ.' ಯಂತಹ ಒಂದೆರಡು ಗಾಡಿಗಳನ್ನು ಬಿಟ್ಟರೆ, ರೈಲುಗಾಡಿಗಳಲ್ಲಿ ಓಡಾಡುವ ಜನ ಕಡಿಮೆಯೆಂದೇ ಹೇಳಬೇಕು. ಕುಳಿತುಕೊಳ್ಳುವ ಪೀಠಗಳ ಸಂಖ್ಯೆಯ ಅರ್ಧದಷ್ಟೂ ಯಾತ್ರಿಕರು ಇರುವು- ದಿಲ್ಲ. ಇಂತಹ ಪರಿಸ್ಥಿಯಲ್ಲೂ ರೈಲು ವ್ಯವಸ್ಥೆ ಯನ್ನು ಇಷ್ಟು ಸಮರ್ಪಕವಾಗಿ ಹೇಗೆ ನಡೆಸುವ- ರೆಂಬುದು ಕೌತುಕದ ವಿಷಯವೇ ಸರಿ. ✡



# ಪದಾರ್ಥ ಚಿಂತಾಮಣಿ

- ೮೪ .

## ವಾರದ ಮೂಲ - ಗುಂಡಾ ಗಡಿಪಾರು !

ಒಂದು ವಾರ ಅವಧಿ ಎನ್ನುತ್ತೇವೆ; ಆದಿತ್ಯ ವಾರ ಎನ್ನುತ್ತೇವೆ. ಇದರಿಂದ ವಾರ ಅಂದರೆ ದಿವಸ ಅಥವಾ ವಾಸರ ಎಂದು ಕರೆಯುವ ಅರುವತ್ತು ಗಳಿಗೆಯ ಅವಧಿ ಎಂಬ ಕಲ್ಪನೆಯಾಗಬಹುದು; ನಿಜ ಹಾಗಿಲ್ಲ. ವಾರ ಶಬ್ದಕ್ಕಿರುವ ಅನೇಕ ಅರ್ಥಗಳಲ್ಲಿ **ಸರದಿ** ಎಂಬುದೊಂದು. ಆದಿತ್ಯವಾರ ಎನ್ನುವಾಗ ಸೂರ್ಯನ ಸರದಿಯೆಂಬುದು ಮೂಲ ತಾತ್ಪರ್ಯ. ಪ್ರಾಚೀನ ಖಗೋಲಶಾಸ್ತ್ರಿಗಳಿಗೆ ಗೊತ್ತಿದ್ದ ಏಳು 'ಗ್ರಹ'ಗಳಲ್ಲಿ (ಸೂರ್ಯ-ಚಂದ್ರ ಸೇರಿ) ಒಬ್ಬೊಬ್ಬರಿಗೂ ಒಂದೊಂದು ದಿನದ ಒಡೆತನವನ್ನು ಸರದಿಯ ಮೇಲೆ ಗೊತ್ತುಪಡಿಸಿ ಅವರವರ ಸರದಿಯ ದಿನಕ್ಕೆ ಅವರವರ ಹೆಸರು ಕೊಟ್ಟವರು ಕ್ರಿಸ್ತಪೂರ್ವ ಎರಡನೇ ಸಹಸ್ರಮಾನದಲ್ಲಿದ್ದ ಕಾಲ್ಡಿಯನ್ ಜ್ಯೋತಿಷಿಗಳು. ಹೀಗೆ ರವಿವಾರ, ಸೋಮವಾರ ಇತ್ಯಾದಿ. (ವಾರದ ದಿನಗಳ ಆಧಿಪತ್ಯದ ಕಲ್ಪನೆ ವಾರಕ್ಕೆ ಇರುವ ತಮಿಳು ಹೆಸರಾದ ಆಟ್ಟೈ (= ಆಳಿ) ಎಂಬುದರಲ್ಲಿ ಸ್ಪಷ್ಟವಾಗಿ ಎದ್ದು ಕಾಣಿಸುತ್ತದೆ. ತಮಿಳಿನಲ್ಲಿ ವಾರಕ್ಕಿರುವ ಇನ್ನೊಂದು ಹೆಸರಾದ ಕಿಳಿಮೈ ಸಂಬಂಧಸೂಚಕವಾದದ್ದು. ಬುದನ್ ಕಿಳಿಮೈ ಎಂದರೆ ಬುಧನಿಗೆ ಸೇರಿದ ವಾರ.) ಎಲ್ಲ ಗ್ರಹಗಳ ಸರದಿ ಮುಗಿಯುವಾಗ ಅದೂ ವಾರವೇ— ಏಳು ದಿನಗಳ ಸರದಿ— ಅದೇ **ಸಪ್ತಾಹ** (= ಏಳು ಪಗಲು)- ಅದೇ ಪಾರಸೀಕ ಹಫ್ತಾ (ಹಫ್ತಹ್). ಹೀಗೆ ನಾವು ವಾರ ಎಂದು ಕರೆಯುವ ಅವಧಿಗೆ ಇಂಗ್ಲೀಷಿನಲ್ಲಿ Week (ವೀಕ್) ಎನ್ನುತ್ತಾರಲ್ಲ, ಆ ಜರ್ಮಾನಿಕ್ ಮೂಲದ ಶಬ್ದದ ಅರ್ಥ ಕೂಡ ಸರದಿ ಎಂದೇ ಇರಬೇಕೆಂದು ಭಾಷಾಶಾಸ್ತ್ರಿಗಳು ತರ್ಕಿಸಿದ್ದಾರೆ.

ವಾರ ಎಂಬ ಶಬ್ದವೇ ಸೂಚಿಸುವಂತೆ, ವಾರ ಎಂಬ ಕಾಲಾವಧಿ ಏಳೇ ದಿನಗಳದಿರಬೇಕೆಂಬ ನಿಯಮವಿಲ್ಲ. ಒಂದು ತಿಂಗಳಿಗಿಂತ ಕಡಿಮೆಯ ಯಾವ ಅವಧಿಗೂ ಅದು ನಡೆಯಬಹುದೆಂದೂ ಅದು ಗ್ರಹಗಳ ಒಡೆತನಕ್ಕೇ ಸೇರಬೇಕೆಂಬ ನಿಯಮವಿಲ್ಲೆಂದೂ ಬ್ರಿಟಾನಿಕಾ ವಿಶ್ವಕೋಶ ಹೇಳುತ್ತದೆ. ದೆಕಾದ್ (decad) ಎಂಬ ಹತ್ತು ದಿನಗಳ ವಾರವೂ ಹಿಂದೆ ಇತ್ತು. ಐದು, ನಾಲ್ಕು, ಮೂರು ದಿನಗಳ ವಾರಗಳೂ ಆಫ್ರಿಕದಲ್ಲಿ ಬೇರೆ ಬೇರೆಡೆ ಇದ್ದವು. ಪ್ರಾಚೀನ ಸ್ಕ್ಯಾಂಡಿನೇವಿಯದಲ್ಲಿ ಐದು ದಿನಗಳ ವಾರವಿತ್ತು. ವಾರಕ್ಕೆ ಮರಾಠಿಯಲ್ಲಿರುವ ಸಮಾನ ಪದಗಳಲ್ಲಿ ಒಂದಾದ **ಅಠವಡಾ** (= ಆಠವಡಾ) ಪದದಿಂದ ಸೂಚಿತವಾಗುವಂತೆ ಒಂದು ಕಾಲದಲ್ಲಿ **ಏಳು ಅಲ್ಲ,** ಎಂಟು (= ಆಠ್) ದಿನಗಳ ವಾರ ಈ ದೇಶದಲ್ಲಿ ಇದ್ದಿರಬಹುದು ಎನಿಸುತ್ತದೆ. ಈ ಬೇರೆ ಬೇರೆ ಅವಧಿಗಳ ವಾರಗಳಿಗೆ ಹೆಸರುಗಳನ್ನು ಕೊಡುವುದರಲ್ಲಿ ಕೂಡ ವೈವಿಧ್ಯವಿತ್ತು. ಆಫ್ರಿಕದಲ್ಲಿ ಸಮೀಪದ ಯಾವ ಊರಲ್ಲಿ ಸಂತೆ ಯಾವ ದಿನ ನಡೆಯುತ್ತದೋ ಆ ಊರಿನ ಹೆಸರನ್ನೇ ಆ ದಿನಕ್ಕೆ ಕೊಡುತ್ತಿದ್ದರಂತೆ.

ಒಂದು ಪದಾರ್ಥಕ್ಕೆ ಒಂದು ಭಾಷೆಯಲ್ಲಿ ಪ್ರಚುರವಾಗಿದ್ದ ಪದಗಳು ಬಿದ್ದು ಹೋಗಿ ಪರಭಾಷೆಯ ಶಬ್ದಗಳು ಯಾಕೆ ಚಾಲ್ತಿಗೆ ಬರುತ್ತವೆ? ಉಚ್ಚಾರ ಸೌಲಭ್ಯವೇ? ಕೇವಲ ಫ್ಯಾಶನ್ನೇ? ಹೇಳುವುದು ಕಷ್ಟ. ದ್ರಾವಿಡದ **ಅಳೆ** ಶಬ್ದವನ್ನು ತೆಗೆದುಕೊಳ್ಳಿ. ತಮಿಳು, ತೆಲುಗು, ಮಲೆಯಾಳಿ, ತುಳು ಭಾಷೆಗಳಲ್ಲೆಲ್ಲ ಈ ಶಬ್ದ ಇದೆ. ಮೂಲ ಅರ್ಥ **ಮಜ್ಜಿಗೆ, ಮೊಸರು.** ಇಂದಿಗೂ ತುಳುವಿನಲ್ಲಿ ಮಜ್ಜಿಗೆಗೆ ಇದೇ ಪದ ಇದೆ. ಹಳೇ ಕನ್ನಡ

ಕಾವ್ಯಗಳಲ್ಲಿ **ಬೆಣ್ಣೆ** ತೆಗೆದ ಮೊಸರಿಗೆ ಅಳೆಯೆಂದೇ ಕರೆದಿದೆ. ಆದರೆ ಈಗ **ಅಳೆ** ಎಂದರೆ ದಕ್ಷಿಣ ಕನ್ನಡದಲ್ಲಿ ಬಿಟ್ಟರೆ ಕರ್ನಾಟಕದ ಮತ್ತೆಲ್ಲಿಯೂ ಜನಕ್ಕೆ ಅರ್ಥವೇ ಆಗದು. ಕನ್ನಡದಲ್ಲಿ ಅದನ್ನೀಗ ಮಜ್ಜಿಗೆಯೆಂದೇ ದಕ್ಷಿಣ ಕನ್ನಡಾದಿಯಾಗಿ ಸರ್ವತ್ರ ಕರೆಯಲಾಗುತ್ತಿದೆ. ಉಚ್ಚಾರ ಸೌಲಭ್ಯವಾದರೆ ಅಳೆ ಮಜ್ಜಿಗೆಗಿಂತ ಎಷ್ಟೋ ಸುಲಭ. **ಮಜ್ಜಿಗೆ** ಬಹುಶಃ ತೆಲುಗಿನ ಮೂಲಕ ಕನ್ನಡಕ್ಕೆ ಬಂದ ಪದವಿರಬೇಕು. ಅಲ್ಲಿಗೂ ಅದು ಪ್ರಾಕೃತದಿಂದ ಬಂದ ಪದ. **ಮಜ್ಜಿಅ** (ತೆಲುಗು—ಮಜ್ಜಿಗ)—ಸಂಸ್ಕೃತ **ಮಾರ್ಜಿತಾ**. ಮಾರ್ಜಿತಾ ಎಂದರೆ ತೊಳೆದದ್ದು, ಸ್ವಚ್ಛ ಮಾಡಿದ್ದು, ತಿಕ್ಕಿದ್ದು = ಮತ್ತು ಅನ್ವಯದಿಂದ ಕಡೆದದ್ದು ಎಂದರ್ಥ. ಮಜ್ಜಿಗೆ ಕಡೆಯುವುದನ್ನು ಕೆಲ ಪ್ರದೇಶಗಳಲ್ಲಿ **ತೊಳೆಯುವುದು** ಎನ್ನುತ್ತಾರೆಂದು ಗಮನಿಸಬೇಕು. ಸಂಸ್ಕೃತದಲ್ಲಿ **ಮಾರ್ಜಿತಾ** ಎಂದರೆ ಸಕ್ಕರೆ ಮಸಾಲೆ ಬೆರಸಿ (ಕಡೆದ) ಮೊಸರು. ಗುಜರಾಥಿಗಳು ಹೆಚ್ಚಾಗಿ ಮೊಸರಿಗೆ ಸಕ್ಕರೆ ಬೆರಸಿಯೇ ಉಣ್ಣುತ್ತಾರೆ. ನಾವು **ಮೊಸರು** ಎನ್ನುವುದಕ್ಕೆ ತೆಲುಗಿನಲ್ಲಿ **ಮೊಗರು**, ತಮಿಳಿನಲ್ಲಿ **ಮೊಚರ್**, **ಮೊಲರ್** ಎಂಬ ಜ್ಞಾತಿ ಪದಗಳಿವೆ. ಆದರೆ ನಮ್ಮಲ್ಲಿ ಹುಳಿ ಹಾಕಿ ಹೆಪ್ಪುಗಟ್ಟಿಸಿದ ಹಾಲಿಗೆ ಆ ಹೆಸರು ಸಲ್ಲುತ್ತಿದ್ದರೆ ಚಾಲ್ತಿ ತಮಿಳಿನಲ್ಲಿ ಮಲೆಯಾಳಿಯಲ್ಲಿ **ಮಜ್ಜಿಗೆಗೇ ಮೊಅರ್, ಮೋರ್** ಎನ್ನುತ್ತಾರೆ. "ಅಃ ನಲ್ಲ ಪುಳಿ ಮೋರ್!" (ಆಂ ಒಳ್ಳೇ ಹುಳಿ ಮಜ್ಜಿಗೆ) ಎಂದು ಮಲೆಯಾಳಿಗಳು ಮೆಚ್ಚುತ್ತಾರೆ. "ಮೋರ್ ಕೊಳಂಬು" (ಮಜ್ಜಿಗೆ ಪಳಿದ್ಯ) ಅಂದರೆ ತಮಿಳರಿಗೆ ಇಷ್ಟ. ತೆಲುಗಿನಲ್ಲಿ ಮೊಸರಿಗೆ **ಪೆರುಗು** ಎನ್ನುವುದು ಈಗಿನ ರೂಢ ಪದ. ಪೆರುಗು ಎನ್ನುವುದು ಅನ್ವರ್ಥಕ ಶಬ್ದ ಎನ್ನಿ. ಪೆರು (ಪೆಱು) ಎಂದರೆ ಹೆರೆಗಟ್ಟುವುದು. ಹೆಪ್ಪಾಗು (ಹೆಪ್ಪು = ಪೆರುಪು = ಪೆಱುಪುವುದು) ಅರ್ಥಾತ್ ಗಟ್ಟಿಯಾಗುವುದು. **ಹೆತ್ತುಪ್ಪ** ಎಂದು ಉತ್ತರ ಕರ್ನಾಟಕದಲ್ಲಿ ಹೇಳುವುದು (ಹೆತ್ತ ತುಪ್ಪ = ಹೆರೆದ ತುಪ್ಪ = ಗಟ್ಟಿಯಾದ ತುಪ್ಪ) ಇದಕ್ಕೋಸ್ಕರವೇ ಮೊಸರು ಗಟ್ಟಿಯಾಗಿರಬೇಕಲ್ಲವೇ—ಈಗಿನ ಪೇಟೇ ಹಾಲಿನಲ್ಲಿ ಇದು ಆಗದಿದ್ದರೂ! ಇದನ್ನೆಲ್ಲ ಬಿಟ್ಟು ತಮಿಳಿನಲ್ಲಿ ಈಗ ಮೊಸರಿಗೆ **ತೈರ್** ಎಂಬ ಹೆಸರು ಬಳಕೆಯಲ್ಲಿದೆ ಮಲೆಯಾಳದಲ್ಲಿಯೂ ಅದೇ "**ತೈರೊಡ್ಯ**" ಮೊಸರೊಡೆ ತಮಿಳರಿಗೆ ಪ್ರೀತಿ. ತೈರೊಡ್ಯೆ ಎಂದು ಅಯ್ಯರುಗಳಿಗೆ ಅಡ್ಡ ಹೆಸರೇ ಇದೆ! ಅದನ್ನು ತಯಾರಿಸುವುದರಲ್ಲಿ ಅವರು ಎತ್ತಿದ ಕೈ. ವಿಚಿತ್ರವೆಂದರೆ ಇದು ದ್ರಾವಿಡ ಪದವಲ್ಲ. ಅದು ಸಂಸ್ಕೃತ **ತಕ್ರದ** ಅಪಭ್ರಂಶ. ಸಂಸ್ಕೃತದಲ್ಲಿ ತಕ್ರ ಎಂದರೆ ಮೊಸರಲ್ಲ **ಮಜ್ಜಿಗೆ**! ಸಂಸ್ಕೃತವನ್ನು ಅದಷ್ಟು ದೂರ ಇಟ್ಟ ತಮಿಳು ಯಾಕೆ ಸಂಸ್ಕೃತದ ತಕ್ರವನ್ನು ಒಳಗೆ ಕರೆಯಿತೋ ಕಂಡವರಾರು?

**ಗುಂಡಾ** ಜನರ ಹಾವಳಿ ಹೆಚ್ಚಾದ ಈ ಕಾಲದಲ್ಲಿ **ಗುಂಡಾ** ಶಬ್ದ ಎಲ್ಲಿಂದ ಬಂತೆಂಬ ಪ್ರಶ್ನೆ ಕೇಳಿದರೆ ತಪ್ಪಲ್ಲ. ಮರಾಠಿ ವ್ಯುತ್ಪತ್ತಿ ಕೋಶ ಇವನನ್ನು ಕನ್ನಡಕ್ಕೆ ಗಂಟು ಹಾಕುತ್ತದೆ. ಆದರೆ ಮರಾಠಿಯಲ್ಲಿ **ಗುಂಡಾ** ಎಂದರೆ ಬುದ್ಧಿವಂತ, ಧೂರ್ತ ಎಂದರ್ಥ. ಕನ್ನಡದ **ಗುಂಡ** ಕಲ್ಲು ಗುಂಡಿನಂತಿರುವವ. ಅವನು ಧೂರ್ತ ಹೇಗಾದನು? ಈ ಕನ್ನಡ ಗುಂಡನಿಗೂ ಉತ್ತರದ ಭಾಷೆಗಳಲ್ಲಿರುವ **ಗುಂಡಾನಿಗೂ** ಸಂಬಂಧ ಇರಲಿಕ್ಕಿಲ್ಲ. ಸುನೀತಿ ಕುಮಾರ ಚಟರ್ಜಿ ಪ್ರಕಾರ ಗುಂಡಾ ಇರಾಣದಿಂದ ಬಂದವನು. **ಗುಂದಾ**, **ಗುಂದ್** ಎಂದರೆ ಹೊಸ ಪರ್ಶಿಯನ್ ಭಾಷೆಯಲ್ಲಿ ತಂಡ, ಜಂಗುಳಿ; ಹಳೇ ಪರ್ಶಿಯನ್ನಿನಲ್ಲಿ ಸೈನ್ಯ, ದಂಡು. ಈ ಶಬ್ದ ತುರ್ಕಿ ಆಕ್ರಮಣಕ್ಕೂ ಮುಂಚೆ ಭಾರತಕ್ಕೆ ನುಸುಳಿ ಕಾಲಾಂತರದಲ್ಲಿ 'ದ'ವನ್ನು 'ಡ'ವಾಗಿಕೊಂಡಿರಬೇಕು. ದಂಡಿನವರು ಪುಂಡರೆಂಬ ಪ್ರತೀತಿ ಭಾರತದಲ್ಲೆಲ್ಲಾ ಇದ್ದದ್ದೇ. ಹಳೇ ಬಂಗಾಲಿ ಶಾಸನಗಳಲ್ಲಿ ಬ್ರಾಹ್ಮಣರಿಗಿತ್ತ ಅಗ್ರಹಾರಗಳಲ್ಲಿ ಈ ಗ್ರಾಮದಲ್ಲಿ ದಂಡಿನವರಿಗೆ ಪ್ರವೇಶ ನಿಷೇಧಿಸಿದೆ ಎಂದು ಇರುತ್ತಿತ್ತಂತೆ. ಹೀಗೆ ಗುಂಡಾಗಳಿಂದ ಕನ್ನಡಿಗರು ಕೈ ಝಾಡಿಸಿಕೊಂಡು ಭಾರತದ ಗಡಿಯಾಚೆಗೆ ಬೆರಳು ತೋರಿಸಬಹುದು!

—**ಪಾ. ವೆಂ.**

ಅನಿಸಿಕೆ

# ನೋವಿನಲ್ಲೂ ನಗೆ

ಆತ್ಮೀಯರಿಗೆಲ್ಲಾ ಹೊಸ ವರ್ಷದ ಶುಭ ಹಾರೈಸುವ ಸಲುವಾಗಿ ಗ್ರೀಟಿಂಗ್ ಕಾರ್ಡ್ ತರಲು ಪೇಟೆಗೆ ಹೊರಟಿದ್ದೆ. ದಾರಿಯಲ್ಲಿಯೇ ಎದುರಾದಳು ಕಾಲೇಜು ಸಹಪಾಠಿ ವಾಚಾಳಿ ಗೀತಾ. ಮುಗುಳ್ನಗೆಯ ವಿನಿಮಯದ ನಂತರ ಆಕೆ ಮಾತಿಗಾರಂಭಿಸಿದಳು.

"ಏನೇ, ಎಷ್ಟು ದಿನವಾಯ್ತಲ್ವ, ನಿನ್ನನ್ನು ನೋಡಿ? ಏನ್ಸಮಾಚಾರ? ಈಗ ಏನ್ಮಾಡ್ತಾ ಇದ್ದೀಯಾ?" ಪ್ರಶ್ನೆಗಳ ಸುರಿಮಳೆಯನ್ನೇ ಕರೆದಳು.

"ಏನ್ಮಾಡೋದು? ಡಿಗ್ರಿ ಮುಗಿದ್ಮೇಲೆ ಇಲ್ಲೇ ಪ್ರೈವೇಟ್ ಕಂಪನಿಯಲ್ಲಿ ವರ್ಕ್ ಮಾಡ್ತಾ ಇದೀನಿ. ನೀನು ಏನು ಮಾಡ್ತಾ ಇದೀಯಾ ಗೀತಾ?" ಎಂದೆ.

"ಮದ್ವೆ ಮಾಡ್ಕೊಂಡು, ಅತ್ತೆ ಮಾವನ ಮನೇಲಿ, ಯಜಮಾನರ ಜೊತೇಲಿ ಆರಾಮವಾಗಿದ್ದೀನಿ," ಎಂದಾಗ ದಿಟ್ಟ ಹೆಣ್ಣು ಸ್ವೇಚ್ಛಾಚಾರಿ ಗೀತಾ ಎಷ್ಟೊಂದು ಬದಲಾಗಿದ್ದಾಳೆಂದು ನನಗೇ ಆಶ್ಚರ್ಯವಾಯಿತು.

"ಓಹೋ... ಅಮ್ಮಾವ್ರು ಯಾವಾಗ ಈ ಬಲೆಗೆ ಬಿದ್ದದ್ದು?" ಎಂದೆ.

"ನನ್ನ ಮದ್ವೆ ಆಗಿ ಆಗ್ಲೇ ಒಂದು ವರ್ಷ ಆಗ್ತಾ ಬಂತು. ಅರ್ಜಂಟಲ್ಲಿ ಎಲ್ಲಾ ಗೊತ್ತಾಯ್ತು. ಅದಕ್ಕೆ ಯಾರನ್ನೂ ಕರೆಯೋಕೇ ಆಗ್ಲಿಲ್ಲ. ಏನು ತಿಳ್ಕೋಬೇಡ್ವೆ. ಇಲ್ಲೇ ಹತ್ತನೇ ಕ್ರಾಸಲ್ಲೇ ನಮ್ಮನೆ ಇರೋದು, ಬಾರೆ ಮನೆಗೆ," ಎಂದು ಆಹ್ವಾನಿಸಿದಳು.

"ಹೋಗ್ಲಿ ಬಿಡು. ನನಗೆ ಬೇಕಾಗಿದ್ದದ್ದು ಅದೇ ತಾನೇ, ಸರಳ ವಿವಾಹವಾಗಬೇಕು, ವರ ವರದಕ್ಷಿಣೆ ವಿರೋಧಿಯಾಗಿರಬೇಕು, ವಿದ್ಯಾವಂತನಾಗಿರಬೇಕು, ತಕ್ಕ ಮಟ್ಟಿಗೆ ರೂಪವಂತನಾಗಿರಬೇಕು ಅಂತೆಲ್ಲಾ ಹೇಳ್ತಿದ್ದೆಯಲ್ಲ. ಅದರಂತೆಯೇ ನೆರವೇರಿದೆಯೆ?" ಎಂದಾಗ ಗೀತಾಳ ಕಣ್ಣಲ್ಲಿ ನೀರಾಡಿತು.

"ಕಾಲೇಜ್ನಲ್ಲಿದ್ದಾಗ ನಾವಂದುಕೊಂಡಿದ್ದೇ ಒಂದು, ಈಗ ಆದದ್ದೇ ಮತ್ತೊಂದು. ಹೆಣ್ಣು ಜೀವನ ಪರ್ಯಂತ ತೌರಿನ ಆಶ್ರಯದಲ್ಲಿಯೇ ಇರ್ತೀನಿ ಅನ್ನೋದು ಅಸಾಧ್ಯ ಮಣಿ. ನನ್ನ ಆದರ್ಶ, ಜೋರು ಎಲ್ಲಾ ಕಾಲೇಜಿನ ಚರ್ಚಾಸ್ಪರ್ಧೆ, ಪ್ರಬಂಧಮಾಲೆಯಲ್ಲೇ ಮುಗಿದೋಯ್ತು. ಅತ್ತಿಗೆ ಶಾಲಿನಿ ಮನೆಗೆ ಬಂದ್ಮೇಲೆ ಅವಿವಾಹಿತೆ, ನಿರುದ್ಯೋಗಿ

ಹೆಣ್ಣಿನ ಬಾಳು ಎಷ್ಟು ಕಠೋರ ಅಂತ ಗೊತ್ತಾಯ್ತು. ತಂದೆಯಿಲ್ಲದ ನಾನು ತಾಯಿಯ ಬಲವಂತಕ್ಕೆ ಮಣಿದು, ಶ್ರೀಮಂತಿಕೆ ಗೂಡಿನೊಳಗಿರೋ ಶೇಖರನನ್ನ ಮದ್ವೆಯಾದೆ, ಈಗ ಅನ್ನಿಸ್ತಾ ಇದೆ ಹೆಜ್ಜೆ ಹೆಜ್ಜೆಗೂ ನನ್ನ ಸಹನೆ, ತಾಳ್ಮೆ ಪರೀಕ್ಷಾ ನಡೀತಾ ಇದೇಂತ."

"ಅಲ್ಲ ಗೀತಾ, ಕಾಲೇಜ್ನಲ್ಲಿ ಯಾವುದೇ ಚರ್ಚಾಸ್ಪರ್ಧೆಗೆ ಹೋದ್ರೂ ಎಲ್ಲರ ಮೆಚ್ಚುಗೆ ಗಳಿಸಿ ಪ್ರಥಮ ಬಹುಮಾನ ಪಡೀತಿದ್ದ ನೀನು, ಇಷ್ಟೊಂದು ಸಾಧುವಾಗ್ಬಿಟ್ಟಿದ್ದಿಯಲ್ಲಾ, ನೀನು ಕೆಲಸಕ್ಕೆ ಎಲ್ಲೂ ಟ್ರೈ ಮಾಡ್ಲಿಲ್ವಾ?" ಎಂದೆ.

"ಬೇಕಾದಷ್ಟು ಕಡೆ ಅಪ್ಲಿಕೇಷನ್ ಹಾಕ್ದೆ, ಆದ್ರೆ ಕೆಲ್ಸ ಸಿಗ್ಬೇಕಲ್ಲಾ, ಎಲ್ಲಿ ಹೋದ್ರೂ ನಿರಾಸೆಯ ಉತ್ತರವೇ. ತೌರಿನಲ್ಲಿ ಪ್ರತಿ ಹೆಜ್ಜೆಗೂ ತಪ್ಪು ತಿಳಿಯೋ ಅತ್ತಿಗೆ ಬಂದ್ಮೇಲೆ ಅಮ್ಮನ ಮೂಕವೇದನೆ, ಅಣ್ಣನ ಅಸಹಾಯಕತೆ ಸೇರಿ ನಾನು ಮದುವೆಯಾಗಲೂ ನಿರ್ಧರಿಸುವಂತೆ ಮಾಡ್ತು. ಎಲ್ಲರ ಒಪ್ಪಿಗೆ ಪಡೆದು ಶೇಖರ್ ಒಬ್ಬ ಆದರ್ಶ ವ್ಯಕ್ತಿ ಎಂದು ನಂಬಿ ಆತನನ್ನು ವಿವಾಹವಾದೆ. ಆದರೆ ಸಹಕಾರ ಮನೋಭಾವವಿಲ್ಲದ ಶೇಖರ್ ಸಮಾಜದ ದೃಷ್ಟಿಯಲ್ಲಿ ನನ್ನ ಒಲವಿನ ಪತಿಯಾದರು.

"ಶ್ರೀಮಂತಿಕೆಯ ಚಿಪ್ಪಿನಲ್ಲೇ ಅಡಗಿರುವ ನನ್ನ ಅತ್ತೆ ರೂಪಕ್ಕೆ ಮರುಳಾಗಿ ನನ್ನಂಥ ಮಧ್ಯಮ ವರ್ಗದ ಹೆಣ್ಣನ್ನು ವರದಕ್ಷಿಣೆಯಿಲ್ಲದೆ ತಮ್ಮ ಮಗನಿಗೆ ಮದುವೆ ಮಾಡಿಕೊಂಡಿದ್ದಾರಂತೆ, ಇನ್ನು ಆಕೆ ನನ್ನೊಂದಿಗೆ ಹೊಂದಿಕೊಂಡಿರಲು ಹೇಗೆ ಸಾಧ್ಯ ಹೇಳು? ಒಟ್ಟಿನಲ್ಲಿ ನಾನು ಕರಿಯೋ ಬಾಂಡ್ಲೆಯಿಂದ ತಪ್ಪಿಸಿಕೊಂಡು ಹುರಿಯೋ ಬಾಂಡ್ಲೆಗೆ ಬಿದ್ದಂತಾಗಿದೆ ಅಷ್ಟೆ. ಇನ್ನೂ ನನ್ನ ಕಥೆ ಹೇಳ್ತಾ ಹೋದ್ರೆ ಇವತ್ತಿಗೆ ಮುಗಿಯೋಲ್ಲಾ... ಹೊತ್ತಾಗಿ ಮನೆಗೆ ಹೋದ್ರೆ ಮನೆ ಮಂದಿಗೆಲ್ಲಾ ಉತ್ತರ ಕೊಡ್ಬೇಕು, ಬರ್ತೀನಿ...... ಏನೂ ಬೇಜಾರು ಮಾಡ್ಕೋಬೇಡ......ಇವತ್ತು ನಿನ್ನ ಮುಂದೆ ನನ್ನ ಕಷ್ಟಾನೆಲ್ಲ ಹೇಳಿದ್ಮೇಲೆ ಎಷ್ಟೋ ನೆಮ್ಮದಿಯಾಯ್ತು; ಬರ್ತೀನಿ." ಎಂದು ಹೊರಟೇಬಿಟ್ಟಳು.

ನಾನು ಹೊರಟ ಕೆಲಸವನ್ನೂ ಮರೆತು, ಗೀತಳ ಮಾತಿನ ಗುಂಗಿನಲ್ಲಿಯೇ ಮನೆ ತಲಪಿದೆ. ಗೀತಳಂತೆ ನಮ್ಮ ಸಮಾಜದಲ್ಲಿ ನೋವಿನಲ್ಲೂ ನಗೆಯ ಮುಖವಾಡ ಧರಿಸಿ ಬಳಲುತ್ತಿರುವ, ಅಸಹಾಯಕ ಹೆಣ್ಣುಗಳೆಷ್ಟು ಮಂದಿ ಇರುವರೋ ಎಂದು ಬಹಳ ಬೇಸರವಾಯಿತು.

ಅವಿವಾಹಿತ ಹೆಣ್ಣಿನ ಕಷ್ಟ ಒಂದು ರೀತಿಯದಾದರೆ, ಸ್ವತಂತ್ರ ಜೀವನ ಸಾಗಿಸಲು ಸಹಾಯವಾಗುತ್ತದೆಂದು ಉದ್ಯೋಗಿಯಾದರೆ, ಅಲ್ಲಿಯ ಪರಿಸ್ಥಿತಿ ಹೇಗಿರುತ್ತದೋ! ಅದೂ ಒಂದು ರೀತಿಯ ಕಳವಳವನ್ನುಂಟುಮಾಡುತ್ತದೆ. ಇವಕ್ಕೆಲ್ಲಾ ಇತಿಶ್ರೀ ಹಾಡಿ ವಿವಾಹವಾದರೆ, ಕುಟುಂಬದ ಸದಸ್ಯರ ಸಹಕಾರವಿಲ್ಲದಾಗ ಹೆಣ್ಣು ತನ್ನತನವನ್ನು ಕಾಪಾಡಿಕೊಳ್ಳಲು ಹೇಗೆ ಸಾಧ್ಯ? ಹೆಣ್ಣಿಗೆ ಹೆಣ್ಣೇ ಶತ್ರುವಾದರೆ, ನಮ್ಮ ಪುರುಷಪ್ರಧಾನ ಸಮಾಜದಲ್ಲಿ ಇನ್ನು ಆಸರೆ ಬಯಸುವುದಾದರೂ ಯಾರಲ್ಲಿ? ಇದಕ್ಕಾಗಿಯೇ ಇರಬಹುದಲ್ಲವೇ ಹೆಣ್ಣು ಶಿಶು ಜನಿಸಿತೆಂದರೆ ಅನೇಕ ಮಾತೃ ಹೃದಯಗಳು ಮರುಗುವುದು?

—ಕೆ. ಎಸ್. ಮಣಿಕಾಶೋಳು

"ಏನ್ರೀ ಭಾಳ ಬಿಜಿನಾ?"–ಎಂದು ಕೇಳಿದಳು ಕ್ಲಾರಾ.

"ಏನಿಲ್ಲ. ಇದೊಂದು ಸ್ಟೇಟ್‌ಮೆಂಟ್ ಬೇಕಂತೆ ಮಿತ್ಸುಸಾಕಿಗೆ. ಮಾಡ್ತಿದ್ದೆ"–ಎಂದೆ.

"ಏನ್ಮಾಡ್ತಾರಂತೆ? ನೊಬೆಲ್ ಪ್ರೈಜ್ ಪಡೀತಾರಂತೇನು?" - ವ್ಯಂಗ್ಯವಾಗಿ ಕೇಳಿದಳು. ಲೂಯಿ ಅವರ ಬಗ್ಗೆ ಇಂದು ಹೀಗೇಕೆ ಮಾತಾಡುತ್ತಿದ್ದಾಳೆ ಎಂದು ಕೌತುಕಗೊಂಡೆ.

"ಯಾವುದಾದರೂ ಪ್ರೈಜ್ ಪಡಕೊಳ್ಳಿ ನಮಗೇನು ? ನಮ್ಮ ಸಂಬಳ ಸರಿಯಾಗಿ ಕೊಟ್ರೆ ಸಾಕು. ಅಲ್ಲವೇ?"-ಎಂದೆ.

"ಇಲ್ಲೇ ನಾವು ತಪ್ಪುರೋದು. ಈ ಜಪಾನೀ ಮುದುಕ ಇತ್ತೀಚೆಗೆ ನಡೆಸೋ ಪ್ರಯೋಗಗಳ ಉದ್ದೇಶ ಕುರಿತು ನೀವೇನಾದರೂ ಯೋಚಿಸಿದ್ದೀರಾ ?" ಎಂದು ಕುರ್ಚಿಯಲ್ಲಿ ಕುಳಿತು ಪ್ರಸ್ತಾಪಿಸಿದಳು.

"ಯಾಕೆ ಸುಮ್ನೆ ತಲೆ ಬಿಸಿ ಮಾಡ್ಕೊಳ್ತೀ?"– ಕೇಳಿದೆ.

"ಈವತ್ತಿನ 'ಅಸಾಹಿ' ನೋಡಿದಿರಾ?" ಎಂದಾಗ "ಇಲ್ಲ"-ಎಂದು ಸುಳ್ಳೇ ಹೇಳಿದೆ. 'ಅಸಾಹಿ ಶಿಂಬೂನ್' ಪತ್ರಿಕೆಯಲ್ಲಿಯ ಸುದ್ದಿಗಳನ್ನು, ಸಂಪಾದಕೀಯವನ್ನು, ಓದುಗರ ಪತ್ರಗಳನ್ನೂ ಓದಿದ್ದೆ. ನನ್ನದೊಂದು ಲೇಖನವೂ ಅದರಲ್ಲಿ ಪ್ರಕಟವಾಗಿತ್ತು. ಆದರೆ ಈ ಕ್ಲಾರಾ ಯಾವುದರ ಬಗ್ಗೆ ಹೇಳುತ್ತಾಳೋ ನೋಡಬೇಕೆನ್ನಿಸಿತು.

"ಪತ್ರಿಕೆ ಓದದೇ ಇರೋರು, ರೇಡಿಯೋ ಸುದ್ದಿ ಕೇಳದವರು ಈಗಿನ ಜಗತ್ತಿನಲ್ಲಿ ಇರಲಿಕ್ಕೆ ಯೋಗ್ಯರಲ್ಲ. ನಾವು ಏನೇ ಕೆಲಸ ಮಾಡಿದರೂ ಅದರ ಉದ್ದೇಶ, ಐತಿಹ್ಯ, ಧೋರಣೆ, ಪೂರ್ವಾಪರ ಸ್ಥಿತಿಗತಿಗಳನ್ನು ಮೊದಲೇ ತಿಳಿದುಕೊಂಡವರಾಗಿರಬೇಕು. ಇಲ್ಲವಾದರೆ ಪ್ರಾಣಿಗಳಿಗೂ ನಮಗೂ ಇರೋ ವ್ಯತ್ಯಾಸವಾದರೂ ಏನು?" ಎಂದು ಕೆಣಕಿ ನುಡಿದಳು. ಈ ಹುಡುಗಿ ಇಷ್ಟೊಂದು ಬುದ್ಧಿವಂತಳಾದುದು ಎಂದಿನಿಂದ?- ಎಂದು ನನ್ನಲ್ಲೇ ಪ್ರಶ್ನೆ ಹುಟ್ಟಿತು.

"ಈ ಹಳದಿ ತೊಗಲಿನವರಿಗೆ ನಮ್ಮ ರಕ್ತವೇ ಬೇಕು. ಹಿಪೋಥೀರಿಯಾ ಅಂದರೆ ತಡೆರಹಿತ ರಕ್ತಸ್ರಾವದಂತಹ ರೋಗಗಳಿಗೆ ರಕ್ತ ಬಳಸಬಹುದು. ಆದರೆ ಫ್ಲೂದಂತಹ ಸಾಮಾನ್ಯ ರೋಗಗಳಿಗೂ ರಕ್ತ ಬಳಸುವುದೇ? ಜಪಾನೀಯರ ಈ ರಕ್ತದಾಹ ನಿಲ್ಲುವುದೆಂದು? ನಾವು ಆಫ್ರಿಕನ್ನರು ರಕ್ತ ಕೊಟ್ಟೇ ಸಾಯಬೇಕು"- ಎಂದು ಕ್ಷೀಣ ಸ್ವರದಲ್ಲಿ ಹೇಳಿದಳು. ನನ್ನ ಲೇಖನದ ವಿಚಾರಗಳನ್ನೇ ಈಕೆ ಸ್ಫುಟವಾಗಿ ಹೇಳುತ್ತಿದ್ದಾಳಲ್ಲಾ! ಲೇಖನದ ಪರಿಣಾಮ ಚನ್ನಾಗಿ ಆಗಿದೆ ಎಂದು ಹೆಮ್ಮೆ ಪಟ್ಟೆ.

---

## ಹ. ಸಿ. ಭೈರನಟ್ಟಿ

---

"ನಾವೇನು ರಕ್ತವನ್ನು ಪುಕ್ಕಟೆ ಕೊಡುತ್ತೇವೆಯೇ? ಅವರು ಹಣ ಕೊಡ್ತಾರೆ, ನಾವು ರಕ್ತ ಕೊಡ್ತೇವೆ. ಇದೊಂದು ವ್ಯವಹಾರ. ಅವರೇನೂ ಒತ್ತಾಯದಿಂದ ನಮ್ಮ ರಕ್ತ ಹೀರುತ್ತಿಲ್ಲ. ಜಾಗ್ರುತಿ ಆಗಬೇಕಿದ್ದರೆ ಅದು ಮೊದಲು ನಮ್ಮಲ್ಲಿ ಆಗಬೇಕು. ಅದನ್ನು ಬಿಟ್ಟು ಆ ಜಪಾನೀಯರನ್ನು ಬೈದರೆ ಏನು ಪ್ರಯೋಜನ? ಜಪಾನೀ ಹುಡುಗಿಯರ ಮೈಮಾಟ, ಕುಣಿತ ನೋಡಲು ಸಿನೇಮಾಕ್ಕೆ ಹೋಗಬೇಕಾದರೆ ಇವರು ರಕ್ತ ಮಾರಿಕೊಳ್ಳಬೇಕು; ನಮ್ಮವರ ಹವ್ಯಾಸ ಮನೋರಂಜನಗಳಿಗೂ ಒಂದು ಮಿತಿ ಆಗತ್ಯ"—ಎಂದು ತಪ್ಪನ್ನು ನಮ್ಮ ಜನಾಂಗದ ಮೇಲೆಯೇ ಹಾಕಿಕೊಂಡು ವಾದಿಸಿದೆ.

ಕ್ಲಾರಾ ಒಪ್ಪಲಿಲ್ಲ, ಬದಲಾಗಿ ಸಿಡಿದೆದ್ದಳು. "ಯಾರೋ ಬಂದಿದ್ದರು ಹಾಗೆ ಸಿನೀಮಾಕ್ಕೆ, ಪೋಲು ಮಾಡಿಕೊಳ್ಳುತ್ತಿರಬಹುದು. ಅಂದ ಮಾತ್ರಕ್ಕೆ ಅದು ಸಾರ್ವತ್ರಿಕ ಆಗಲು ಸಾಧ್ಯವಿಲ್ಲ. ಪಟ್ಟಾಸು ಹೆಚ್ಚು ಜನ ಹಣ ಪಡೆದು ರಕ್ತ ಮಾರೋದು ಹೊಟ್ಟೆಗಾಗಿ, ಬಟ್ಟೆಗಾಗಿ. ಆ ಜಪಾನೀಯರಲ್ಲಿ ಹಣವಿದೆ ಎಂದ ಮಾತ್ರಕ್ಕೆ ನಮ್ಮ ರಕ್ತವನ್ನು ಕೊಂಡು ತಮ್ಮಲ್ಲಿ ದುರುಪಯೋಗಪಡಿಸೋದು ಸಾಧ್ಯವೇ ? ಅವರಲ್ಲಿಯ ಹಣಕ್ಕೆ ನಮ್ಮಲ್ಲಿಯ ಜನರನ್ನೆಲ್ಲಾ ಕೊಳ್ಳಬಹುದು ಅಂತಿಟ್ಕೊಳ್ಳಿ. ಕೊಂಡು ನಮ್ಮ ದೇಶಕ್ಕೆ ಕರೆದೊಯ್ದು ರಕ್ತ ಹೀರಿ ಹೀರಿ ಕೊಂದುಹಾಕಿಬಿಟ್ಟರೆ ಅದೂ ಒಂದು ವ್ಯವಹಾರ ಅಂತಾನೇ ನೀವು ಹೇಳೋದು? ಈ ದುರ್ನ ಕೆಲಸಕ್ಕೆ ನಮ್ಮಂಥವರು ಸಹಕರಿಸುತ್ತಿದ್ದೇವಲ್ಲಾ–" ಎಂದು ಉದ್ರೇಕಗೊಂಡು ನುಡಿದಾಗ ಕುರ್ಚಿಯಿಂದೆದ್ದು ಅವಳನ್ನು ಕರೆದುಕೊಂಡು ಹೋಗಿ ಅವಳ ಕುರ್ಚಿಯ ಮೇಲೆ ಕೂಡ್ರಿಸಿ. "ಸ್ಸಾರಿ ಕ್ಲಾರಾ. ಈಗ ಸದ್ಯ ನಾವಿದ್ದರೇ ಈ ಸಮಸ್ಯೆಯನ್ನು ಬಿಡಿಸೋದು ಸಾಧ್ಯವಿಲ್ಲ. ಕೊಂಚ ದಿನ ಸುಮ್ಮನೆ ಇರೋಣ. ನಿನಗೆಷ್ಟು ಈ ವಿಷಯ ಮನಸ್ಸಿನಲ್ಲಿ ನಾಟಿದೆಯೋ ಅಷ್ಟೇ ನನ್ನಲ್ಲೂ ನಾಟಿದೆ. ಆದರೆ ನಾನು ಹೇಳ್ತಾ ಇಲ್ಲ. ತೋರಿಸ್ತಾ ಇಲ್ಲ. ಅಂದ ಮಾತ್ರಕ್ಕೆ ನಾನು ನಿರ್ಲಿಪ್ತನಾಗಿ ನಮ್ಮ ಜನಾಂಗಕ್ಕಾಗುವ ಅನ್ಯಾಯವನ್ನು ಸಹಿಸುತ್ತ ಕುಳಿತಿದ್ದೇನೆಂದಲ್ಲ. ಸಮಯ ಬರಲಿ, ಪ್ರತಿಭಟಿಸೋಣ. ಮೊದಲು ನಾವು ಜಾಗ್ರತರಾಗಬೇಕು. ಅದಕ್ಕೆ ಈಗ ಲೇಖನಗಳನ್ನು ಬರೆಯುತ್ತಿರುವೆ. ಆ 'ಅಸಾಹಿ ಶಿಂಬೂನ್' ಪತ್ರಿಕೆಯಲ್ಲಿ ಪ್ರಕಟವಾದ ಲೇಖನವನ್ನು ಬರೆದವ ನಾನೆ–" ಎಂದು ವಿಷಯ ಬಹಿರಂಗಗೊಳಿಸಿದೆ. ಕಣ್ಣು ಅಗಲಿಸಿ ನನ್ನ ಕಡೆ ತದೇಕ ದೃಷ್ಟಿಯಿಂದ ಎಷ್ಟೋ ಹೊತ್ತು ನೋಡುತ್ತ ಕುಳಿತಳು. "ನೀವು ನಿಜ ಹೇಳ್ತೀದೀರಾ?"– ಎಂದು ಅನುಮಾನಿಸಿ ಕೇಳಿದಳು. "ರಕ್ತದ ಉದ್ಯಮದಲ್ಲಿ ನಿರತರಾದ ನಾವೇ ಬರೆಯಲು ಮುಂದಾಗದಿದ್ದರೆ ಬೇರೆಯವರು ಬರೆಯಬೇಕೆಂದು ಅಪೇಕ್ಷಿಸುವದು ತಪ್ಪಲ್ಲವೇ?"– ಎಂದಾಗ ಅವಳಲ್ಲಿ ನಂಬಿಗೆ ಹುಟ್ಟಿತು, ಧೈರ್ಯ ತುಂಬಿತು. ಮೈ ಉಬ್ಬಿಸಿದಳು. "ಆಯ್ ಆ್ಯಮ್ ಸ್ಸಾರಿ. ನೀವು ಈ ಸಮಸ್ಯೆಯನ್ನು ಇಷ್ಟೊಂದು ಗಂಭೀರವಾಗಿ ತೆಗೆದುಕೊಂಡಂತೆ ಅನ್ನಿಸಲಿಲ್ಲ. ಅದಕ್ಕೇ ನಿಮಗೆ ಖಾರವಾಗಿ ಮಾತಾಡಿದೆ" ಎಂದಳು. "ಸಹಜವಾಗಿಯೇ ಮಾತಾಡಿರುವಿ, ಸುಮ್ಮಿರು" ಎಂದು ರಮಿಸಿದೆ. "ನಿಮ್ಮ ಬಗ್ಗೆ ಬಹಳ ಈಗ ಹೆಮ್ಮೆ ಅನ್ನಿಸುತ್ತಿದೆ" ಎಂದು ಮೆಚ್ಚುಗೆ ವ್ಯಕ್ತಪಡಿಸಿದಳು. ಪುನಃ ನನ್ನ ಟೇಬಲ್ಲಿಗೆ ಬಂದು ಒಂದು ಸಿಗರೇಟು ಹಚ್ಚಿದೆ.

ಈ ರಕ್ತ ವ್ಯಾಪಾರದ ಬಗ್ಗೆ ಸಮಾಜ ಕಲ್ಯಾಣ ಇಲಾಖೆಯೂ ತಟಸ್ಥವಾಗಿ ಉಳಿದಾಗಲೇ ನಾನು ಸಿಡಿದೆದ್ದದ್ದು. ಹಸಿ ರಕ್ತ ಸಂಸ್ಕರಣದ ಒಂದೊಂದು ಹೊಸ ಸ್ಥಾವರವನ್ನು ಸ್ಥಾಪಿಸುವಾಗ ನನ್ನೆದೆಗೆ ಯಾರೋ ಭರ್ಚಿಯಿಂದ ಚುಚ್ಚಿ ರಕ್ತ ಹೀರಿದ ಅನುಭವವಾಗಿತ್ತು. ಅತ್ಯಾಧುನಿಕ ತಾಂತ್ರಿಕ ಸೌಕರ್ಯ ಒದಗಿಸುವ ಮಶೀನುಗಳು ನಮ್ಮಲ್ಲಿ ಬರುವಾಗ ರಕ್ತ ಹೀರುವ ರಾಕ್ಷಸರು ಬಂದಂತೆ ನನಗನ್ನಿಸುತ್ತಿತ್ತು. ಟಾನಿಕ್ಕುಗಳಿಗೂ ನಮ್ಮ ರಕ್ತವನ್ನೇ ಜಪಾನೀಯರು ಬಳಸುತ್ತಿದ್ದಾರೆಂಬುದನ್ನು ಪತ್ರಿಕೆಯಲ್ಲಿ ಓದಿದಾಗ ನನ್ನ ನರನಾಡಿಗಳೆಲ್ಲವೂ ಉಬ್ಬಿದವು. ಜಪಾನೀಯರು ಆಫ್ರಿಕನ್ನರ ಆಕ್ರೋಶ ಅರ್ಥ ಮಾಡಿಕೊಳ್ಳಲಿ. ಮಾನವೀಯತೆಯನ್ನು ಬೆಳೆಸಿಕೊಳ್ಳಲಿ. ಮನುಷ್ಯನ ರಕ್ತದ ದುರುಪಯೋಗವನ್ನು ನಿಲ್ಲಿಸಲಿ ಎಂಬ ಉದ್ದೇಶದಿಂದಲೇ ಲೇಖನಗಳನ್ನು ಬರೆಯಲು ಪ್ರಾರಂಭಿಸಿದ್ದು. 'ಅಸಾಹಿ'ಯಲ್ಲಿ ಪ್ರಕಟವಾದುದು ಮೊದಲನೆಯ ಲೇಖನ. ನೀವು ದಿಢೀರ್ ಶ್ರೀಮಂತರಾಗಬೇಕೇ? ಹಾಗಾದರೆ ನೀವು ಸ್ಮಗ್ಲಿಂಗ್ ಮಾಡಬೇಡಿ. ನೋಟುಗಳನ್ನು ದ್ವಿಗುಣಗೊಳಿಸಬೇಡಿ. ಇವೆಲ್ಲ ಕಾನೂನು ಬಾಹಿರ, ಹೆಚ್ಚು ಅಪಾಯಕರ. ಇದರ ಬದಲು

ರಕ್ತದ ವ್ಯಾಪಾರದಲ್ಲಿ ತೊಡಗಿರಿ ಸಾಕು, ಜಪಾನೀಯರ ಯೆನ್ನುಗಳು ಹೊಳೆ ಹರಿದಂತೆ ಹರಿದು ಬರುತ್ತವೆ ಎಂಬ ಘೋಷಣೆಗಳು ನಗರಗಳಲ್ಲಿ ಗೋಡೆ ಬರಹಗಳಾಗಿದ್ದವು. ವಿಶ್ವ ಆರೋಗ್ಯ ಸಂಸ್ಥೆ (W. H. O.) ಕೂಡ ರಕ್ತದ ದುರುಪಯೋಗ ಕುರಿತು ಎಚ್ಚರಿಕೆ ನೀಡಿತ್ತು. ಆದರೂ ವ್ಯವಹಾರ ನಡೆದೇ ಇತ್ತು ನಿರಾತಂಕವಾಗಿ. ಜಪಾನೀ ವಿಜ್ಞಾನಿ ಮಿತ್ಸುಸಾಕಿ ಬಗ್ಗೆ ಮೊದಲಿಗಿದ್ದ ಸದ್ಭಾವನೆ ನನ್ನಿಂದ ದೂರವಾಗಿ ದ್ವೇಷ ಹುಟ್ಟತೊಡಗಿದ್ದು ಈ ರಕ್ತ ವ್ಯಾಪಾರದಲ್ಲಿ ಅವರು ಕೂಡ ಶಾಮೀಲಾಗುತ್ತಿದ್ದಾರೆ ಎಂಬ ಕಾರಣಕ್ಕಾಗಿಯೋ. ಆದರೆ ನನಗೊಂದು ಉದ್ಯೋಗ ಕೊಟ್ಟು ಪ್ರತಿ ತಿಂಗಳು ತಪ್ಪದೆ ಸಾಕಷ್ಟು ಸಂಬಳ ಕೊಡುತ್ತಿದ್ದ ಅವರ ಎದುರಿಗೆ ಮಾತಾಡುವಷ್ಟು ಧೈರ್ಯ ನಾನು ಮಾಡಿರಲಿಲ್ಲ. ರಕ್ತ ವ್ಯಾಪಾರದ ಬಗ್ಗೆ ಅಂಕಿ ಸಂಖ್ಯೆಗಳು 'ಅಸಾಹಿ' ಪತ್ರಿಕೆಯಲ್ಲಿ ಪ್ರಕಟವಾದಾಗ ಅದರ ಕಟಿಂಗ್ಸ್ ತಂದು ಡ್ರಾದಲ್ಲಿ ಇಟ್ಟಿದ್ದೆ. ಕೇವಲ ಆರೇಳು ತಿಂಗಳಲ್ಲಿ ೮೨೦ ಕಿಲೋ ರಕ್ತ ನಮ್ಮಲ್ಲಿಂದ ಜಪಾನಕ್ಕೆ ರವಾನೆಯಾಗಿತ್ತು. ಮಿತ್ಸುಸಾಕಿ ಬಂದ ಮೇಲೆ ಆ ಕಟಿಂಗ್ಸ್ ಒಯ್ದು ತೋರಿಸಿ ಇದಕ್ಕೇನು ಉತ್ತರ ಕೊಡುತ್ತೀರಿ? ನಿಮ್ಮಂತಹ ಅಸಾಮಾನ್ಯ ವಿಜ್ಞಾನಿಗಳಲ್ಲೇ ಮಾನವೀಯತೆ ಇರದಿದ್ದರೆ ಸಾಮಾನ್ಯರು ಹೇಗೆ ಮಾನವೀಯತೆ ಬೆಳೆಸಿಕೊಂಡಾರು ಎಂದೆಲ್ಲ ಕೇಳಬೇಕೆಂದಿದ್ದೆ, ಆದರೆ ಕೇಳಲಾಗಲಿಲ್ಲ. ಕೇಳಿದ ತಕ್ಷಣದಿಂದಲೇ ನೌಕರಿಯನ್ನು ಕಸಿದುಕೊಂಡರೆ ಮುಂದೇನು ಗತಿ ಎಂಬ ಯೋಚನೆ ಬಂದು ಡ್ರಾದಲ್ಲಿಯೇ ಇಟ್ಟಿದ್ದ, ಕಟಿಂಗ್ಸ್ ತಬ್ಬಲಿಯಾಗಿ ಕುಳಿತುಕೊಂಡಿದ್ದವು.

ಕಾರು ಬಂದ ಸಪ್ಪಳ ಕೇಳಿಸಿತು. ಹೊರಗೆ ನೋಡಿದೆ, ಮಿತ್ಸುಸಾಕಿ ಕಾಣಿಸಿದರು. "ಬಂದಾಂತ ಕಾಣ್ತದೆ ಮುದುಕ"— ಎಂದು ಕ್ಲಾರಾ ತನ್ನ ಅಸಂತೋಷ ವ್ಯಕ್ತಪಡಿಸಿದಳು. ಮಿತ್ಸುಸಾಕಿ ಬಂದವರೇ "ಸ್ಟೇಟ್‌ಮೆಂಟ್ ಮಾಡಿದಿರಾ?" ಎಂದು ಕೇಳಿದರು. "ಇನ್ನೂ ಆಗಿಲ್ಲ, ನಾಳೆ ಮುಗಿಯಬಹುದು" ಎನ್ನುವಾಗ ತಪ್ಪಿತಸ್ಥ ಮನೋಭಾವವಿತ್ತು. "ಅರೆ ಯಾಕ್ರೀ ಹಾಗೆ ಮಾತಾಡ್ತಿದೀರಿ? ಆ ಸ್ಟೇಟ್‌ಮೆಂಟ್ ಮಾಡೋದೇ ಅವಶ್ಯವಿಲ್ಲ. ಬನ್ನಿ ಒಳಗೆ ಹೇಳ್ತೀನಿ ಎಲ್ಲಾ. ಕ್ಲಾರಾ ನೀವೂ ಬನ್ನಿ, ಒಂದು ಮಹತ್ವದ ಪತ್ರ ಬಂದಿದೆ" ಎನ್ನುತ್ತ ಒಳಗೆ ಹೋದರು. "ಮತ್ತಷ್ಟು ರಕ್ತ ಪೂರೈಸಿರಿ, ಹೆಚ್ಚಿನ ಬೆಲೆ ಕೊಡ್ತೇವೆ— ಎಂದು ಯಾವನೋ ಒಬ್ಬ ಜಪಾನಿ ರಾಕ್ಷಸ ಪತ್ರ ಬರೆದಿರಬಹುದು"— ಎಂದು ಕ್ಲಾರಾಗೆ ಸೌಮ್ಯವಾಗಿ ಹೇಳಿದೆ. "ಮತ್ತೇನಿರುತ್ತದೆ ಮಹತ್ವದ ವಿಷಯ?" ಎಂದು ಸಿಟ್ಟುಸಿರು ಬಿಟ್ಟು ಡ್ರಾ ಮುಚ್ಚಿ ಮೇಲೆದ್ದಳು. ಇಬ್ಬರೂ ಹೋಗಿ ಮಿತ್ಸುಸಾಕಿಯ ಎದುರಿಗಿನ ಕುರ್ಚಿಗಳಲ್ಲಿ ಕುಳಿತೆವು.

"ನೀವಿಬ್ಬರೂ ಇನ್ನು ಇಲ್ಲಿ ಕೆಲಸಕ್ಕೆ ಬರುವ ಅಗತ್ಯವಿಲ್ಲ"— ಎಂದರು. ನಾವು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡೆವು. 'ಅಸಾಹಿ'ಯಲ್ಲಿ ಪ್ರಕಟವಾದ ನನ್ನ ಲೇಖನ ಓದಿರಬಹುದೇ? ಅದನ್ನು ನಾನೇ ಬರೆದುದು ಎಂದು ಪತ್ತೆ ಮಾಡಿರಬಹುದೇ? ಸಂಶಯ ಹುಟ್ಟಿತು. ಆದರೆ ಕ್ಲಾರಾಗೇಕೆ ಶಿಕ್ಷೆ? ಹಾಗಾದರೆ ಇನ್ನು ನಮ್ಮ ಸ್ಥಾನಗಳಲ್ಲಿ ಬೇರೆಯವರನ್ನು ನಿಯಮಿಸಿ ಕಳುಹಿಸಿ ಕೊಳ್ಳುತ್ತಾರೆಯೇ?

"ಏನು ವಿಚಾರಿಸ್ತಿದೀರಿ? ಮುಂದಿನ ಕೆಲಸ ಏನು ಎಂತಲೇ? ಹೇಳ್ತೀನಿ ಕೇಳಿ. ನಾನು ಇದುವರೆಗೆ ನಡೆಸಿದ ಪ್ರಯೋಗಗಳ ಬಗ್ಗೆ ನಿಮಗೆ ಹೇಳಿಯೇ ಇರಲಿಲ್ಲ. ನೀವೂ ಕೇಳಿರಲಿಲ್ಲ. ನನ್ನ ಪ್ರಯೋಗಗಳು ಯಶಸ್ವಿಯಾಗಿವೆ ಎಂಬ ಸಂತೋಷ ನನಗೆ. ಅವರ ಯಶಸ್ಸಿನಲ್ಲಿ ನೀವೂ ಪಾಲುಗಾರರು. ಎಡ್ಮಂಡ್ ಪ್ರಯೋಗಾಲಯದ ಬಗ್ಗೆ ನಿಮಗೆ ಗೊತ್ತಿರಬಹುದು. ನಾಳೆಯಿಂದ ನೀವು ಅಲ್ಲಿಯೇ ಕೆಲಸಕ್ಕೆ ಹೋಗಬೇಕು. ಹೊಸ ಪ್ರೊಜೆಕ್ಟ್ ನಾಳೆಯಿಂದ ಅಲ್ಲಿ ಕಾರ್ಯಾರಂಭ ಮಾಡಲಿದೆ. ಇಬ್ಬರಿಗೂ ಒಂದೊಂದು ನೂರು

ಡಾಲರು ಹೆಚ್ಚಿಗೆ ಕೊಡಲು ಹೇಳಿಬಂದಿದ್ದೇನೆ. ನಿಮಗೇನು ಎಲ್ಲಿ ಆದರೇನು ಕೆಲಸ ಮುಖ್ಯ ವಲ್ಲವೆ? ನೀವು ಆಫ್ರಿಕನ್ನರು ತಪ್ಪುತ್ತಿರುವುದು ಇಲ್ಲಿಯೇ. ಯಾವುದೇ ಕೆಲಸವಾದರೂ ಅದರ ಧೋರಣೆ ಉದ್ದೇಶಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಇಲ್ಲವಾದರೆ ನಿರಕ್ಷರಿಗಳಿಗೂ ನಿಮಗೂ ಏನು ವ್ಯತ್ಯಾಸ ಹೇಳಿ. ನೀವಿಬ್ಬರೂ ಇಲ್ಲಿ ವಿಫಲರಾದಿರಿ. ನಮ್ಮ ದೇಶಕ್ಕೆ ರಕ್ತವನ್ನು ಕಳಿಸುವಲ್ಲಿ ನಾನು ಸಹಕರಿಸುತ್ತಿದ್ದರೂ ನಿಮಗಿಬ್ಬರಿಗೂ ಈ ಬಗ್ಗೆ ಗೊತ್ತಾಗಲೇ ಇಲ್ಲ—" ಎಂದು ಮೆಲ್ಲಗೆ ನಕ್ಕು ಜೇಬಿನಲ್ಲಿಯ ಪತ್ರವನ್ನು ತೆಗೆದು ಟೇಬಲ್ ಮೇಲಿಟ್ಟರು. ಅಮೇರಿಕದ 'ಆಹಾರ ಮತ್ತು ಔಷಧಿಗಳ ಆಡಳಿತ'ದ ಕಾರ್ಯಾಲಯದಿಂದ ಬಂದ ಪತ್ರವದು. ವಿಷಯವೇನೆಂದು ಗೊತ್ತಾಗಲಿಲ್ಲ. ನನ್ನ ಲೇಖನದ ವಿಷಯವೂ ಮಿತ್ಸುಸಾಕಿ ಅವರಿಗೆ ಗೊತ್ತಾಗಿಲ್ಲವೆಂದು ಖಾತ್ರಿಯಾಯಿತು. "ನಾವು ವಿಜ್ಞಾನಿಗಳು ನಮಗೆ ಜಗತ್ತಿನ ಯಾವುದೇ ಮನುಷ್ಯ ಜೀವಿಯೂ ಅಷ್ಟೇ. ಮಾನವೀಯ ದೃಷ್ಟಿಯಿಂದ ನೋಡುತ್ತಿರುವವರು. ನಮ್ಮ ದೇಶದವರು ರಕ್ತಕ್ಕೆ ಹಪಾಹಪಿಸುತ್ತಿರುವ ವೈಖರಿಗೆ ಜಿಗುಪ್ಸೆಗೊಂಡು ಕೆಲವು ಪ್ರಯೋಗಗಳನ್ನು ನಡೆಸಲು ನಾನಿಲ್ಲಿಗೆ ಬಂದದ್ದು. ಈ ಟ್ಯೂಬ್ ನೋಡಿ—" ಎನ್ನುತ್ತ ಮಿತ್ಸುಸಾಕಿ ಅವರು ದ್ರವ ತುಂಬಿದ ಒಂದು ಟ್ಯೂಬನ್ನು ತೋರಿಸಿದರು. "ಇದೇ ಫ್ಲೋಸಾಲ್ ಒಂದು ದ್ರಾವಣ ದೇಹದ ಅಂಗಾಂಶಗಳಿಗೆ ಪ್ರಾಣವಾಯುವನ್ನು ಪೂರೈಕೆ ಮಾಡುವ ಮತ್ತು ಅದೇ ಸಮಯದಲ್ಲಿ ಅಂಗಾರಾಮ್ಲವಾಯುವನ್ನು ಅಂಗಾಂಶಗಳಿಂದ ಶ್ವಾಸಕೋಶಗಳಿಗೆ ರವಾನಿಸುವ ದ್ರಾವಣ. ನೈಸರ್ಗಿಕ ರಕ್ತದಂತೆಯೇ ವರ್ತಿಸಬಲ್ಲ, ಯಾವುದೇ ರಕ್ತದ ಗುಂಪಿಗೂ ಸರಿ ಹೊಂದುವ ಇದೊಂದು ಅದ್ಭುತ ದ್ರಾವಣ. ಇನ್ನು ಆಫ್ರಿಕನ್ನರು ರಕ್ತ ಮಾರಿಕೊಳ್ಳುವ ಅವಶ್ಯಕತೆ ಇಲ್ಲ, ಜಪಾನಿಯರು ರಕ್ತಪಿಶಾಚಿಗಳಾಗುವ ಅವಶ್ಯಕತೆಯಿಲ್ಲ" ಎನ್ನುತ್ತಿದ್ದಂತೆ ಕಾರಿನ ಸಪ್ಪಳ ಕೇಳಿಸಿತು. ನಮಗಿಬ್ಬರಿಗೂ ಆ ಕಾರು ಬರುತ್ತಿರುವುದು ಕಾಣಿಸಿತು. ಮಿತ್ಸುಸಾಕಿ ಅವರು ತಿರುಗಿ ನೋಡಿದರು. ನಂತರ ನಮ್ಮ ಕಡೆಗೆ ನೋಡಿ ಹುಬ್ಬು ಗಂಟಿಕ್ಕಿದರು. "ನಮಗೂ ಏನೂ ಗೊತ್ತಿಲ್ಲ. ಯಾರದೂ ಫೋನ್ ಕೂಡ ಬಂದಿರಲಿಲ್ಲ" ಎಂದು ಹೇಳಿದೆ. ನಾವು ಕುಳಿತು ಮಾಡುತ್ತಿರುವುದನ್ನು ಕಾಜಿನ ಕಿಡಕಿಯೊಳಗಿಂದ ನೋಡಿ, ನಮ್ಮ ಕಡೆಗೇ ಬರತೊಡಗಿದರು. "ಯಾರು ನೋಡಿ" ಎಂದು ಮಿತ್ಸುಸಾಕಿ ಅವರು ಹೇಳಿದಾಗ ನಾನು ಹೊರಗೆ ಹೋದೆ.

"ಇದಾರಾ. ಜಪಾನಿ ಮುದುಕ?" ಎಂದು ಆಗಂತುಕ ಆತ್ಮೀಯತೆ ಪ್ರದರ್ಶಿಸಿದರು! ಗೋಣು ಹಾಕಿ "ಇದಾರೆ" ಎಂದೆ. "ಬ್ರೋಕರ್ಸ್ ಬಂದಿದಾರೆ ಅಂತ ಹೇಳಿ" ಎಂದು ನನಗೆ ಹೇಳಿ, ನಂತರ ನನ್ನ ಉತ್ತರಕ್ಕೂ ಕಾಯದೆ ತಮ್ಮ ತಮ್ಮೊಳಗೇ




"...ಬರಿಗಾಲಲ್ಲಿ ನಡೆಯುವವನ ಕರೆದು ಕೆರವಲ್ಲಿ ಹೊಡೆಯೆಂದ ಸರ್ವಜ್ಞ ಅಂತ ನೀವೇ ನಿನ್ನೆ ಹೇಳಿದ್ರಲ್ಲಾ ಸಾರ್...!!"

ಏನೋ ಮಾತಾಡಿಕೊಳ್ಳುತ್ತಾ ನನ್ನ ಜೊತೆಗೇ ಬಂದರು. "ಹಲೋ ಮಿಸ್ಟರ್ ಮಿತ್ಸುಸಾಕಿ" ಎನ್ನುತ್ತ ರೂಮಿನೊಳಗೇ ಪ್ರವೇಶಿಸಿದರು! ಅವರಲ್ಲೊಬ್ಬ "ಆಮ್ ಶ್ಯಾಮ್ ಮಿಸ್ಟರ್..." ಎನ್ನುತ್ತ ಮಿತ್ಸುಸಾಕಿ ಅವರ ಕೈಹಿಡಿದು ಕುಲುಕುತ್ತಿದ್ದಾಗ, ಒಬ್ಬನು ನನ್ನ ಮುಖಕ್ಕೆ ಇನ್ನೊಬ್ಬನು ಕ್ಲಾರಾಳ ಮುಖಕ್ಕೆ ಕೈವಸ್ತ್ರ ಹಿಡಿದರು. ಕ್ಲೋರೋಫಾರ್ಮಿನ ವಾಸನೆಗೆ ತಲೆ ಸುತ್ತತೊಡಗಿತು. ನಾಲ್ಕನೆಯವನು "ಯೂ ರಾಸ್ಕಲ್ ಜಪಾನೀ, ರಕ್ತದಾಹೀ... ನಿನ್ನ ಕೈಗಳನ್ನೇ ಕತ್ತರಿಸಿ ಹಾಕ್ತೇನೆ. ಹೇಗೆ ರಕ್ತ ಕಳಸ್ತೀಯೋ ನೋಡ್ತೇನೆ" ಎನ್ನುತ್ತ ಚೂರಿಯಿಂದ ಅವರ ಭುಜಕ್ಕೆ ಹಾಕುತ್ತಿದ್ದಂತೆಯೇ ಮಿತ್ಸುಸಾಕಿ ಅಸ್ಪಷ್ಟವಾಗಿ ನನಗೆ ಕಾಣಿಸತೊಡಗಿದರು. ನನ್ನ ಶಕ್ತಿಯೇ ನಶಿಸುತ್ತಿದ್ದಂತೆ, ಕಾಲುಗಳು ಸ್ವಾಧೀನ ಕಳೆದುಕೊಂಡಂತೆ ಅನ್ನಿಸಿ ವಿಪರೀತ ತಲೆ ಸಿಡಿತ ಪ್ರಾರಂಭವಾಗಿ ಕುಸಿದೆ.

ಎಚ್ಚರಗೊಂಡಾಗ ಮೊದಲು ಕಾಣಿಸಿದ್ದು ಕ್ಲಾರಾಳ ದೇಹ! ಕುರ್ಚಿಯ ಮೇಲೆ ಕುಳಿತವಳು ಮುಖವನ್ನು ಟೇಬಲ್ ಮೇಲಿಟ್ಟು ಮಲಗಿದ್ದಳು! ಸಾವರಿಸಿಕೊಂಡು ಎದ್ದು ಮಿತ್ಸುಸಾಕಿ ಅವರನ್ನು ನೋಡಿದೆ, ಹೆದರಿಕೆಯಾಯಿತು. ಅವರ ಎರಡೂ ಕೈಗಳನ್ನು ಕಡಿದುಹಾಕಿದ್ದರು! ರಕ್ತಸ್ರಾವ ವಿಪರೀತವಾಗಿತ್ತು. ಅವರು ಕೊನೆಯ ಉಸಿರೆಳೆದಿದ್ದರು. ನನ್ನ ಎದೆಯ ಬಡಿತ ಜೋರಾಯಿತು. ಕ್ಲಾರಾಳ ಹತ್ತಿರ ಬಂದಾಗ ಅವಳು ಸಣ್ಣಗೆ ನರಳಿದ್ದು ಕೇಳಿಸಿತು. "ಕ್ಲಾರಾ" ಎಂದು ಕರೆದು ಮೆಲ್ಲಗೆ ಗಲ್ಲ ತಟ್ಟಿದೆ, ಎದ್ದಳು. ಮಿತ್ಸುಸಾಕಿ ಅವರ ದೇಹ ನೋಡಿ ಚಿಟ್ಟನೇ ಚೀರಿದಳು. ಅವಳ ಸ್ಥಿತಿಯನ್ನು ನೋಡಿ ನಾನು ಮತ್ತಷ್ಟು ಹೆದರಿದೆ. ಅವಳಿಗೆ ಏನು ಹೇಳಬೇಕೆಂಬುದೇ ತೋಚಲಿಲ್ಲ. ಜೋರಾಗಿ ಉಸಿರು ಹಾಕುತ್ತ ಎದ್ದು ಅವರ ಹತ್ತಿರ ಹೋದಳು. "ಅವರು ಜೀವಂತವಾಗಿಲ್ಲ" ಎಂದು ಹೇಳಿದಾಗ ಅವಳ ಕಣ್ಣು ನೀರು ತುಂಬಿಕೊಂಡವು. ಟೆಲಿಫೋನ್ ತಂತಿಯನ್ನೂ ಕಡಿದುಹಾಕಿ ಹೋಗಿದ್ದರವರು. "ನಿಮ್ಮ ಲೇಖನದ ಪ್ರಚೋದನೆಯಿಂದಲೇ ಈ ರೀತಿ ಆದದ್ದು. ನನ್ನಂತಹ ಅಬಲೆಯಲ್ಲೇ ಅಷ್ಟೊಂದು ರೋಷ ತುಂಬಿಸಿತ್ತದು ಎಂದ ಮೇಲೆ ಅಂತಹ ಉಗ್ರವಾದಿಗಳು ಉದ್ರೇಕಕ್ಕೆ ಒಳಗಾದುದು ಸಹಜವೇ" ಎಂದು ಕ್ಲಾರಾ ನುಡಿದು ನನ್ನಲ್ಲಿ ಮೆಲ್ಲಗೆ ಮೊಳಕೆಯೊಡೆದಿದ್ದ ಸಂಶಯಕ್ಕೆ ನೀರೆರೆದಳು. ಟೇಬಲ್ ಮೇಲಿನ ಪತ್ರದ ಬರಹ ಈಗ ಕಾಣಿಸುತ್ತಿತ್ತು. "ನೀವು ಕಳಿಸಿಕೊಟ್ಟ ಫ್ಲೋಸಾರ್ ದ್ರಾವಣವನ್ನು ಎಲ್ಲ ರೀತಿಯಿಂದಲೂ ಪರೀಕ್ಷಿಸಿ ನೋಡಿದೆವು. ಕೃತಕ ರಕ್ತ ಪೂರೈಕೆ ಸಮಸ್ಯೆಗೆ ಕೊನೆಗೂ ಯೋಗ್ಯ ಪರಿಹಾರ ದೊರಕಿದಂತಾಯಿತು. ನಾನ್-ಸೆಲ್ಯುಲರ್ ಪ್ರಾಣವಾಯುವಾಹಕದ ಕಲ್ಪನೆ ನಮ್ಮಲ್ಲಿ ಸಾಕಷ್ಟು ಸಂಶೋಧಕರಿಗೆ ಬಹಳ ವರ್ಷಗಳಿಂದಲೂ ಇತ್ತು. ಆದರೆ ಆ ಕಲ್ಪನೆಯನ್ನು ಸಾಕಾರಗೊಳಿಸಿ ಇಂತಹದೊಂದು ಅದ್ಭುತ ದ್ರಾವಣ ತಯಾರಿಸುವಲ್ಲಿ ನೀವು ಯಶಸ್ವಿಯಾಗಿದ್ದೀರಿ. ನಮ್ಮ ಅಭಿನಂದನೆಗಳನ್ನು ಸ್ವೀಕರಿಸಿ. ಇನ್ನು ಮೇಲೆ ಬೇಕಾದಷ್ಟು ದ್ರಾವಣ ತಯಾರಿಸಿ ಕೃತಕ ರಕ್ತ ಸಮಸ್ಯೆಯನ್ನು ಹೇಳ ಹೆಸರಿಲ್ಲದಂತೆ ಮಾಡಬಹುದು. ಸಮಾಜಕ್ಕೆ ನಿಮ್ಮಂತಹ ವಿಜ್ಞಾನಿಗಳಿಂದ ತುಂಬ ಉಪಕಾರ ಆಗುತ್ತದೆ. ನಿಮಗೆ ಒಳ್ಳೆಯದಾಗಲಿ"– ಎಂದು ಹರಸಿ ಹೊಗಳಿ ಹಾರೈಸಿ ಪತ್ರ ಬರೆಯಲಾಗಿತ್ತು. ಆ ಪತ್ರ ತೋರಿಸಲಿಕ್ಕೆಂದೇ ನಮ್ಮಿಬ್ಬರನ್ನೂ ಒಳಗೆ ಕರೆಸಿದ್ದರು. ಅಷ್ಟರಲ್ಲೇ ಈ ವಿಪತ್ತು! ಕ್ಲಾರಾ ಬಿಕ್ಕತೊಡಗಿದ್ದಳು. ಮಿತ್ಸುಸಾಕಿಯವರ ಸಾವಿಗೆ ಆ ನಾಲ್ವರು ಧಡೂತಿಗಳು ಪ್ರತ್ಯಕ್ಷವಾಗಿ ಕಾರಣರಾಗಿರಬಹುದು, ಆದರೆ ಪರೋಕ್ಷವಾಗಿ ನಾನೇ ಕಾರಣ ಎಂದು ನನ್ನ ಮನಸ್ಸು ಇನ್ನೂ ಚುಚ್ಚಿ ಚುಚ್ಚಿ ಹೇಳುತ್ತದೆ.

✡

# ದಿನಕರ ದೇಸಾಯಿ

ಶ್ಯಾಮ ಹುದ್ದಾರ

ಇಪ್ಪತ್ತೆಂಟು ವರ್ಷದ ಹಿಂದೆ ನೌಕರಿಯೊಂದನ್ನು ದೊರಕಿಸಿಕೊಳ್ಳಲು ನಾನು ನನ್ನಷ್ಟಕ್ಕೇ ಪ್ರಯತ್ನ ನಡೆಸಿದ್ದೆ. ಡಾ. ಶಿವರಾಮ ಕಾರಂತರ ಸಹಾಯದಿಂದ ನನ್ನ ಪ್ರಯತ್ನಕ್ಕೆ ಫಲವೂ ಸಿಕ್ಕಿತ್ತು. ೧೯೫೫ರ ಡಿಸೆಂಬರ್ ತಿಂಗಳ ಮಧ್ಯದಲ್ಲಿ ನನಗೆ ಮುಂಬಯಿಯಿಂದ ಡಾ. ದಿನಕರ ದೇಸಾಯಿ ಅವರ ಪತ್ರ ಬಂದಿತ್ತು. ದೇಸಾಯಿಯವರು ಆ ಪತ್ರದಲ್ಲಿ "ಶಿವರಾಮ ಕಾರಂತರು ನಿಮ್ಮ ಬಗ್ಗೆ ಬರೆದು ತಿಳಿಸಿದ್ದಾರೆ. ನೀವು ಅಂಕೋಲೆಗೆ ಹೋಗಿ ನಮ್ಮ ಟ್ರಸ್ಟಿನ ಕಾರ್ಯದರ್ಶಿ ಶ್ರೀ ದಯಾನಂದ ನಾಡಕರ್ಣಿ ಅವರಿಗೆ ಭೆಟ್ಟಿಯಾಗಿ ಕೆಲಸಕ್ಕೆ ಹಾಜರಾಗಿರಿ" ಎಂದಿಷ್ಟೇ ಬರೆದಿದ್ದರು.

ಶ್ರೀ ದಿನಕರ ದೇಸಾಯಿಯವರ ಹೆಸರು ಈ ಮೊದಲು ನಾನು ಕೇಳಿದ್ದು ಕನ್ನಡ ಶಾಲೆಯಲ್ಲಿ ಓದುವಾಗ. "ಹರಿಗೆಯೆಂದು ಗುಡಿಯನೊಂದು ಕಟ್ಟುತಿರುವಿಯಾ?" ಎಂಬ ಕವಿತೆ ಅವರೇ ಬರೆದದ್ದು ನಮ್ಮ ಪಠ್ಯಪುಸ್ತಕದಲ್ಲಿದ್ದಾಗ. ಎರಡನೆಯ ಸಲದ ನೆನಪೂ ನಿಚ್ಚಳವಾಗಿದೆ– ನಮ್ಮ ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ಕಾರವಾರ ಮತಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿ ಸೋತಾಗ. ಇವೆರಡರ ಹೊರತಾಗಿ ನಾನು ದೇಸಾಯಿಯವರನ್ನು ಗುರುತಿಸಲಾರೆ.

ಮುಂಬಯಿಯಿಂದ ಬಂದ ಅವರ ಪತ್ರವನ್ನು ಮತ್ತೆ ಮತ್ತೆ ಓದಿದೆ. ಎಲ್ಲಿಯೂ 'ಇಂಟರ್‌ವ್ಯೂ' ಎಂಬುದರ ಪ್ರಸ್ತಾಪವೇ ಇದ್ದಿಲ್ಲ. ಅಂಕೋಲೆಗೆ ಹೊಂದ ನಂತರ ಸಂದರ್ಶನ ನಡೆದು ತಲೆಗೆ ಕೈ ಕೊಟ್ಟು ತಿರುಗಿ ಬರಬಹುದೇ ಎಂದು ಒಳ ಮನಸ್ಸಿನಲ್ಲಿ ಅಸಮಾಧಾನ ಆಗಾಗ ಕಾಣಿಸಿಕೊಂಡಿತ್ತು. ಆ ಹೊಯ್ದಾಟದ ಮನಸ್ಸಿನಲ್ಲಿಯೇ ಹುಬ್ಬಳ್ಳಿ-ಕಾರವಾರ ಬಸ್ ಹಿಡಿದು ಅರಬೈಲ ಘಟ್ಟ ಇಳಿದು ಅಂಕೋಲೆ ಮುಟ್ಟಿದ್ದೆ. ನಾನು ಬರುವಾಗ ಮನಸ್ಸಿನಲ್ಲಿ ಮಾಡಿಕೊಂಡ ಕಲ್ಪನೆಗಳೆಲ್ಲ ಬುಡಮೇಲಾಗಿ ನಾನು ದಿನಕರ ದೇಸಾಯಿಯವರಲ್ಲಿ ಭದ್ರವಾಗಿ ಉಳಿಯುವಂತೆ ಮಾಡಿದವು. ಇದಕ್ಕೆ ಕಾರಣ ದಿನಕರ ದೇಸಾಯಿಯವರು ನನ್ನನ್ನು ತುಂಬ ವಿಶ್ವಾಸ ಪ್ರೀತಿಯಿಂದ ಕಂಡದ್ದು. ನಾನು ನೌಕರದಾರನೆಂಬ ಭಾವನೆಯನ್ನೇ ಅವರು ತಂದು ಕೊಡಲಿಲ್ಲ. ನನ್ನ ವೈಯಕ್ತಿಕ ಓದು-ಬರಹಗಳಿಗೆ ಅವರು ನೀಡಿದ ಪ್ರೋತ್ಸಾಹ ತೋರಿಸಿದ ಮಾರ್ಗದರ್ಶನ ಮರೆಯಲಾರದಂಥವು.

## ವಿಜಾಪುರ ಜಿಲ್ಲೆಯ ಬಾಂಧವ್ಯ

ದಿನಕರ ದೇಸಾಯಿಯವರಿಗೂ ನಮ್ಮ ವಿಜಾಪುರ ಜಿಲ್ಲೆಗೂ ಬಹಳ ಹತ್ತಿರದ

ಸಂಬಂಧ. ೧೯೪೨ರಲ್ಲಿ ನನ್ನ ಜಿಲ್ಲೆಯಲ್ಲಿ ಭೀಕರ ಬರಗಾಲ ಬಿದ್ದ ನೆನಪು ನನಗೂ ಉಂಟು. ಜನತೆಗೆ ಅನ್ನವಿಲ್ಲ: ದನಗಳಿಗೆ ಮೇವು ಸಿಗದಂಥ ಸಂಕಟದ ಸ್ಥಿತಿ. ದುಡಿದುಣ್ಣುವ ಜನಕ್ಕೆ ಕೆಲಸವಿಲ್ಲ. ಅಂಥ ಪ್ರಸಂಗದಲ್ಲಿ ಮುಂಬಯಿಯ ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿಯು, ದಿ. ಥಕ್ಕರ್ ಬಾಪಾ ಅವರ ಅಧ್ಯಕ್ಷತೆಯಲ್ಲಿ ವಿಜಾಪುರ ಜಿಲ್ಲಾ ಬರಗಾಲ ಪರಿಹಾರ ಸಮಿತಿಯೊಂದನ್ನು ರೂಪಿಸಿಕೊಂಡು ಮುಂಬಯಿಯಲ್ಲಿ ನಾನಾ ಬಗೆಯಿಂದ ನಿಧಿ ಸಂಗ್ರಹಿಸಿ, ಬಟ್ಟೆ ಸಂಗ್ರಹಿಸಿ ನಮ್ಮ ಜಿಲ್ಲೆಯ ಸಂತ್ರಸ್ತ ಜನತೆಯ ಸಹಾಯಕ್ಕೆ ಧಾವಿಸಿತು. “ಸೊಸೈಟಿಯಲ್ಲಿ ಕನ್ನಡ ಬಲ್ಲವನು ನಾನೇ ಒಬ್ಬ. ಥಕ್ಕರ್ ಬಾಪಾ ನನ್ನನ್ನೇ ಕಳಿಸಿಕೊಟ್ಟರು. ಈ ಸಮಿತಿಗೆ ನಾನೇ ಗೌರವ ಕಾರ್ಯದರ್ಶಿಯಾಗಿದ್ದೆ. ನನ್ನ ಜೊತೆಯಲ್ಲಿ ಕೌಜಲಗಿ ಹನುಮಂತರಾಯರು ಸಹಕಾರ್ಯದರ್ಶಿಗಳಾಗಿದ್ದರು,” ಎಂದು ದೇಸಾಯಿ ತಮ್ಮ ಹಳೆಯ ನೆನಪನ್ನು ಹೇಳಿದ್ದರು.

ಬರಗಾಲದ ಪರಿಹಾರ ಕಾರ್ಯದ ನಿಮಿತ್ತವಾಗಿ ಜಿಲ್ಲೆಯ ಉದ್ದಗಲಕ್ಕೂ ಅಡ್ಡಾಡಿ ಜನರಿಗೆ ದುಡಿಯಲು ಕೆಲಸವನ್ನೂ ದನಗಳಿಗಾಗಿ ಪಾಂಜರಪೋಳಗಳನ್ನೂ ದುರ್ಬಲ, ವೃದ್ಧರು ಹಾಗೂ ಮಕ್ಕಳಿಗಾಗಿ ಗಂಜೀ ಕೇಂದ್ರವನ್ನೂ ನಡೆಸುವ ಮಹಾಕಾರ್ಯದಲ್ಲಿ ದೇಸಾಯಿಯವರು ತೋರಿಸಿದ ನಿಷ್ಠೆ, ಪಟ್ಟ ಪರಿಶ್ರಮ ಆದರ್ಶಪ್ರಾಯವಾದವು. ಸಾರ್ವಜನಿಕ ನಿಧಿಯನ್ನು ಹೇಗೆ ಸತ್ಪ್ರಯೋಜನವಾಗುವಂತೆ ವಿನಿಯೋಗಿಸಬೇಕೆಂಬುದಕ್ಕೆ ದಿನಕರ ದೇಸಾಯಿಯವರಿಂದ ನಮ್ಮ ಇಂದಿನ ಸಮಾಜಸೇವಕರೆಂದು ಸೋಗು ಹಾಕಿ ಮೆರೆಯುವವರು ಕಲಿತುಕೊಳ್ಳಬೇಕು. ಪರಿಹಾರ ಸಮಿತಿಗೆ ದೇಸಾಯಿ ಒಪ್ಪಿಸಿದ ವರದಿ ಒಂದು ಆದರ್ಶ. ಆ ಸಣ್ಣ ಪುಸ್ತಕದಲ್ಲಿ ಎಲ್ಲ ಲೆಕ್ಕಗಳ ವಿವರ, ಕೂಡಿದ ನಿಧಿ-ಹಣದ ರೂಪದಲ್ಲಿ ಎಷ್ಟು, ಬಟ್ಟೆ ರೂಪದಲ್ಲಿ ಎಷ್ಟು, ದನಗಳಿಗಾಗಿ ಸಂಗ್ರಹಿಸಿದ ಮೇವು, ಹೊಟ್ಟು ಎಷ್ಟು, ಯಾವ ಯಾವ ಊರಲ್ಲಿ ದನಗಳ ಪಾಂಜರಪೋಳ ಯಾವ ತಿಂಗಳಿನಿಂದ ಪ್ರಾರಂಭಿಸಲಾಯಿತು, ಅಲ್ಲಿ ಎಷ್ಟು ದನಗಳನ್ನು ಪೋಷಿಸಲಾಯಿತು, ಗಂಜೀ ಕೇಂದ್ರಗಳು, ಅಲ್ಲಿ ಆಹಾರ ತೆಗೆದುಕೊಂಡವರು, ಬಟ್ಟೆ-ಎಷ್ಟು ಜನರಿಗೆ ಸೀರೆ, ಧೋತರ, ಲಂಗ, ಪರಕಾರ, ಬ್ಲೌಜು, ರಘುಗಾ, ಕುಪ್ಪುಸ, ತೀರ ಚಿಕ್ಕ ಮಕ್ಕಳಿಗೆ ಪೂರೈಸಿದ ಬಟ್ಟೆಗಳೆಷ್ಟು ಎಂಬೆಲ್ಲ ವಿವರ ನೀಡಿದ್ದಾರೆ. ಇನ್ನೂ ಅವರ ನಿಸ್ವಾರ್ಥ-ನಿಸ್ಪೃಹತೆಗೆ ಉದಾಹರಣೆಯೆಂದರೆ ಪರಿಹಾರ ಕಾರ್ಯ ಮುಗಿಸಿದಾಗ ಆ ಸಮಿತಿಯ ಹೆಸರಿನಲ್ಲಿ ಒಂದು ಲಕ್ಷಕ್ಕೂ ಹೆಚ್ಚು ಹಣ ಶಿಲ್ಕು ಉಳಿದಿತ್ತು. ಒಂದು ದಿನ ಹೇಳಿದರು, “ನಿಮ್ಮ ವಿಜಾಪುರ ಜಿಲ್ಲಾ ಬರಗಾಲ ಪರಿಹಾರ ಕಾರ್ಯ ಮುಗಿದಾಗ ಒಂದು ಲಕ್ಷಕ್ಕೂ ಮಿಕ್ಕಿದ ಹಣ ಹಾಗೇ ಬ್ಯಾಂಕಿನಲ್ಲಿ ಉಳಿದಿದೆ. ಅದನ್ನು ಹೇಗೆ ವಿನಿಯೋಗಿಸಬೇಕೆಂಬುದೇ ತಿಳಿಯದು. ಸಾರ್ವಜನಿಕ ಸೇವಾ ಕಾರ್ಯ ಮಾಡುವವರಿಗೆ ಕೊಡಬೇಕೆಂದರೆ ‘ಸೇವೆ’ಯ ಹೆಸರಿನಲ್ಲಿ ನುಂಗುವವರೇ ಹೆಚ್ಚಾಗಿದ್ದಾರೆ. ಆ ಹಣವನ್ನು ಏನು ಮಾಡಬೇಕು ತಿಳಿಯದಾಗಿದೆ” ಅಂದರು. ಈ ಮಾತು ಹೇಳಿದ ೨೦ ವರ್ಷ ನಂತರ ಅಂದರೆ ಸುಮಾರು ೧೯೭೨-೭೩ರಲ್ಲಿ ಒಂದು ದಿನ ತಾವು ಆ ಹಣದ ಬಗ್ಗೆ ತೆಗೆದುಕೊಂಡ ನಿರ್ಣಯವನ್ನೂ ನನ್ನೆದುರು ಹೇಳಿದರು, “ನಿಮ್ಮ ಜಿಲ್ಲೆಯ ಹಣವನ್ನು ನಿಮ್ಮ ಜಿಲ್ಲೆಗೆ ಕೊಟ್ಟುಬಿಟ್ಟೆ” ಅಂದರು. “ಹೇಗೆ ಕೊಟ್ಟರಿ?” ನಾನು ಕೇಳಿದೆ. “ಉಳಿದೆಲ್ಲ ಹಣವನ್ನು ನಿಮ್ಮ ಜಿಲ್ಲೆಯ ಡೆಪ್ಯುಟಿ ಕಮಿಶನರರಿಗೆ ಒಪ್ಪಿಸಿ, ಜಿಲ್ಲೆಯ ಯಾವುದೇ ಭಾಗದ ಹರಿಜನಕೇರಿಗೆ ನೀರಿನ ಅಭಾವವಿದ್ದರೆ ಅಲ್ಲಿ ಬಾವಿ ತೋಡಿಸಿ ಅದಕ್ಕೆ ‘ಥಕ್ಕರ್ ಬಾಪಾ ಕುಡಿಯುವ ನೀರಿನ ಬಾವಿ’ ಎಂದು ಹೆಸರಿಡಬೇಕೆಂದು ಕರಾರು ಹಾಕಿದ್ದೇನೆ. ಮತ್ತೆ ಎಲ್ಲಾ ಪತ್ರಿಕೆಗೂ ಸುದ್ದಿ

ಮಾಡಲು ಆನಂದರಿಗೆ (ಪತ್ರಿಕಾ ಸುದ್ದಿಗಾರರು) ಹೇಳಿಬಿಟ್ಟಿದ್ದೇನೆ," ಎಂದರು. ಆಗ ಅವರ ಮುಖದಲ್ಲಿ ತೃಪ್ತಿಯ ಭಾವ ಎದ್ದು ಕಾಣು ತ್ತಿತ್ತು.

## ಭಕ್ಕರಿಯ ಪ್ರೀತಿ

ದೇಸಾಯಿ ಅವರು ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿ ಸದಸ್ಯರಾದ ವರ್ಷ ೧೯೩೧ ರಲ್ಲಿ ಗೋಕಾಕದಲ್ಲಿ ಗಿರಣಿ ಮಾಲಿಕರಿಗೂ ಅಲ್ಲಿಯ ಕೆಲಸಗಾರರಿಗೂ ನ್ಯಾಯ ನಡೆದು ಅದರ ಮಧ್ಯಸ್ಥಿಕೆಗೆ ಪ್ರಕರಣ ಕೂಲಿಕಾರ ಧುರೀಣರಾದ ಎನ್. ಎಂ. ಜೋಶಿಯವರವರೆಗೂ ಹೋಯಿತು. "ಆಗ ಸೊಸೈಟಿಯಲ್ಲಿ ಕನ್ನಡ ತಿಳಿದವ ನಾನೊಬ್ಬನೇ. ಜೋಶಿ ನನ್ನನ್ನು ಗೋಕಾಕಕ್ಕೆ ಕಳಿಸಿಕೊಟ್ಟರು. ಮಾಲೀಕರು ವಿದೇಶೀಯರಾಗಿದ್ದರು. ನಿಮ್ಮ ಜನ ಬಹಳ ವಿಶ್ವಾಸಿಕರು. ನನ್ನನ್ನು ಒಬ್ಬಂಟಿಗನನ್ನಾಗಿ ಬಿಟ್ಟಿರುತ್ತಿರಲಿಲ್ಲ. ಊಟಕ್ಕೆ ಹಾಲು, ಮೊಸರು ತಂದು ಕೊಡುತ್ತಿದ್ದರು. ರಾತ್ರಿ ನಾನು ಗಾಳಿ-ಗಾಗಿ ಹೊರಗೆ ಮಲಗಿದರೆ ಆ ಕೂಲಿಕಾರರು ದೂರದಿಂದ ನನ್ನ ಸುತ್ತುವರಿದು ಮಲಗು ತ್ತಿದ್ದರು" ಎಂದು ದೇಸಾಯಿ ಅವರು ಹಳೆಯ ನೆನಪಿನ ಉಜಳಣೆ ಮಾಡುತ್ತಿದ್ದರು.

ಬರಗಾಲದ ಜಿಲ್ಲೆ ವಿಜಾಪುರದಲ್ಲಿ ಬಹಳ ದಿವಸ ಕಳೆದುದರಿಂದ ಅವರಿಗೆ ಆಗಾಗ ಭಕ್ಕರಿಯ ನೆನಪು ಆಗುತ್ತಿತ್ತು. ನನ್ನ ಮದುವೆಯಾದ ಮೇಲಂತೂ ಅವರು ಅಂಕೋಲೆಗೆ ಬಂದಾಗಲೆಲ್ಲ ವಾಸ್ತವ್ಯದ ಅವಧಿಯಲ್ಲಿ ೩-೪ ಸಲ ಭಕ್ಕರಿ ಬದನೆಕಾಯಿ ತುಂಬುಗಾಯಿ ಪಲ್ಯವನ್ನು ಒಯ್ದು ಕೊಡುತ್ತಿದ್ದೆ. ಪ್ರೀತಿಯಿಂದಲೇ ಉಣ್ಣುತ್ತಿದ್ದರು. ಒಮ್ಮೊಮ್ಮೆ ಹೇಳಿ ಭಕ್ಕರಿ ತರಿಸಿಕೊಳ್ಳುತ್ತಿದ್ದರು.

ಮನೆಯಲ್ಲಿ ಮಾಡಿದ ಮೆಂತೆ ಹಿಟ್ಟನ್ನು ಒಮ್ಮೆ ಭಕ್ಕರಿ ಸಂಗಡ ಒಯ್ದಿದ್ದೆ. ತಾವು ಉಂಡು ಅದರಲ್ಲಿ ಉಳಿಸಿ "ನಾನು ಮುಂಬಯಿಗೆ ಒಯ್ಯು

## ಚುಟುಕದಲ್ಲಿ ಆತ್ಮಕಥೆ

### ನನ್ನ ಹುಟ್ಟು ದಿನ

ನಾನು ಹುಟ್ಟಿದ್ದು ಸಪ್ಟೆಂಬರದ ಹತ್ತು.
ನೆಲತಾಯಿ ಬಸುರಾಗಿ ಕದಿರು ಮೂಡಿತ್ತು.
ಹಸಿರು ಸೀರೆಯನುಟ್ಟ ಧರೆಗೆ ಆನಂದ.
ಇದು ನನ್ನ ಸೌಭಾಗ್ಯವೆನ್ನುವೆನು ಕಂದ.

### ಕುರ್ಚಿ

ನನಗೇಕೆ ಈ ಕುರ್ಚಿ ಸಾಕು ಈ ನೆಲವು.
ನನ್ನ ಪಾಲಿಗೆ ಬರಲಿ ಬಡಜನರ ಒಲವು.
ಈ ಒಲವಿನೊಳಗುಂಟು ಜೀವನದ ಸಾರ.
ಕುರ್ಚಿಯೆಂಬುದು ಮಗನೆ ಒಣ ಅಲಂಕಾರ.

### ಹೊಗಳಿಕೆ

ಎಲ್ಲರೂ ಹೊಗಳಿದರು ಕವಿಯೆಂದು ನನ್ನ.
ಬಹುಮಾನ ನೀಡಿದರು ಉಂಗುರದ ಚಿನ್ನ.
ಉಪಕಾರ ಸ್ಮರಿಸಲಿಕೆ ಹಾಡಿದೆನು ಮತ್ತೆ.
ಅಜ್ಜಿಯೆಂದಳು : ನೀನು ಕವಿಯಲ್ಲ ಕತ್ತೆ.

### ನೇರ ಹಾದಿ

ನೇರ ಹಾದಿಯ ಹಿಡಿದು ಹಾಕಿದನು ಹೆಜ್ಜೆ.
ಎಂದಿಗೂ ಕಟ್ಟಲಿಲ್ಲವೊ ಯಾವ ಗೆಜ್ಜೆ.
ಈ ರೀತಿ ಸಾಗಿದೆನು ವರುಷ ಅರವತ್ತು.
ವಿಜಯಾಂಬೆ ನೀಡಿದಳು ಸಂತಸದ ಮುತ್ತು.

### ನಾನು ಸತ್ತಾಗ

ನಾನು ಸತ್ತಾಗ ನೀವೆಲ್ಲರೂ ಎದ್ದು
ಸ್ವಲ್ಪವೂ ಮಾಡಬಾರದು ಸದ್ದು.
ಗದ್ದಲ ಗಲಾಟೆಯಲಿ ಬದುಕಿ ಬೇಸತ್ತೆ
ಈ ಜಗದ ಸಹವಾಸವೂ ಬೇಡ ಮತ್ತೆ

—ದಿನಕರ ದೇಸಾಯಿ

('ದಿನಕರ ಚೌಪದಿ'ಯಿಂದ
—ಆಯ್ಕೆ : ಶ್ಯಾಮ ಹುದ್ದಾರ)

ತ್ತೇನೆ ಇನ್ನೂ ಸ್ವಲ್ಪ ತಂದುಕೊಡಿ. ನಮ್ಮ ಜನಕ್ಕೆ ಇದು ಗೊತ್ತಿಲ್ಲ. ಮಹಾರಾಷ್ಟ್ರದಲ್ಲಿ 'ಮೇತ್‌ಕೂಟ್' ಅನ್ನುತ್ತಾರೆ" ಅಂದರು. ಆ ದಿನ ನಾನು ಮತ್ತೆ ಒಯ್ದುಕೊಟ್ಟದನ್ನು ಮುಂಬಯಿ ವರೆಗೂ ಒಯ್ದರು.

ಮತ್ತೊಂದು ಸಲ ಬಂದಾಗ ಅನಾರಸ ಒಯ್ದುಕೊಟ್ಟಿದ್ದೆ. ಡೈಬಿಟಿಸ್ ಇದ್ದುದರಿಂದ ದೇಸಾಯಿ ಅವರು ಸಿಹಿ ತಿನ್ನುವದು ಕಡಿಮೆ ಆಗಿತ್ತು. ಅನಾರಸ ಸಿಹಿ ಪದಾರ್ಥ ಆದರೂ ಸ್ಯಾಂಪಲ್ ಅಂತ 'ಸ್ವಲ್ಪ ಕೊಟ್ಟು ನೋಡು' ಎಂದು ಅಡಿಗೆಯವನಿಗೆ ಮೊದಲೇ ಹೇಳಿದ್ದೆ. ಸಂಜೆ ನಾನು ಹೋದಾಗ "ನೀವು ತಂದದ್ದು ರುಚಿ ಇದೆ. ಅದು ಏನು? ಹೇಗೆ ಮಾಡುತ್ತಾರೆ?" ಎಂದೆಲ್ಲ ಕೇಳಿ "ನಾನು ಸಿಹಿ ತಿನ್ನುವದು ಕಡಿಮೆ, ಸ್ವಲ್ಪ ಸ್ವಲ್ಪ ತಕ್ಕೊಳ್ಳುವೆ. ಇನ್ನೂ ನಾಳೆಗಾಗಿ ಇಟ್ಟಿದ್ದೇನೆ. ತಿನ್ನಲು 'ಕುರು ಕುರು' ಉಂಟು. ನಿಮ್ಮ ಕಡೆಗೆ ಬಹಳ ನಮೂನೆಯ ತಿನಿಸು ಮಾಡುತ್ತಾರೆ," ಎಂದು ತಮಗೆ ಹೊಸದೆನಿಸಿದ ತಿನಿಸನ್ನು ಮೆಚ್ಚಿಕೊಂಡಿದ್ದರು.

## ಗುರುವಿಗೂ ಮಿಗಿಲಾದ ಶಿಷ್ಯ

ವಿ. ಸೀತಾರಾಮಯ್ಯನವರು ದಿನಕರ ದೇಸಾಯಿ ಅವರ ಗುರುಗಳು. ವಿ. ಸೀ. ಯವರೂ ಬಹಳ ರುಚಿಗಾರರಂತೆ. ಹಾಗೆ ಬಹಳ ಕಡೆ ಓದಿದ್ದೇನೆ. ಡಾ. ಶಿವರಾಮ ಕಾರಂತರಂತೂ ಅದನ್ನು ಒತ್ತಿಹೇಳುತ್ತಾರೆ. ಅವರೇ ವಿ.ಸೀ. ಅವರ ರುಚಿಗಾರಿಕೆ ಬಗ್ಗೆ ಬರೆದೂ ಇದ್ದಾರೆ. ಶಿಷ್ಯರಾದ ದಿನಕರ ದೇಸಾಯಿಯವರೂ ತಿನ್ನುವ ತಿಂಡಿಗಳನ್ನು ಹೇಗೆ ಮಾಡಬೇಕು ಯಾವಾಗ ಮಾಡಬೇಕು, ಎಂದೆಲ್ಲ ವಿವರ ಕೊಡುವ ವರೇ. ಚಕ್ಕುಲಿ, ಶೇಂಗಾ ಬೀಜ, ಚೂಡಾ ತುಂಬ ಪ್ರೀತಿ ಅವರಿಗೆ. ಈ ಎಲ್ಲ ತಿನಿಸುಗಳಿಗೆ ಉಪ್ಪು, ಖಾರ, ಅವುಗಳನ್ನು ಎಣ್ಣೆಯಲ್ಲಿ ಎಷ್ಟು ಕರಿಯ ಬೇಕು, ಯಾವ ಪಲ್ಯ ಹೇಗೆ ಮಾಡಬೇಕು ಎಂದೆಲ್ಲ ಅಡಿಗೆಯವನಿಗೆ ಹೇಳಿ ಮಾಡಿಸಿಕೊಂಡು ತಿನ್ನುವವರು. ನಾಡಿನ ಎಲ್ಲಾ ಭಾಗದ ಊಟ-ತಿಂಡಿಗಳೂ ಅವರಿಗೆ ಗೊತ್ತು. ಬಹು ರುಚಿಗಾರರು. ಹಣ್ಣುಗಳೆಂದರೆ ತುಂಬ ಪ್ರೀತಿ. ತಿನ್ನುವದರ ಜೊತೆಗೆ ಟೇಬಲ್ ಮೇಲಿದ್ದ ಹಣ್ಣು ಹಿಡಿದು ವಾಸನೆ ನೋಡಿ ಸವಿಯಬಲ್ಲ ಸವಿಗಾರರು.

## ಅವರಿಗಾಗಿ ಭಕ್ಕರಿ ಮಾಡಿದೆ

ನನ್ನ ಶ್ರೀಮತಿ ಊರಲ್ಲಿಲ್ಲದ ಒಂದು ಸಂದರ್ಭ. ಅದೇ ವೇಳೆಗೆ ಆಸ್ಟ್ರೇಲಿಯಾ ಐಡ್-ಲಿಬ್ರೋಡ್‌ನ ಪ್ರತಿನಿಧಿಗಳಾದ ಶ್ರೀ ಅಗರ ವಾಲಾ ಎಂಬವರನ್ನು ದೇಸಾಯಿಯವರು ದಿಲ್ಲಿ ಯಿಂದ ಕರೆದುಕೊಂಡು ಬಂದಿದ್ದರು. ಅವರಿಗೆ ಚಪಾತಿ, ರೊಟ್ಟಿ ಇಲ್ಲದೆ ಆಗುತ್ತಿರಲಿಲ್ಲ. ಆ ಕಾರಣ ದೇಸಾಯಿ ಅವರು ಅಡಿಗೆಯವನಿಗೆ "ಹುದ್ದಾರರಿಗೆ ಹೇಳಿ ಸಂಜೆ ಜೋಳದ ರೊಟ್ಟಿ ಮಾಡಿಸು" ಎಂದು ಹೊನ್ನಾವರದ ಕಡೆ ಅತಿಥಿಯನ್ನು ಕರೆದುಕೊಂಡು ಹೋದರು. ಬೇರೆ ಯಾವುದೋ ವಿಷಯಕ್ಕೆ ಅಂಕೋಲಾಕ್ಕೆ ಫೋನುಮಾಡಿದಾಗ ಮತ್ತೆ ಹುದ್ದಾರರಿಂದ ಭಕ್ಕರಿ ಮಾಡಿಸಲು ಪುರುಷೋತ್ತಮನಿಗೆ ಹೇಳು ಅಂದರಂತೆ. ಆ ದಿವಸ ನಾನೇ ಭಕ್ಕರಿ ಮಾಡಿ ಕೊಟ್ಟು ಬಂದೆ. ಮಾರನೆಯ ದಿನ ದೇಸಾಯರಲ್ಲಿ ಹೋದಾಗ "ಭಕ್ಕರಿ ಚಲೋ ಆಗಿದ್ದವು. ನಾನೂ ಒಂದು ತಿಂದೆ. ಆಗರವಾಲಾ ನಾಲ್ಕು ತಿಂದರು" ಎಂಬುದನ್ನು ಹೇಳಲು ಮರೆಯಲಿಲ್ಲ.

## ಬೂಟ್ ಪಾಲಿಶ್ ಮಾಡಿದರು

ತಮ್ಮ ಸಂಸ್ಥೆಗಳನ್ನು ತೋರಿಸುವ ಉದ್ದೇಶ ದಿಂದ ದೇಸಾಯಿ ಅವರು ಸರ್ವಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಅಧ್ಯಕ್ಷರಾದ ದಿವಂಗತ ಹೃದಯನಾಥ ಕುಂರ್ಝ್ರು ಅವರನ್ನು ಅಂಕೋಲೆಗೆ ಕರೆದುಕೊಂಡು ಬಂದಿದ್ದರು. ಕುಂರ್ಝ್ರು ಮುಪ್ಪಿ ನವರಾದರೂ ಗಟ್ಟಿಯಾಗಿದ್ದರು. ಅವರ ಕಾರ್ಯಕ್ರಮ ಬಹಳ ಅವಸರದ್ದಾಗಿತ್ತು.

ಅಂತೆಯೇ ಟ್ರಸ್ಟಿನ ಕೇಂದ್ರಗಳನ್ನು ನೋಡಿ ಮಧ್ಯಾಹ್ನ ಊಟಕ್ಕೆ ಅಂಕೋಲೆಗೆ ಬರುತ್ತಿದ್ದರು. ಸ್ವಲ್ಪ ವಿಶ್ರಾಂತಿ ಪಡೆದು ಸಾಯಂಕಾಲ ಮತ್ತೆ ಬೇರೆ ಕಡೆಗೆ ಹೋಗುತ್ತಿದ್ದರು. ಒಮ್ಮೆ ಮಧ್ಯಾಹ್ನ ಬಂದಾಗ ನನಗೆ ಬರಲು ಹೇಳಿ ಕಳಿಸಿದರು. ಹೋದೆ. ಕುಂರ್ಚುದ ಕೋಣೆಯಲ್ಲಿ ಅರಿವೆ ಹಾಕಿ ಕೊಳ್ಳುತ್ತಿದ್ದರು. ದಿನಕರ ದೇಸಾಯಿ ಅವರು ಬಾಗಿಲಲ್ಲಿ ಕುಂರ್ಚುರವರ ದೂಳು ತುಂಬಿದ ಬೂಟು ಒರೆಸುತ್ತ ಇದ್ದರು. ನಾನು 'ಅರೆ!' ಅಂದುಕೊಂಡೆ. ಅಷ್ಟರಲ್ಲಿ ದಯಾನಂದ ನಾಡಕರ್ಣಿ ಯವರು ಬಂದು "ದಿಸು, ಹಾಂವ್ ಪುಸತಾ ದೀ" (ನಾನು ಒರೆಸುತ್ತೇನೆ ಕೊಡು) ಅಂದರು. ಶ್ರೀ ದೇಸಾಯಿ ಅವರು "ಹಾಂವ್ ಕಿತೆ ತೂ ಕಿತೆ?" (ನೀ ಏನು ನಾನೇನು) ಅಂದುಬಿಟ್ಟರು. ಆದರೆ ತಾವೇ ಪೂರ್ತಿ ಬೂಟು ಒರೆಸಿ ಮುಗಿಸಿದರು.

## ಮಹಾ ಶಿಸ್ತುಗಾರ

ದಿನಕರ ದೇಸಾಯಿಯವರಲ್ಲಿ ಇದ್ದ ಇನ್ನೊಂದು ದೊಡ್ಡ ಗುಣ ಶಿಸ್ತು. ಖಾದ್ರಿ ಶಾಮಣ್ಣನವರು ಹೇಳಿದಂತೆ "ದಿನಕರ ದೇಸಾಯಿ ಶಿಸ್ತಿನ ಕತ್ತಿಯ ಕೆಳಗೆ ತಯಾರಾದವರು." ತಮ್ಮ ಕೆಲಸ, ತಾವು ಮಾಡುವ ಕೆಲಸ ತುಂಬ ಅಚ್ಚುಕಟ್ಟಾಗಿ ವ್ಯವಸ್ಥಿತವಾಗಿ ಯಾವೊಂದು ತೊಂದರೆ ಇಲ್ಲದೆ ನಡೆಯಬೇಕು. ಹಾಗೆ ಅದನ್ನು ತಮ್ಮ ಜೀವನ ಪರ್ಯಂತ ನಡೆಸಿಕೊಂಡು ಬಂದರು. ತಮ್ಮಿಂದ ಇನ್ನೊಬ್ಬರಿಗೆ ತೊಂದರೆ ಯಾಗದಂತೆ ಅಷ್ಟೇ ಜಾಗರೂಕತೆ ವಹಿಸು ತ್ತಿದ್ದರು.

ಅಂಕೋಲೆಗೆ ಬರುವುದು ನಿಶ್ಚಿತವಾದಾಗ ಒಂದು ಪತ್ರ ಬರುತ್ತದೆ. "ನಾನು ಮುಂದಿನ ತಿಂಗಳು ಬರುತ್ತೇನೆ. ಆ ತಿಂಗಳ ತಾರೀಖು ಗೊತ್ತುಪಡಿಸಿ ಮತ್ತೊಂದು ಪತ್ರ ಬರು ತ್ತದೆ. ಆಗ ತಮ್ಮ ಮುಂದಿನ ಕಾರ್ಯಕ್ರಮ ವನ್ನು ಸ್ಥೂಲವಾಗಿ ಕಾಣಿಸುತ್ತಾರೆ.

ಅವರು ಗೊತ್ತುಪಡಿಸಿದ ತಾರೀಖು ಅಂದರೆ ಅದೇ ತಾರೀಖು. ಬ್ರಹ್ಮ ಬಂದರೂ ಬದಲಾ ಗದು. ಮುಂಬಯಿಗೆ ತಿರುಗಿ ಹೋಗುವದನ್ನೂ ಮೊದಲೆ, ನಿಶ್ಚಯಿಸಿಕೊಂಡು ಬಂದಿರುತ್ತಾರೆ. ಹೋಗುವದು ಒಂದು ವಾರ ಮೊದಲೇ ರೈಲ್ವೆ ಟಿಕೀಟು ರಿಜರ್ವ್ ಆಗಬೇಕು.

ಮೊದಮೊದಲು ಅವರು ಹುಬ್ಬಳ್ಳಿಗೆ ರೈಲಿ- ನಿಂದ ಬಂದು ಮುಂದೆ ಬಸ್ ಮೂಲಕ ಅಂಕೋ ಲೆಗೆ ಬರುತ್ತಿದ್ದರು. ಹಾಗೆ ಎಲ್ಲ ಮುಂಚಿ ಪತ್ರವೂ ಬಂದಿತ್ತು. ಸ್ನಾನಕ್ಕೆ ಬಿಸಿ ನೀರು ತಯಾರಿಡಿರಿ, ಊಟ ತಯಾರಿಸಬೇಕು ಎಂದೆಲ್ಲ ವಿವರ ತಿಳಿಸುತ್ತಿದ್ದರು. ಒಮ್ಮೆ ಮಧ್ಯಾಹ್ನ ಬಸ್ಸು ತಪ್ಪಿ ಬಿಟ್ಟಿತು. ಹುಬ್ಬಳ್ಳಿಯಲ್ಲಿಯೇ ಉಳಿಯಬೇಕಾಯಿತು. ಸಂಜೆ ೫।। ಸುಮಾರಿಗೆ ಹುಬ್ಬಳ್ಳಿಯಿಂದ ತಾರು: 'ಬಸ್ಸು ತಪ್ಪಿತು. ನಾಳೆ ಬೆಳಿಗ್ಗೆ ಬರುತ್ತೇನೆ ಅಡಿಗೆ ಮಾಡುವದು ಬೇಡ.' ಯಾರಿದ್ದಾರೆ ಸ್ವಾಮಿ ಇಷ್ಟೆಲ್ಲ ವಿಚಾರ ಮಾಡುವ ಜನ. ಬರುತ್ತಾರೆಂದು ಕಾಯು ವವರು ಕಾದು ಕಾದು ಸಾಯುತ್ತಲೇ ಇರು- ತ್ತಾರೆ.

## ಮೂರು ತಿಂಗಳ ಮುಂಚೆ

ಮತ್ತೊಮ್ಮೆ ದಿನಕರ ದೇಸಾಯಿ ಅವರು ಅಂಕೋಲೆಗೆ ಬರುವವರಿದ್ದರು. ಅದು ಫೆಬ್ರುವರಿ ತಿಂಗಳಲ್ಲಿ. ಆಗ ಬಂದವರು ಟ್ರಸ್ಟಿನ ೫-೬ ಕೇಂದ್ರಗಳಿಗೆ ಭೆಟ್ಟಿ ಕೊಡುವವರಿದ್ದರು. ಅದಕ್ಕಾಗಿ ಒಂದು ಟ್ಯಾಕ್ಸಿ ಬಾಡಿಗೆ ಮಾಡ ಬೇಕು. ನನಗೆ ನೆನಪಿದ್ದ ಮಟ್ಟಿಗೆ ಈ ಕಾರ್ಯ ಕ್ರಮ ನವೆಂಬರ್-ಡಿಸೆಂಬರ್ ತಿಂಗಳಲ್ಲಿ ನಿಶ್ಚ ಯಿಸಿ ವಿವರವಾಗಿ ಬರೆದು, ಕೊನೆಯಲ್ಲಿ ಫೆಬ್ರು ವರಿ ತಿಂಗಳಲ್ಲಿ ಶಿವರಾತ್ರಿ ಬರುತ್ತದೆ, ಅಂಕೋಲೆ ಯಲ್ಲಿ ಆಗ ಟ್ಯಾಕ್ಸಿ ಸಿಗಲಿಕ್ಕಿಲ್ಲ. ಅದಕ್ಕಾಗಿ ಮುಂಚಿತವಾಗಿ ಈಗಲೇ ಒಂದು ಟ್ಯಾಕ್ಸಿ ಗೊತ್ತುಮಾಡಿ ಇಡಬೇಕು. ಅಂಕೋಲೆಯಲ್ಲಿ ಸಿಗದಿದ್ದರೆ ಕಾರವಾರದ ಟ್ಯಾಕ್ಸಿ ಗೊತ್ತು ಮಾಡ ಬೇಕು, ಎಂದೂ ಬರೆದಿದ್ದರು. ಮೂರು

ತಿಂಗಳ ಮುಂದಿನ ವಿಚಾರ ಮೊದಲೇ ಮಾಡಿ ಬರೆದಿದ್ದುದು ಮಗೆ ತುಂಬ ಆಶ್ಚರ್ಯವೇ ಆಗಿತ್ತು.

## ಮುಕ್ತ ಮನಸ್ಸು

ದಿನಕರ ದೇಸಾಯಿ ಅವರ ಮನಸ್ಸು ಮುಕ್ತವಾಗಿತ್ತು. ನಾವು ಕೆಲಸದಲ್ಲಿ ತಪ್ಪಿದರೆ ಅವರಿಗೆ ಸಹನವಾಗುತ್ತಿದ್ದಿಲ್ಲ, ತುಂಬಾ ಸಿಟ್ಟಿಗೆದ್ದುಬಿಡುತ್ತಿದ್ದರು. ಆದರೆ ಅದು ಆ ಕ್ಷಣಕ್ಕೆ ಮಾತ್ರ. ಆಯಿತು ಮುಂದೆ ಮತ್ತೆ ಅಷ್ಟೇ ಪ್ರೀತಿ. ಕೆಲಸ ಒಳ್ಳೆಯದಾಗಿದ್ದರೆ ಅಷ್ಟೆ ಮುಕ್ತ ಮನಸ್ಸಿನಿಂದ ಹೊಗಳುವವರು. ನಾಲ್ಕು ಜನರಿಗೂ ತೋರಿಸಿ ಹೇಳುವುದೂ ಇರುತ್ತದೆ.

ಡಾ. ಕ್ರೊನೆನ್‌ಬರ್ಗರ ನೇತ್ರ ಚಿಕಿತ್ಸಾ ಶಿಬಿರದಲ್ಲಿ ನಾನು ಡಾಕ್ಟರರಿಗೆ ಕೊಡಲು ತಿಳಿವಾದ ಗಂಧದ ಕಟ್ಟಿಗೆಯ Visting Card ಪ್ರಿಂಟ್ ಮಾಡಿದ್ದೆ. ಆ ವಿಚಾರವೂ ದೇಸಾಯಿ ಅವರದೇ. ಕಟ್ಟಿಗೆ ಮೇಲೆ ಪ್ರಿಂಟ್ ತುಂಬ ತೊಂದರೆದಾಯಕ, ಆದರೂ ಹಾಳಾಗದಂತೆ ನಾಜೂಕಿನಿಂದ ಕೆಲಸ ಮಾಡಿಕೊಟ್ಟಾಗ ದೇಸಾಯಿ ಅವರು ಅದೆಷ್ಟು ಸಂತೋಷ ಪಟ್ಟಿದ್ದರು. ಅಲ್ಲಿ ಬಂದವರಿಗೆಲ್ಲ "ನೋಡಿ ನಮ್ಮದು ಸಣ್ಣ ಪ್ರೆಸ್ಸು. ಅನುಕೂಲ ಹೆಚ್ಚಿಲ್ಲ. ಪ್ರಿಂಟ್ ನೋಡಿ ಹೇಗಾಗಿದೆ" ಎಂದು ಹೇಳಿದ್ದೇ ಹೇಳಿದ್ದು. ಡಾಕ್ಟರರಿಗೂ ತುಂಬ ಸಂತೋಷವಾಗಿತ್ತು.

ಆ ಕ್ಯಾಂಪಿನ ಹತ್ತು ದಿವಸದ ಅವಧಿಯಲ್ಲಿ ನಮಗೆ ತುಂಬ ಕೆಲಸವಿದ್ದುದರಿಂದ ರಾತ್ರಿ ಸಹ ಕೆಲಸಕ್ಕೆ ಹೋಗಬೇಕಾಗುತ್ತಿತ್ತು. ಅದು ದೇಸಾಯಿಯವರಿಗೂ ಗೊತ್ತಿತ್ತು. ಕ್ಯಾಂಪು ಮುಗಿದ ನಂತರ ದೇಸಾಯರು ನೇರವಾಗಿ ಪುಣೆಗೆ ಹೋದರು. ಪುಣೆ ಮುಟ್ಟಿದ ಮೂರನೆಯ ದಿನವೇ ನನಗೆ ಒಂದು ಪತ್ರ ಬಂದಿತು. "ಆಯ್ ಕ್ಯಾಂಪ್ ವೇಳೆಯಲ್ಲಿ ನೀವು ತುಂಬ ಪರಿಶ್ರಮ ವಹಿಸಿ ಕೆಲಸಮಾಡಿದ್ದು ನೋಡಿ ನನಗೆ ಸಂತೋಷವಾಗಿದೆ. ಅಭಿನಂದನೆಗಳು." ಇದಕ್ಕಿಂತಲೂ ಹೆಚ್ಚಿನ ಪ್ರತಿಫಲ ನಾನೇನು ಬಯಸಲಿ? ಎಷ್ಟೋ ಜನ ಮಾಲಿಕರನ್ನು ನಾನು ನೋಡಿದ್ದೇನೆ. ಕೆಲಸದ ಆಳು, ಕೈಕೆಳಗಿನ ನೌಕರದಾರರೆಂದರೆ ದನಕ್ಕಿಂತಲೂ ಕಡೆಯಾಗಿ ಕಾಣುವವರೂ ಇದ್ದಾರೆ.

೧೯೬೨ ರ ಸಾರ್ವತ್ರಿಕ ಚುನಾವಣೆಯ ನೆನಪೂ ಇಲ್ಲಿ ಆಗುತ್ತದೆ. ಆಗ ನನ್ನ ಮದುವೆ ಆಗಿರಲಿಲ್ಲ. ಸ್ವಯಂಪಾಕಿ. ಅಡಿಗೆ ಮಾಡಿ ಊಟ ತೀರಿಸಿ ಕೆಲಸಕ್ಕೆ ಹೋಗಬೇಕು. ಅಡಿಗೆ ಮಾಡಲು ಪುರುಸೊತ್ತು ಆಗುತ್ತಿರಲಿಲ್ಲ. ಹಗಲು ರಾತ್ರಿ ಕೆಲಸ ನಡೆಯುತ್ತಿತ್ತು. ದೇಸಾಯಿಯವರು ಅಂಕೋಲೆಗೆ ಬಂದು ೨-೩ ದಿನಗಳಾಗಿದ್ದವು. ನನಗೆ ಬರಲು ಹೇಳಿ ಕಳಿಸಿದರು. ಮತ್ತೇನೋ ಪ್ರಿಂಟಿಂಗ್ ಕೆಲಸ ಕೊಡುತ್ತಾರೆಂದೇ ಹೋದೆ. ಆದರೆ ಅವರು ಕರೆದದ್ದು ಬೇರೆ ವಿಷಯಕ್ಕೆ. "ನಿಮಗೆ ಈ ಕೆಲಸದಲ್ಲಿ ಅಡಿಗೆ ಮಾಡುವದಾಗುವದಿಲ್ಲ, ಇನ್ನು ನನ್ನಲ್ಲಿಯೇ ಊಟಕ್ಕೆ ಬಂದುಬಿಡಿ" ಎಂದು ಹೇಳಿದರು. ಆ ಒಂದು ತಿಂಗಳ ಕಾಲವೂ ಅವರ ಜೊತೆಯಾಗಿ ಊಟ ಮಾಡಿದ ದಿನಗಳನ್ನು ಮರೆಯುವಂತಿಲ್ಲ. ಅವರ ಊಟ ೧೨ ಗಂಟೆಗೆ. ಅದು ಯಾವ ಕಾರಣಕ್ಕೂ ಬದಲಾಗುತ್ತಿರಲಿಲ್ಲ. ನನಗೆ ಒಮ್ಮೆ ೧೦ ನಿಮಿಷ ತಡವಾಯಿತು. "ಹಾಂ. ಬಂದಿರಾ, ಬರ್ರಿ. ನಿಮ್ಮ ದಾರೀನೇ ಕಾಯ್ತಾ ಇದ್ದೆ" ನನಗಾಗಿ ಕುಳಿತಿದ್ದರು. ಮಾರನೆಯ ದಿನದಿಂದ ಏನೇ ಕೆಲಸ ಇದ್ದರೂ ೧೨ ಗಂಟೆಯ ಒಳಗೆ ನಾನು ಅವರ ಗೆಸ್ಟ್ ಹೌಸ್ ಮುಟ್ಟುತ್ತಿದ್ದೆ.

ಮತ್ತೊಂದು ದೊಡ್ಡ ಗುಣ ತಮ್ಮಿಂದ ತಪ್ಪಾದರೆ ಕೂಡಲೇ ಒಪ್ಪಿಕೊಂಡು ಬಿಡುತ್ತಿದ್ದರು. ಅವರು ಯಾರೇ ಇದ್ದಿರಲಿ. ೧೯೬೭ ರ ಚುನಾವಣೆಯಲ್ಲಿ ಅವರು ಲೋಕಸಭೆಗೆ ಸ್ಪರ್ಧಿಸಿ, ಜಿಲ್ಲಾ ಸಂಚಾರ ಕೈಕೊಂಡಿದ್ದರು. ದೇಸಾಯರು ಕಣಕ್ಕಿಳಿದುದ್ದರಿಂದ ಚುನಾವಣೆಗೆ ತುಂಬ ಕಾವೇರಿತ್ತು. ಆ ಅವಧಿಯ ಮಧ್ಯದಲ್ಲಿ ಅವರು ಹೊನ್ನಾವರ-ಭಟಕಳ ತಾಲೂಕಿಗೆ ಹೋಗಿ ೩-೪

ದಿನಗಳ ನಂತರ ಅಂಕೋಲೆಗೆ ಬರುವವರಿದ್ದರು. ಅವರನ್ನು ಕರೆದುಕೊಂಡು ಬರಲು ಟ್ಯಾಕ್ಸಿ ಒಯ್ಯಲು ಶ್ರೀ ದಯಾನಂದ ನಾಡಕರ್ಣಿಯವರು ನನಗೆ ಕೆಲಸ ವಹಿಸಿದ್ದರು. ದೇಸಾಯಿ ಅವರು ಗೊತ್ತುಪಡಿಸಿದಂತೆ ಹೊನ್ನಾವರ ಶರಾವತಿ ದಂಡೆಗೆ ಸಂಜೆ ೬ ಗಂಟೆಗೆ ಬರಬೇಕು. ಆ ಮೊದಲೇ ನಾನು ಅಲ್ಲಿ ಹಾಜರಿರಬೇಕು. ಬೇಗ ಅಂಕೋಲೆ ಬಿಟ್ಟು ಹೊನ್ನಾವರಕ್ಕೆ ಹೊರಟೆ. ದಾರಿಯಲ್ಲಿ ಪ್ರೊ. ಎನ್. ಜಿ. ಸಭಾಹಿತರು ಹಳದೀಪುರದ ತಮ್ಮ ಮನೆಗೆ ಬರಲು ಆಮಂತ್ರಿಸಿದರು. ಆದರೆ ೫॥ ಆಗಿದೆ. ಅರ್ಧ ತಾಸಿನಲ್ಲಿ ನಾನು ಹೊನ್ನಾವರ ಮುಟ್ಟಬೇಕು. ಅವರ ಕ್ಷಮೆ ಕೇಳಿ ಸರಿಯಾದ ವೇಳೆಗೆ ಶರಾವತಿ ದಂಡೆ ಮುಟ್ಟಿದೆ. ದೇಸಾಯರು ಬಂದಿರಲಿಲ್ಲ. ಅವರು ಬಂದದ್ದು ರಾತ್ರಿ ೧೧ ಗಂಟೆ. ಆ ಹೊತ್ತಿನವರೆಗೂ ನಾವು ನಿಂತಲ್ಲೇ ನಿಂತಿದ್ದು, ಡ್ರಾಯವ್ಹರನಿಗೂ ಅಡಿಗೆಯವನಿಗೂ ಊಟ ಮಾಡಿಸಿದ್ದಾಯ್ತು.

ರಾತ್ರಿ ೧೧ ರ ಸುಮಾರಿಗೆ ಗ್ಯಾಸ್ ಇದ್ದ ಸಣ್ಣ ದೋಣಿ ಬಲು ಹಿಂದೆ ದಡಕ್ಕೆ ಬಂದಿತು. ಆ ದಾರಿಗುಂಟ ಹೋಗುವಾಗ ದೂರದಿಂದ ಮಾತಿನ ಸಪ್ಪಳ ದೇಸಾಯರ ದನಿ ಗುರುತಿಸಿದೆ. ಬಂದವರು "O! sorry. Excuse me ಹುದ್ದಾರ್. ನಿಮಗೆ ತೊಂದರೆ ಆಯಿತಲ್ಲ. ಜನ ಬಿಡಲೇ ಇಲ್ಲ" ಅಂದರು. ಆ ಮಹಾ ವ್ಯಕ್ತಿಯ ಮನೋಭಾವದ ವಿಶ್ವರೂಪ ನಾನು ಆ ಶರಾವತಿಯ ದಡದಲ್ಲಿ ಕಂಡೆ.

## ಮಧ್ಯರಾತ್ರಿಯಲ್ಲಿ ಮಜ್ಜಿಗೆ ಅನ್ನ

ನಾವು ಅಂಕೋಲೆ ತಲಪಿದಾಗ ರಾತ್ರಿ ೨ ಗಂಟೆ ಆಗಿಹೋಗಿತ್ತು. ನನಗೋ ತುಂಬ ಹಸಿವೆ. ಅಡಿಗೆ ಸಿದ್ಧವಾಗಿತ್ತು. ಆಳು ಬೀರ ಕೂತಲೇ ಮಲಗಿದ್ದ. ನಾನು ಊಟಕ್ಕೆ ಕುಳಿತೆ. "ಏನು ಊಟ ಮಾಡ್ತೀರಿ?" ಎಂದು ನನಗೆ ಕೇಳಿ "ಪುರುಷೋತ್ತಮ ಮಲಾ ಭಿ ವಾಡ್, ತಾಕಾನ ಸೀತ ಜೇವತಾ" (ಪುರುಷೋತ್ತಮ ನನಗೂ ಬಡಿಸು. ಸ್ವಲ್ಪ ಮಜ್ಜಿಗೆ ಅನ್ನ ಉಣ್ಣುವೆ) ಎಂದು ಅವರೂ ನನ್ನೊಂದಿಗೆ ಊಟಕ್ಕೆ ಕುಳಿತರು.

ನೆನಪು ಬಿಚ್ಚಿದಂತೆಲ್ಲ ನೂರಾರು ನೆನಪುಗಳು ೨೦-೨೫ ವರ್ಷಗಳ ಹತ್ತಿರದವುಗಳಾಗಿ ಕಳಚಿ ಬೀಳುತ್ತವೆ.

## ಇತ್ತೀಚಿನ ಪತ್ರ

ನಾನು ಚುಟುಕ ಬರೆಯುವಾಗಲೂ ದೇಸಾಯಿ ಅವರು ತಪ್ಪದೇ ಓದಿ ತಿದ್ದಿ ಪ್ರೋತ್ಸಾಹಿಸಿದ್ದೂ ಇದೆ. ನಾನು ಇತ್ತೀಚೆ ಪ್ರಾರಂಭಿಸಿದ ತ್ರಿಪದಿಗಳ ಬಗ್ಗೆ ಅವರ ಅಭಿಪ್ರಾಯ ಕೇಳಿದಾಗ ದೇಸಾಯಿ ಅವರು ಕೂಡಲೇ ಬರೆದರು—

My dear Huddar,

I am regularly reading your 'Tripadis' which appear in the Samyukta Karnatak. They are quite good.

I am happy to learn that Shri Chennaveer Kanavi has appreciated them.

ಕೊನೆಯ ಸಲ ಹೋಗುವಾಗ ದೇಸಾಯಿ ಅವರು ಕಾರು ಹತ್ತುತ್ತ "ನಾನು ಮತ್ತೆ ಜನೆವರಿ-ಫೆಬ್ರುವರಿಯಲ್ಲಿ ಬರುತ್ತೇನೆ" ಎಂದು ಹೇಳಿದ್ದರು. ಫೆಬ್ರುವರಿಗಳು ಬಂದು ಹೋದವು. ನಮ್ಮನ್ನಗಲಿದ ದೇಸಾಯಿ ಅವರು ಬರಲಿಲ್ಲ— ಬರುವುದೂ ಇಲ್ಲ!



# ಚಪ್ಪಲಿ ಎಬ್ಬಿಸಿದ ಅವಾಂತರ

ಎಂ. ವಿ. ತಿಪ್ಪೇಸ್ವಾಮಿ

ಜಾನಕೀರಾಯನಿಗೆ ಅಂತಹ ಮರೆವೇನಿಲ್ಲ, ಆದರೂ ವಯಸ್ಸಿನ ಪ್ರಭಾವವೋ ಏನೋ, ಮರೆವು ಇತ್ತು. ಎಂದಿನಂತೆ ಇಂದೂ ಮನೆಯಿಂದ ಹೊರಬೀಳುವಾಗ, "ಹುಷಾರ್ರಿ" ಎನ್ನುವ ಹೆಂಡತಿಯ - ಮಾತನ್ನ ಕೇಳಿಸಿಕೊಂಡರೂ ಕೇಳಿಸದ ಹಾಗೆ ಸೈಕಲ್ಲನ್ನೇರಿದ.

ಆಫೀಸಿನಲ್ಲಿ ಹಾಜರಿಯಾದ ಮೇಲೆ, ಕಾಲೋನಿಯಲ್ಲಿ ರಿಪೇರಿಗೆ ಯಾವ ಯಾವ ಮನೆಗಳನ್ನು ಇಂದು ನೋಡಬೇಕು ಎಂದು ತಿಳಿದುಕೊಂಡು ಕಾಲೋನಿಯ ಕಡೆ ಹೊರಟರು. ರಿಪೇರಿ ಏರ್ಪಾಟು ಮಾಡಿ ಮರಳಿ ಆಫೀಸಿಗೆ ಬರುವಾಗ, "ಏನೋ ಮರೆತಿದ್ದೇನೆ" ಎಂಬ ಗೊಂದಲ ಮನಸ್ಸಿನೊಳಗೆ. "ಏನು?" ಎಂದು ಹೊಳೆಯುತ್ತಿಲ್ಲ. ಸಿಗ್ಮಂಡ್ ಫ್ರಾಯ್ಡ್ ಹೇಳಿದ ಸುಪ್ತ ಮನಸ್ಸೇ ಇರಬೇಕು ರಾಯರಿಗೆ, "ಏನೋ ಮರೆತಿದ್ದೇನೆ," ಎಂದು ತಿಳಿಸುತ್ತಿರಬೇಕು. "ಇರಲಿ ನೆನಪಾಗುತ್ತದೆ," ಎಂದುಕೊಂಡು ಸೈಕಲ್ಲನ್ನು ಶೆಡ್‌ನಲ್ಲಿ ನಿಲ್ಲಿಸಿ ಹೊರಗೆ ಬರುತ್ತಿದ್ದಾರೆ. ಎದುರಿಗೆ ಅವರ ಸಹೋದ್ಯೋಗಿ ಸಾಂಬಯ್ಯ ಕುಂಟುತ್ತಾ ಬರುತ್ತಿದ್ದಾರೆ.

"ಯಾಕ್ರೀ ಕುಂಟುತ್ತಿದ್ದೀರಿ?... ಏನಾಯ್ತು? ...ಎಲ್ಲಾದ್ರೂ ಬೇಲಿ ಗೀಲಿ..." ಎಂದು ಸಾಂಬಯ್ಯನ ಕುರಿತು ರಾಯರೆಂದರು.

"ಛೇ... ಛೇ... ನಮಗ್ಯಾಕ್ರಿ ಅವೆಲ್ಲ... ಏನೂ ಇಲ್ಲ... ಹಾಳಾದ್ದು ಚಪ್ಪಲಿ ಉಂಗುಷ್ಟ ಕಿತ್ಕೋಯ್ತು," ಎಂದು ಸಾಂಬಯ್ಯ ಉತ್ತರಿಸಿದ್ದೇ ತಡ, ರಾಯರು ಆರ್ಕಿ ಮಿಡೀಸ್ ಓಡಿದ ಹಾಗೆ ಸಾಂಬಯ್ಯನಿಗೆ ಬೆನ್ನು ತೋರಿಸಿ ಓಡತೊಡಗಿದರು.

ಸುಬ್ಬಯ್ಯನ ಮನೆ ಹತ್ತಿರ ಬಂದಾಗ ಸುಮಾರು ೧೨–೪೫ ಗಂಟೆ. ಹತ್ತಾರು ಜನ ನೆರೆದಿದ್ದಾರೆ. ಸುಬ್ಬಯ್ಯ ಹೆಂಡತಿಯನ್ನು ಕೂದಲಹಿಡಿದುಕೊಂಡು ಹೊರಗೆ ತಂದಿದ್ದಾನೆ. "ನನಗೆ ಅನುಮಾನ ಇತ್ತು ಕಣೆ, ನೀನು ಇಂತಹವಳು ಎಂದು. ಹಲ್ಕಾಮುಂಡೆ, ಯಾರವನು ಹೇಳು, ಇಲ್ಲದಿದ್ದರೆ ನೋಡು ನಿನ್ನನ್ನು ಈಗಲೇ ಚರ್ಮ ಸುಲಿದು ಬಾಗಿಲಿಗೆ ತೋರಣ ಕಟ್ಟುತ್ತೇನೆ. ನಿನಗೆ ನಾನೇನೇ ಕಡಿಮೆ ಮಾಡಿದ್ದು? ಬೋ... ಹೇಳು. ನಿನ್ನನ್ನ ಮೆಚ್ಚಿ, ನನ್ನ ಕಡೆಯವರನ್ನೆಲ್ಲ ದೂರ ಮಾಡಿದ್ದಕ್ಕೆ ನನ್ನ ಮಾನ ತಗೆದು ಬಿಟ್ಟಲ್ಲೇ..." ಎಂದು ಕೂಗಿ ಕೂಗಿ ಮಾತಾಡುತ್ತಿದ್ದಾನೆ ಸುಬ್ಬಯ್ಯ.

"ಏನು ಸುಬ್ಬಯ್ಯ, ಏನಾಯ್ತು?" ಎಂದು ಕೇಳಿದ ರಾಯರಿಗೆ, "ನಿಮಗ್ಯಾಕ್ರಿ ನಮ್ಮನೆ ವಿಷ್ಯ...ಸಾವಿರ ಕಾರಣಗಳಿವೆ...ನೀವ್ಯಾರ್ರಿ ಕೇಳೋಕೆ... ಹೋಗ್ರಿ... ಹೋಗ್ರಿ ನಿಮ್ಮ ಕೆಲಸ ನೋಡ್ಕೋ ಹೋಗ್ರಿ," ಎಂದು ಸುಬ್ಬಯ್ಯ ಅಂದಾಗ ರಾಯರು, "ನೀನು ನಿನ್ನ ಹೆಂಡತಿಯೂ ನೇಣ್ಹಾಕಿಕೊಳ್ಳಿ...ನನಗೇನು? ಗಲಾಟೆ ಮಾಡುತ್ತಿದ್ದೆಯಲ್ಲ ಅದಕ್ಕೆ ಕೇಳಿದೆ. ಇಷ್ಟ ಇದ್ದರೆ ಹೇಳು. ಇಲ್ಲವಾದರೆ ಬಿಡು... ನಾನು ಬೆಳಿಗ್ಗೆ ನಿಮ್ಮ ಮನೆ ರಿಪೇರಿಗೆ ವ್ಯವಸ್ಥೆ ಮಾಡಲು ಬಂದಾಗ ಮರೆತು ಚಪ್ಪಲಿ ಬಿಟ್ಹೋಗಿದ್ದೆ. ಅವುಗಳನ್ನ ಹಾಕಿಕೊಂಡು ಹೋಗಲು ಬಂದೆ ಅಷ್ಟೆ," ಎಂದರು.

ರಾಯರ ಮಾತುಗಳನ್ನು ಕೇಳಿದ್ದೇ ತಡ, ಸುಬ್ಬಯ್ಯ ಹೆಂಡತಿಗೆ ತಾನೇ ಸೆರಗನ್ನು ಹೊದ್ದಿಸಿ, "ತಪ್ಪಾಯ್ತು ಕಣೆ...ತಪ್ಪಾಯ್ತು, ನಾನು ದುಡುಕಿಬಿಟ್ಟೆ," ಎಂದು ಹೆಂಡತಿಯನ್ನು ಒಳಗೆ ಕರೆದುಕೊಂಡು ಹೋದ. ✡

# ಸೌವರ್ಣ ಸುಮ ಸೋಪಾನ

ಮೂಲ : ಡಾ. ರಂ. ಶ್ರೀ. ಮುಗಳಿ
ಸಂಗ್ರಹ: ಶ್ರೀಮತಿ ಕಲಾವತಿ ಜಿ. ಕುಲಕರ್ಣಿ

ಹಿಂದಿನ ಸಂಚಿಕೆಯಿಂದ ಮುಂದುವರಿದುದು

ಒಂದು ದಿನ ಮುಂಜಾನೆ ಅಗ್ನಿವರ್ಣನು ಒಂದು ವರ್ಷದ ಋತುಚಕ್ರದ ನಿವಾಸ-ವಿಲಾಸಕ್ಕಾಗಿ ತನ್ನ ಇಬ್ಬರೂ ರಾಣಿಯರೊಡನೆ ಹಾಗೂ ಕೆಳದಿಯರೊಡನೆ ರಾಜಧಾನಿಯಿಂದ ಒಂದೆರಡು ಹರದಾರಿ ದೂರವಿರುವ ಕ್ರೀಡಾ ಶೈಲಕ್ಕೆ ರಥದಲ್ಲಿ ಕುಳಿತುಕೊಂಡು ಹೊರಟನು. ಹೊರಡುವ ಮೊದಲು ಮೂವರೂ ತಾಯಿಯ ಬಳಿಗೆ ಹೋಗಿ ವಂದಿಸಿ ಬಂದರು. ಪರಿಕರ ಸಹಿತವಾಗಿ ಊಳಿಗದ ಪರಿವಾರವೆಲ್ಲ ಸವಾರಿಯಾದ ಬಂಡೆಗಳಲ್ಲಿ ಹಿಂಬಾಲಿಸಿತು. ಅವುಗಳಲ್ಲಿ ಅವನ ವೀಣೆ-ಮೃದಂಗ ಮುಂತಾದ ವಾದ್ಯಗಳು ವಾದ್ಯ ವಾದಕರು ನರ್ತಕಿಯರು ಇವನ್ನೆಲ್ಲ ಸಾಗಿಸುತ್ತಿರುವ ಹಲವಾರು ಎತ್ತಿನ ಗಾಡಿಗಳೂ ಸೇರಿದ್ದವು.

ಕ್ರೀಡಾ ಪರ್ವತದ ನಟ್ಟ ನಡುವಿನ ಎತ್ತರದಲ್ಲಿ ಕಟ್ಟಿದ ಚಿಕ್ಕ ಅರಮನೆಯಿತ್ತು. ಅಲ್ಲಿಗೆ ದೊರೆ ಧಾರಿಣಿ-ಕಾಮಿನಿಯರ ಜತೆಯಲ್ಲಿ ಹೋಗಿ ತಳವೂರಿದನು. ಸಾಯಂಕಾಲದೊಳಗೆ ಪರಿಜನರು ತಂತಮ್ಮ ಕೆಲಸಗಳನ್ನು ಮಾಡುತ್ತ ಅರಮನೆಯ ಎಲ್ಲ ಸೌಕರ್ಯಗಳನ್ನು ಒದಗಿಸಲು ಸಜ್ಜಾದರು. ಅರಸ-ಅರಸಿಯರಿಗೆ ಕಾಲಕಾಲಕ್ಕೆ ಬೇಕಾಗುವ ಎಲ್ಲ ಖಾದ್ಯ ಪೇಯಗಳು ಸಿದ್ಧವಾದವು. ಸಂಜೆಯು ಸೂರ್ಯನೊಡನೆ ಕಣ್ಣು ಮುಚ್ಚಾಟ ಮಾಡುವ ಮೋಡಗಳನ್ನು ನೋಡುತ್ತ ಕ್ರೀಡಾ ಶೈಲವನ್ನು ಹತ್ತಿ ಇಳಿಯುತ್ತ ಮೈಮೇಲಿನ ಬಟ್ಟೆಗಳು ಸಡಿಲವಾಗಿ ಸರಿದರೂ ಸಂಕೋಚ ತಾಳದೆ ರಾಜರಾಣಿಯರು ವಿಸಟಂಬರಿದು ತಿರುಗಾಡಿದರು.

ರಾತ್ರಿ ಬಂದು ಬೆಳಕಿನ ಕಣ್ಣು ಮುಚ್ಚಿತು. ಲೆಕ್ಕವಿಲ್ಲದಷ್ಟು ಚಿಕ್ಕೆಗಳ ಕಣ್ಣು ತೆರೆಯಿಸಿತು. ರಾಜರಾಣಿಯರು ಸಮೀಚೀನ ಭೋಜನ ಮಾಡಿದರು, ತಾಂಬೂಲ ಸೇವಿಸಿದರು. ದೊರೆ ತನ್ನ ವೀಣೆಯನ್ನು ತರಿಸಿ ಶ್ರುತಿಯನ್ನು ಸರಿಗೊಳಿಸಿ ನಿಧಾನವಾಗಿ ನಾದಲಹರಿಗಳನ್ನು ನಿಶ್ಶಬ್ದವಾದ ಪರಿಸರದಲ್ಲಿ ಹರಿಯಬಿಟ್ಟನು. ಕೇಳುಗರ ಹೃದಯಗಳು ಅವುಗಳ ಹರಿಗುಂಟ ಹಿಗ್ಗಿನ ನಾವೆಯಲ್ಲಿ ಕುಳಿತು ವಿಹರಿಸುತ್ತ ಸಮರಸವಾಗುವಂತೆ ಧಾರಿಣಿ-ಕಾಮಿನಿಯರು ಅವನ ಪಕ್ಕದಲ್ಲಿಯೇ ಕುಳಿತು ಆನಂದಿಸುತ್ತಿದ್ದರು. ಸಮಯದ ಅರಿವು ಅಳಿಸಿಹೋಗಿತ್ತು. ಬರಬರುತ್ತ ನಟ್ಟಿರುಳು ಮೀರಿತು. ಎಲ್ಲರೂ ತಮ್ಮ ತಮ್ಮ ಶಯನ

ಮಂದಿರಗಳಿಗೆ ಹೋದರು. ದಣಿದು ಹೋದ ಮೈಗಳಿಗೆ ಬೇರೆ ಯಾವ ಬಯಕೆಯೂ ನುಗ್ಗದಂತೆ ನಿದ್ದೆ ತನ್ನ ಭದ್ರವಾದ ಬೇಲಿ ಹಾಕಿತು.

ಮರುದಿನ ಮಳೆರಾಯ ಮಿಂಚಿನ ಝಳಪಿನಿಂದಲೂ ಗುಡುಗಿನ ಡೊಳ್ಳಿನಿಂದಲೂ ತನ್ನ ಬರವನ್ನು ಸಾರುತ್ತ ಆಗಾಗ ಬೀಳುವ ಅಡ್ಡ ಮಳೆಗಳಿಂದ ದಾಳಿಯನ್ನು ಮೊದಲು ಮಾಡಿದನು. ಅಗ್ನಿವರ್ಣ ತನ್ನ ರಾಣಿಯರು ಮತ್ತು ಕೆಳದಿಯರೊಂದಿಗೆ ಕ್ರೀಡಾಶೈಲದ ಸುತ್ತಮುತ್ತಿನ ಕಾಡನ್ನು ಹೊಕ್ಕು ಮನಬಂದತ್ತ ಅಲೆದಾಡತೊಡಗಿದನು. ಕಾಮಿನಿ ತನ್ನ ಕೆಳದಿಯರ ನೆರವಿನಿಂದ ಬೆಟ್ಟ ಮಲ್ಲಿಗೆ ಮುತ್ತಿ ಮರಗಳ ಹೂಗಳನ್ನು ಕೊಯ್ದು ಮಾಲೆಗಳನ್ನು ಮಾಡಿ ತನ್ನ ಇನಿಯನ ಕೊರಳಿಗೆ ಹಾಕಿದಳು. ತಾಳೆ ಮರದ ಹೂಗಳ ಪರಾಗವನ್ನು ಅವನ ಮೈಗೆ ಪೂಸಿದಳು. ಧಾರಿಣಿ ಕಾಮಜ್ವಾಲೆಯಂತೆ ಕಾಣುವ ಮುತ್ತುಗದ ಹೂಗಳ ದಂಡೆ ಮಾಡಿ ಅವನ ಕೂದಲಿನ ಕಟ್ಟಿಗೆ ದುಂಡು ಸುತ್ತಿದಳು. ಪ್ರತ್ಯಕ್ಷ ಮದನನಂತೆ ಅವನು ಕಂಡನು. ಅವನನ್ನು ನಡುವೆ ನಿಲ್ಲಿಸಿ ಎಲ್ಲರೂ ರಿಂಗಣಗುಣಿತ ಮಾಡಿದರು. ಈ ಹೊತ್ತಿನ ಮೇಲೆ ಮಳೆ ಹನಿ ಮೊದಲಾಯಿತು. "ಮಳೆಯು ಸುರಿಯುವಂತಿದೆ, ಇನ್ನು ಚಾಟಿಗೆ ಹೋಗೋಣವೆ?" ಎಂದು ಧಾರಿಣಿ ಕೇಳಿದಳು.

"ಸುರಿಯುವ ಮಳೆಗೆ ಮೈಯೊಡ್ಡಲೆಂದೇ ಬಂದಿರುವಾಗ ಚಾಟಿನ ಮಾತೇಕೆ?" ಕಾಮಿನಿ ಅದನ್ನು ಮುರಿದು ಹಾಕಿದಳು. ಅರಸನೂ ಅವಳ ಮಾತಿಗೆ ಬೆಂಬಲ ಕೊಡುವಂತೆ ಗೋಣು ಹಾಕಿದನು. ಮಳೆ ಜೋರಾಗಿ ಹುಯ್ಯತೊಡಗಿತು. ಎಲ್ಲರೂ ತಪತಪ ತೊಯ್ದು ಹೋದರು. ಹೆಂಗಳೆಯರ ಮೈಮೇಲಿದ್ದ ತೆಳು ಬಟ್ಟೆಗಳು ಅಂಗಾಂಗಗಳಿಗೆ ಅಂಟಿಕೊಂಡು ಬತ್ತಲೆತನದ ಭ್ರಮೆಯಿಂದ ನೋಡುವ ದೊರೆಯ ಕಣ್ಣುಗಳನ್ನು ಸೆರೆ ಹಿಡಿದವು. ಎಲ್ಲರೂ ಒಂದು ವಿಶಾಲವಾದ ಆಲದ ಮರದ ಬುಡದಲ್ಲಿ ಹತ್ತೆಹತ್ತೆಯಾಗಿ ನಿಂತರು. ಮಳೆಯು ಧಾರೆ ನಿಂತಿತು. ಮೋಡದೊಳಗಿಂದ ಈ ಚೆಲುವಿನ ನೋಟ ನೋಡಲೆಂದು ಸೂರ್ಯ ಹಣಕಿದನು. ಅಲ್ಲಿಂದ ಅವರೆಲ್ಲ ಹಿಂದಿರುಗಿ ಬಂದು ತಂತಮ್ಮ ಕೋಣೆಗಳಿಗೆ ಹೋಗಿ ಬಟ್ಟೆ ಬದಲಿಸಿ ಹೊರ ಬರಲು, ಕ್ರೀಡಾಶೈಲದ ಇನ್ನೊಂದು ಕಡೆಯಿಂದ ಗಂಡು ನವಿಲಿನ ಕೇಕೆ ಕೇಳಿಸಿತು. ಅದನ್ನು ಅನುಸರಿಸಿ ಹೋಗಲಾಗಿ ಒಂದು ದಿನ್ನೆಯ ಮೇಲೆ ಬೆಡಗಿನಿಂದ ಹರವಾದ ತನ್ನ ಗರಿ ಬಿಚ್ಚಿ ನಿಂತ ಆ ನವಿಲು ಕೇಕೆ ಹಾಕುತ್ತ ಕುಣಿಯುವುದನ್ನು ನೋಡಿದರು. ಅದರ ನಲ್ಲೆಯಾದ ನವಿಲು ಹತ್ತಿರ ಬಂದಂತೆ ಮಾಡಿ ಮತ್ತೆ ದೂರ ಸರಿಯುತ್ತಿತ್ತು. ಸುತ್ತು ಕಡೆ ಇಂಥವೇ ನೋಟಗಳು ಕಂಡವು. ಕೇಕೆಗಳು ಕೇಳಿಸಿದವು. ಪುರುಷನೇ ಮೋಹನಾಕಾರ ತಾಳಿ ಬಣ್ಣಬಣ್ಣದ ಗರಿಗಳೊಳಗಿಂದ ಆಸೆಗಣ್ಣುಗಳನ್ನು ಚಾಚಿ ಪ್ರಕೃಯನ್ನು ರತಿ ಕ್ರೀಡೆಗೆ, ನವ ಸೃಷ್ಟಿಯ ನಾಂದಿಗೆ ಕರೆಯುವಂತೆ ತೋರಿತು. ಅಗ್ನಿವರ್ಣನಲ್ಲಿ ಸುಪ್ತವಾದ ಅಗ್ನಿ ಪ್ರದೀಪ್ತವಾಯಿತು. ಅದರ ಝಳದಿಂದ ರಾಣಿಯರು ಕಾವುಗೊಂಡರು, ನೀರೆಯರು ಕರಗಿ ನೀರಾದರು. ಲೋಕದ ರೀತಿ ನೀತಿಯನ್ನು ನಿರಾಕರಿಸಿ ಹೆಣ್ಣುತನವೆಲ್ಲ ಗಂಡಿನ ಸೊಂಕಿಗೆ ಹಾತೊರೆಯುವಂತಾಯಿತು. ಅರಮನೆಯ ಆಸರೆಯತ್ತ ಕಾಲೆಳೆಯಿತು.

ಆಗಾಗ ಮುಗಿಲು ಕಡಿದು ಬೀಳುವಂತೆ ಮಳೆ ಸುರಿಯುತ್ತಿತ್ತು. ರಾಜನು ಹೊರ ಬೀಳಲಾರದೆ ಪರಿವಾರದೊಂದಿಗೆ ಕ್ರೀಡಾ ಪರ್ವತದ ಅರಮನೆಯೊಳಗೆ ಉಳಿದುಕೊಂಡನು. ಹಗಲೆಲ್ಲ ಭೋಜನ ಸಮಯಗಳನ್ನು ಬಿಟ್ಟರೆ, ಉಳಿದೆಲ್ಲ ಹೊತ್ತು ಗಾಯನ ವಾದನ ನೃತ್ಯಗಳಲ್ಲಿ ಅವನು ತೊಡಗಿರುತ್ತಿದ್ದನು. ರಾತ್ರಿಯ ಮೊದಲ ಜಾವದಲ್ಲಿಯೂ ಅದು ಮುಂದುವರಿಯುತ್ತಿತ್ತು. ಕಣ್ಣು ಕಿವಿ ಮುಂತಾದ ಐದು ಇಂದ್ರಿಯಗಳಿಗೂ ದೊರೆಯುತ್ತಿರುವ ಈ ಸೌಖ್ಯ ಸಾರದ ಮುಂದೆ ಬೇರೆ ಯಾವ ಸುಖವನ್ನೂ ನಿವಾಳಿಸಿ ಒಗೆಯಬೇಕು ಎನ್ನುವಂತೆ ಅವನು ದಾಂಪತ್ಯದ ಒಂದು ಮಿತಿಯಲ್ಲಿ ಮೈನೋಗ ಹೊಂದುತ್ತ ಕಾಲ ಕಳೆಯುತ್ತಿದ್ದರೂ ಮೇಲಿಂದ ಮೇಲೆ ಮನದ ಮರೆಯಲ್ಲಿ ಅವಿತುಕೊಂಡು ಪ್ರಬಲವಾದ ರತಿ ಸುಖದ ಆಸೆ ದಿಗ್ಗನೆ ಹೊರಬಂದು ಮೈಯನ್ನೆಲ್ಲ ನಡುಗಿಸಿ ಪ್ರವಾಹದ ಸೆಳವಿನಲ್ಲಿ ಸಿಕ್ಕ ಕಸ ಕಡ್ಡಿಯಂತೆ ಮಾಡಿ ಸರದಿ ಸರದಿಯಾಗಿ ಅವನನ್ನು ಧಾರಿಣಿ

ಕಾಮಿನಿಯರ ಪಕ್ಕಕ್ಕೆ ನೂಕುತ್ತಿತ್ತು. ಮಾತ್ರ ವಲ್ಲ, ಯಾವ ನಿಧಿ ನಿಷೇಧವನ್ನು ಲೆಕ್ಕಿಸದೆ ಸಂಯಮಕ್ಕೂ ಸೊಪ್ಪು ಹಾಕದೆ ಆಗಾಗ ಮೋಹ ನಾಂಗಿಯಂಥ ಕೆಲವು ಕೆಳದಿಯರ ಸಂಗಕ್ಕೂ ಸಾಗಿಸುತ್ತಿತ್ತು. ಬರಬರುತ್ತ ಅದರಿಂದ ದೊರೆ ಯುವ ಸುಖವೋ ಅಸುಖವೋ ಹಿತವೋ ಅಹಿತವೊ ಇದಾವುದನ್ನು ಯೋಚಿಸದ ಗೀಳಾಗಿ ಅದು ಪರಿಣಮಿಸತೊಡಗಿತು, ಕ್ಷತ್ರಿಯ ಸತ್ವದ ಸರ್ವಸ್ವವನ್ನೂ ಹೀರಿ ಹಿಂಡಿ ಹಿಪ್ಪೆ ಮಾಡ ಹತ್ತಿತು. 'ನನಗೆ ಏನಾಗಿದೆ?' ಎನ್ನುವ ನಿರ್ಲಕ್ಷ್ಯದ ಮನದಲ್ಲಿಯೇ ಅವನು ಕಾಲ ಪುರುಷನ ಕೈಗೊಂಬೆಯಾದನು.

ಹೀಗೆ ಋತುಚಕ್ರದ ಬಗೆ ಬಗೆಯ ಭೋಗ ವನ್ನು ಸವಿದು ಅಗ್ನಿವರ್ಣನು ಪರಿವಾರ ಸಮೇತ ರಾಜಧಾನಿಗೆ ಮರಳಿ ನಿರ್ವಿಣ್ಣನಾಗಿ ಬಂದು ಜ್ವರದಿಂದ ಹಾಸಿಗೆ ಹಿಡಿದನು. ತಾಯಿ ನಂದಿನಿ ಚಿಂತಾತುರಳಾಗಿ ಬಂದು ಯೋಗಕ್ಷೇಮ ವನ್ನು ವಿಚಾರಿಸಿಕೊಂಡು ಹೋದಳು. ರಾಜ ವೈದ್ಯರು ತಕ್ಷಣ ಬಂದು ಔಷಧೋಪಚಾರವನ್ನು ಆರಂಭಿಸಿದರು. ಅದರಿಂದ ಬೇಗ ಗುಣ ವಾಯಿತು. ಅತಿ ಭೋಗದ ಅಲವರಿಕೆಯ ವಿರುದ್ಧ ಇದು ನಿಸರ್ಗದ ಮೊದಲ ಎಚ್ಚರಿಕೆ ಎಂಬುದನ್ನು ದೊರೆಗೆ ಅವರು ನಮ್ರವಾಗಿ ತಿಳಿ ಸಿದರು.

ಇದೆಲ್ಲಾ ನಡೆಯುತ್ತಿರುವಾಗಲೇ ಧಾರಿಣಿಗೆ ಇದ್ದಕ್ಕಿದ್ದ ಹಾಗೆ ಆರೋಗ್ಯ ಸ್ಥಿತಿಯಲ್ಲಿಯೂ ಕಸವಿಸಿ ಓಕರಿಕೆಗಳು ಹೆಚ್ಚಿ ದಿನದ ಆಹಾರ ಬೇಡ ವಾಗಿರುವುದೆಂಬ ಸುದ್ದಿ ಮೆಲ್ಲಗೆ ಅರಮನೆಯಲ್ಲಿ ಹರಡಿ ಚಿಂತೆಯಲ್ಲಿಯೂ ಸಂತಸವನ್ನು ಬೀರಿತು.

ಹಲವಾರು ವರ್ಷಗಳ ತರುವಾಯ ತಾಯಿ ಯಾಗುವ ಸಮಾಚಾರ ಅರಮನೆಯಲ್ಲಿ ಅಲ್ಲದೇ ನಗರದಲ್ಲೆಲ್ಲ ಹರಡಿತು. ಜನರು ತಮ್ಮ ತಾಪತ್ರಯ ಮರೆತು ಸಂತಸ ಪಟ್ಟರು. ಇದೇ ಹೊತ್ತಿಗೆ ಅಗ್ನಿವರ್ಣನಿಗೆ ನಿರೋಪ ಕಳಿಸಿ ಕರೆಸಿ ಕೊಂಡು ನಂದಿನಿ ಅವನನ್ನು ಹರಸಿದಳು. ಅವನ ಸಂತೋಷವೂ ಮೇರೆ ಮೀರಿತ್ತು. ತಾಯಿಯ ಬಗ್ಗೆ ಗೌರವ ಹೆಚ್ಚಿತ್ತು. "ಅಮ್ಮ ನೀನು ಆಜ್ಞಾಪಿಸಿದಂತೆ ಆ ಪುತ್ರೀಯ ಯಷ್ಟಿಯನ್ನು ಮಾಡಿದ್ದರ ಫಲವೆಂದು ನನ್ನಂಥವನೂ ನಂಬ ಬೇಕಾಗಿದೆ" ಎಂದನು.

"ಅದೇ ನೋಡಪ್ಪ. ಫಲ ಕಾಣುವ ವರೆಗೆ ನೀನೇನು, ಯಾರೇನು, ಜನ ನಂಬುವುದಿಲ್ಲ. ತಿಳವಳಿಕೆ ಮತ್ತು ನಂಬಿಕೆ ಇವೆರಡೂ ಕಡು ವೈರಿ ಗಳೆಂದು ಭಾವಿಸುತ್ತಾರೆ."

"ನಿನ್ನ ಮುಂದೆ ಒಪ್ಪಲೇಬೇಕು. ನೋಡಿದರೆ ಹಾಗೆ ಭಾವಿಸುವವರಲ್ಲಿ ನಾನೊಬ್ಬ. ಇನ್ನೂ ನನ್ನ ನಂಬಿಕೆ ಗಟ್ಟಿಯಾಗಿಲ್ಲ. ಕಾಯಿಯಾದದ್ದು ಹಣ್ಣಾಗುವ ವರೆಗೆ ತಡೆಯಬೇಕಲ್ಲವೇ?"

"ತಡೆಯಪ್ಪ ತಡೆ. ಪ್ರಪಂಚವನ್ನು ಆಳುವ ಅಗಾಧ ಶಕ್ತಿ ಕೂಡ ನಮ್ಮಲ್ಲಿ ನಂಬಿಕೆ ಹುಟ್ಟಲಿ ಎಂದು ಅನಂತ ಕಾಲ ತಡೆಯುತ್ತದೆ. ನಮ್ಮನ್ನು ಅನುಭವದ ಏರು ತಗ್ಗಿನಲ್ಲಿ ಹಾಯಿಸಿ ಮುಗಿಸ ಬೇಕೆಂಬುದೆ ಅದರ ಸಂಕಲ್ಪವಿರಬೇಕು. ಇದನ್ನು ಒಪ್ಪಿದರೆ ನಮ್ಮ ಎಲ್ಲ ಕೆಲಸಗಳಿಗೂ ಉತ್ಸಾಹ ಚಿಮ್ಮುತ್ತದೆ ಎಲ್ಲ ಸೋಲುಗಳಿಗೆ ಅರ್ಥ ಬರುತ್ತದೆ."

ತಾಯಿ ಅಪೇಕ್ಷೆ ಪಟ್ಟಂತೆ ಅಗ್ನಿವರ್ಣ ರಾಜ ಪುರೋಹಿತರನ್ನು ಕರೆಯಿಸಿ ರಾಜಧಾನಿಯ ಎಲ್ಲ ದೇವಸ್ಥಾನಗಳಲ್ಲಿಯೂ ಪೂಜೆ ಮಂಗಳಾರತಿ ನಡೆಯುವಂತೆಯೂ ಮಹಾಮಾತ್ಯರನ್ನು ಬರ ಮಾಡಿಕೊಂಡು ಬಡಬಗ್ಗರಿಗೆ ಆಹಾರ ವಸ್ತ್ರ ದಾನಗಳನ್ನು ಮಾಡಬೇಕೆಂದು ಅಪ್ಪಣೆ ಕೊಡಿ- ಸಿದನು. ಧಾರಿಣಿ ತನ್ನ ಬಯಕೆಗಳನ್ನು ತೀರಿಸಿ ಕೊಂಡಳು. ಸೊರಗಿದ ಬಿಳಿಚಿದ ಮೈಯಲ್ಲಿಯೂ ಒಂದು ಸೌಮ್ಯ ಕಾಂತಿಯನ್ನು ಸೂಸಿದಳು.

ಧಾರಿಣಿಯ ಹತ್ತಿರ ಕಾಮಿನಿ ಹೋಗಿ "ನೀವು ಬಯಸುವಂಥ ಯುವರಾಜ ಹುಟ್ಟಿ ಬರಲಿ" ಎಂದು ಶುಭ ಕೋರಿ ಬಂದಳು. ದೊರೆಗೂ ತನ್ನ ಸಂತಸ ತಿಳಿಸಿದಳು.

ಒಂದೊಂದು ದಿನ ಒಬ್ಬರ ಸಹವಾಸದಲ್ಲಿರ- ಬೇಕೆಂಬ ಕ್ರಮದಂತೆ ಇಬ್ಬರೂ ರಾಣಿಯರ ಅಂತಃಪುರಕ್ಕೆ ಹೋಗುತ್ತ ಅವನು ಅದೆಷ್ಟೋ ದಿನಗಳನ್ನು ದಾಟಿಸಿದನು. ಧಾರಿಣಿಗೆ ಈ ಸಮಯದಲ್ಲಿ ಒಂದು ಬಗೆಯ ಮಮತೆ ಬೇಕಾಗುತ್ತಿತ್ತು. ಆದರೆ ಅದನ್ನು ಒದಗಿಸುವ ನೆವದಿಂದ ಅವಳ ಬಳಿ ಸಾರಿದ ದೊರೆ ಕೆಲವು ಸಲ

ಅವಳಿಗೆ ಅಪಾಯಕರವಾಗುವಂತೆ ಮೀರಿ ಬಂದ ಸಂಭೋಗ ಲಾಲಸೆಯಿಂದ ಹಿಂಸೆ ಕೊಡುತ್ತಿದ್ದನು. ಆದರಿಂದ ಅವಳು ಹೇಳಬಾರದ ನೋವನ್ನು ಅನುಭವಿಸುತ್ತಿದ್ದಳು. ಆದರೆ ಅವಳ ಬಸಿರಿನಲ್ಲಿ ಬೆಳೆಯುತ್ತಿದ್ದ ಭ್ರೂಣವು ನಾಲ್ಕೈದು ತಿಂಗಳಾಗುತ್ತಲೇ ತಾಳಲಾಗದ ವೇದನೆಯನ್ನು ಅವಳಿಗೆ ಕೊಟ್ಟು ಯಾವ ಉಪಾಯದಿಂದಲೂ ಉಳಿಯದೆ ಬಿದ್ದು ಹೋಯಿತು.

ಅಗ್ನಿವರ್ಣನು ಆಗಾಗ ಹಗಲು ಹೊತ್ತು ಧಾರಿಣಿಯ ಸನಿಹಕ್ಕೆ ಹೋಗಿ ಅವಳ ಆರೋಗ್ಯವು ಸುಧಾರಿಸುತ್ತಿರುವುದನ್ನು ಅರಿತುಕೊಂಡು ಸರಸ ಸಲ್ಲಾಪ ಮಾಡಿ ಬರುತ್ತಿದ್ದನು. ಇರುಳೆಲ್ಲ ಕಾಮಿನಿಯ ಸಹವಾಸದಲ್ಲಿ ಕಳೆಯುತ್ತಿದ್ದನು. ರಾಜ್ಯಭಾರವನ್ನು ಕುಶಾಗ್ರನಿಗೆ ಒಪ್ಪಿಸಿದ್ದರಿಂದ ತನ್ನ ಸಂಗೀತ ನೃತ್ಯ ಇವುಗಳ ವಿವಿಧ ಪ್ರಯೋಗಗಳಿಗೆ ಅಸ್ಪದ ದೊರೆಯುತ್ತಿತ್ತು. ನಡುವೆ ಕುಶಾಗ್ರನೊಂದಿಗೆ ಹೋಗಿ ಸ್ಮಾರಕ ಭವನದ ಕಟ್ಟಡದ ಪ್ರಗತಿಯನ್ನು ನೋಡಿಕೊಂಡು ಬರುತ್ತಿದ್ದನು. ಹೀಗೆ ಕೆಲವು ದಿನಗಳು ಸಂದ ಮೇಲೆ ಕಾಮಿನಿ ಗರ್ಭವತಿ ಆದಳೆಂಬ ಸುದ್ದಿ ಅರಮನೆಯ ಮೂಲೆ ಮೂಲೆಗೂ ಹರಡಿತ್ತು.

ಅಂದು ರಾತ್ರಿ ಅಗ್ನಿವರ್ಣನು ಕಾಮಿನಿಯ ಮಂದಿರಕ್ಕೆ ಆಗಮಿಸಿ ತನ್ನ ವಿಪಂಚಿ ವೀಣೆಯನ್ನು ತರಿಸಿ ತಾನು ರಚಿಸಿದ ಭಾವಾನುಗುಣವಾದ ಹೊಸ ವರ್ಣಗಳನ್ನೂ ರಾಗ ಪ್ರಯೋಗಗಳನ್ನೂ ನುಡಿಸಿ ತೋರಿಸಿದನು. ಸಂಗೀತ ಪ್ರಕ್ರಿಯೆಯಲ್ಲಿಯ ಈ ಸೃಜನಾತ್ಮಕ ಸಾಧನೆಯಿಂದ ತಾನೂ ಆನಂದಪಟ್ಟನು, ಅವಳಿಗೂ ಆನಂದ ಉಂಟುಮಾಡಿದನು. ವೀಣೆಯನ್ನು ತೆಗೆದಿಟ್ಟು ಈ ಮನೋಲಹರಿಯಲ್ಲಿ ತೇಲುತ್ತ ಇಬ್ಬರೂ ಮಂಚದ ಮೇಲೆ ಒರಗಿದರು. ಕಾಮಿನಿಗೆ ಅವನ ಮೈಸೋಂಕಿನಿಂದ ಪುಳಕವಾದರೂ ಸ್ವಲ್ಪ ಭಯವಾಯಿತು. ಅವನು ಅವಳನ್ನು ಬರಸೆಳೆದು ಅಪ್ಪಿಕೊಂಡನು,

ಮುತ್ತಿಟ್ಟನು. ಅವಳ ಎದೆ ಡವಡವಿಸಹತ್ತಿತ್ತು. ಅವನಿಗೆ ಹೇಗೆ ಹೇಳಬೇಕು ತಿಳಿಯಲಿಲ್ಲ. ಏರುಜವ್ವನದ ರೂಪದ ಅಪ್ಪುಗೆಯಲ್ಲಿ ಹಲವಾರು ಸಲ ತನ್ನನ್ನೇ ಮರೆತು ಹೋದ ಆಕೆಗೆ ಹೊಸ ಸಂನ್ನಿವೇಶದ ಸಂಕೋಚವು ಸಹ ತಡೆಯುವ ಬಲವನ್ನು ಕೊಡದಾಯಿತು. ಕೂಡಿ ಬಂದಾಗ ಸುಖ ಕೊಡಬೇಕು, ಪಡೆಯಬೇಕು ಎಂಬ ಪ್ರಬಲ ಪ್ರೇರಣೆಯ ಮುಂದೆ ಅಪಾಯ ಭೀತಿ ದುರ್ಬಲವಾಗಿ ಬಿಟ್ಟಿತು. ತನಗೆ ಅಪ್ಪೊತ್ತೇ ಧಾರಿಣಿ ನೀಡಿದ ಎಚ್ಚರಿಕೆಯನ್ನು ನೆನೆದಳು. ಅತ್ತೆಯ ಹರಕೆಯನ್ನು ಜ್ಞಾಪಿಸಿಕೊಂಡು, ಧೈರ್ಯ ತಂದುಕೊಂಡು "ಇನಿಯ ಆ ಮಂಚವು ನಿಮ್ಮನ್ನು ಕರೆಯುತ್ತಿದೆ ಮಲಗುವ ಹೊತ್ತಾಯಿತಲ್ಲವೇ?" ಎಂದಳು.

"ಯಾಕೆ? ಈ ಮಂಚವೇಕೆ ಬೇಡ?"

"ಈ ಮಂಚದಲ್ಲಿ ಹೊರಗೆ ಕಾಣದಂತೆ ಕಿಡಗೇಡಿ ಒಬ್ಬ ಸೇರಿಕೊಂಡಿದ್ದಾನೆ."

"ಓಹೋ! ಅವನನ್ನು ನೋಡಿಕೊಳ್ಳುವೆ. ನೀನು ಭಯಪಡಬೇಡ." ಹೀಗೆಂದು ಅವಳ ಹೊಟ್ಟೆಯ ಮೇಲೆ ನವುರಾಗಿ ಕೈಯಾಡಿಸಿದನು. ಇಬ್ಬರೂ ನಕ್ಕರು. ಅವನು ಅವಳನ್ನು ಇನ್ನೂ ಹತ್ತಿರ ಸೆಳೆದನು.

"ನೋಡಿ, ನೀವು ಹೀಗೆ ಮಾಡಿದರೆ ಆ ಕಿಡಗೇಡಿ ಹೊರಬಂದು ನಿಮಗೆ ತೊಂದರೆ ಕೊಡುವನು."

"ಹುಚ್ಚಿ ನೀನೊಬ್ಬಳು. ಅವನೇನು ಈಗ ಬರುತ್ತಾನೆ? ಇಲ್ಲದ ಭಯ ನಿನ್ನದು" ಎನ್ನುತ್ತ ಒಳಗಿನಿಂದ ನುಗ್ಗಿ ಬರುತ್ತಿರುವ ಲಾಲಸೆಗೆ ತಡೆಯನ್ನು ತರಲಾರದೆ ಲಗ್ಗೆಯನ್ನು ನಡೆಸಿ ಬಿಟ್ಟನು.

ಕಾಮಿನಿಗೆ ಆನಂದವೂ ಆಯಿತು, ಆಯಾಸವೂ ಆಯಿತು. ಧಾರಿಣಿಯ ಕೋರಿಕೆಯಂತೆ ಅರಮನೆಯ ಹೊರದೋಟವೆಲ್ಲ ವನಭೋಜನವನ್ನು ಸಂಗೀತ ನೃತ್ಯವನ್ನು ಏರ್ಪಡಿಸಬೇಕೆಂದೂ ಅರಮನೆಯಲ್ಲಿ ಎಲ್ಲರನ್ನೂ ಆಮಂತ್ರಿಸಬೇಕೆಂದೂ ಪಾರುಪತ್ಯಗಾರರಿಗೆ ಅಪ್ಪಣೆಯಿತ್ತನು. ಧಾರಿಣಿ-ಕಾಮಿನಿ, ಕೆಳದಿಯರು ಪರಿಜನ ಪರಿವಾರದವರು ಎಲ್ಲರೂ ಸೇರಿದರು. ತಾಯಿಯಾಗಲಿರುವ ಕಾಮಿನಿಗೆ ಇದು ವನಭೋಜನವೆಂದು ದೊರೆ ಹೇಳಿದನು. ಸೊಗಸಾದ ಊಟವಾಯಿತು, ಸಂಗೀತವಾಯಿತು. ಹೂವಿನಿಂದ ಅಲಂಕೃತವಾದ ಮೋಹಕ ಮಂಟಪದಲ್ಲಿ ತೂಗುಮಂಚವನ್ನು ಕಟ್ಟಿ ಕಾಮಿನಿಯನ್ನು ತೂಗಿದ್ದಾಯಿತು. ಎಲ್ಲರೂ ನಲಿದಾಡಿ ತಮ್ಮ ತಮ್ಮ ಕೋಣೆಗಳಿಗೆ ಹೋದರು. ಕಾಮಿನಿ ತನಗೆ ಹೊಟ್ಟೆ ನೋವೆಂದು ತನ್ನ ಮಂದಿರಕ್ಕೆ ತೆರಳಿದಳು. ಆ ತೂಗು ಮಂಚದ ಮೇಲೆ ತಾನೊಬ್ಬನೆ ಕುಳಿತು ಅಗ್ನಿವರ್ಣನು ವೀಣೆ ನುಡಿಸುತ್ತಿದ್ದನು. ಮಧ್ಯರಾತ್ರಿ ಮೀರಿತು. ಇನ್ನು ವಿಶ್ರಾಂತಿಗೆ ತೆರಳಬೇಕೆಂದು ಧಾರಿಣಿಯ ಆಜ್ಞೆಯಂತೆ ಸೇವೆಗಾಗಿ ಪಕ್ಕದಲ್ಲಿ ನಿಂತಿರುವ ದಾಸಿಯೊಬ್ಬಳು ಬಂದು ಬಿನ್ನವಿಸಿದಳು. ಅವನು ಅವಳನ್ನು ನೋಡಿ ವೀಣೆಯನ್ನು ಬದಿಗಿರಿಸಲು ಹೇಳಿದನು. ಹಾಗೆ ಮಾಡಿದ ಮೇಲೆ "ಇಲ್ಲಿ ಕುಳಿತುಕೋ" ಎಂದು ತನ್ನ ಪಕ್ಕಕ್ಕೆ ಕೈ ಮಾಡಿದನು. ಅವಳು ಬೆಚ್ಚಿ ಬೆದರಿ ಹಾಗೆ ನಿಂತಳು. ಅವನು ಅವಳ ಇಂಗಿತವನ್ನು ತಿಳಿದು ಅಳುಕಿದನು, ಆದರೆ ಹಠಾತ್ತಾಗಿ ಜೀವದಾಳದಿಂದ ನುಗ್ಗಿ ಬಂದ ತುಡಿತಕ್ಕೆ ಒಳಗಾಗಿ ಅವಳನ್ನು ಬರಸೆಳೆದು ಬಹುದಿನದಿಂದ ತಣಿಯದ ಕಾಮದಾಹವನ್ನು ತೀರಿಸಿದನು. ಅವನ ಸರ್ವಸುಖದ ದರ್ಶನವನ್ನು ತನ್ನ ನಗೆಯಿಂದ ಅಣಕಿಸುತ್ತ ಚಂದ್ರ ಮುನ್ನಡೆದನು.

ಮರುದಿನ ಕಸಪಿಸಿ ಹೆಚ್ಚಾಗಿ ಎಷ್ಟು ಉಪಚಾರ ಮಾಡಿದರೂ ಕಡಿಮೆಯಾಗದೇ ಕಾಮಿನಿ ಏಳು ತಿಂಗಳಲ್ಲಿಯೇ ಸತ್ತ ಹೆಣ್ಣು ಶಿಶುವಿಗೆ ಬಹಳ ಕಷ್ಟದಿಂದ ಜನ್ಮವಿತ್ತಳು. ಆಸೆಯ ಗೋಪುರ ಕುಸಿದು ಬರಸಿಡಿಲು ಬಡಿದಂತಾಗಿ ನೆಲ ಹಿಡಿದಳು.

ಹೆರಿಗೆಯಿಂದ ಆಶಾಭಂಗವಾದ ದಿನ ಅಗ್ನಿವರ್ಣನು ಅವಳ ಹತ್ತಿರ ಹೋಗಿ ದುಃಖದಲ್ಲಿ ಪಾಲುಗೊಂಡಿದ್ದನು. ಆರೋಗ್ಯ ಕುದುರಿದ ಮೇಲೆ ಮತ್ತೆ ಬರುವೆನೆಂದು ಹೇಳಿದ್ದನು.

ಅದೇ ತಾನೇ ವೀಣೆಯ ತಂತಿಯ ಮೇಲೆ ಬೆರಳಾಡಿಸಿ ಅವನು ಉತ್ಸಾಹದಲ್ಲಿದ್ದನು. ಕಾಮಿನಿಯ ಮಂಚದ ಮೇಲೆ ಅವಳೊಂದಿಗೆ ಕುಳಿತು

ಪಡೆಯ ಕೆಲವರನ್ನು ತನ್ನೊಡನೆ ಕರೆದುಕೊಂಡು ಹೋದವನು ರಾತ್ರಿಯಾದರೂ ಬರಲಿಲ್ಲ. ಅಗ್ನಿವರ್ಣನು ಎಲ್ಲ ಸೌಕರ್ಯಗಳಿದ್ದರೂ ಒಂಟಿಯಾದನು. ಅವನ ನಿದ್ದೆ ಹಾರಿಹೋಯಿತು. ಬೇಡರ ಪಡೆಯವರು ಹತ್ತಿರದಲ್ಲಿಯೇ ಬೇಡತಿಯರ ತೆರೆದೆದೆಯ ಕುಣಿತ ನೋಡಿ ಸಂತೋಷಪಡೆಯುತ್ತಿದ್ದರು. ಒಂಟಿತನ ತಡೆಯಲಾರದೆ ಅಲ್ಲಿಗೆ ಹೋದನು. ತಾನು ದೊರೆಯೆಂಬುದನ್ನು ಮರೆತು ಅವರೊಡನೆ ಕುಣಿಯತೊಡಗಿದನು. ಬೇಟಕ್ಕೆ ಕರೆಯುತ್ತಿರುವ ಅಗಲ ಕಣ್ಣುಗಳುಳ್ಳ ಬೇಡತಿಯೊಬ್ಬಳ ಕೈಹಿಡಿದು ತಾನೂ ಒಬ್ಬ ಬೇಡನಂತಾದನು. ಅವಳ ಸೋಂಕಿನಿಂದ ಅವನ ಸುಪ್ತಾಗ್ನಿ ಜಾಗೃತವಾಯಿತು. ಸುಂಟರಗಾಳಿಗೆ ಸಿಕ್ಕ ತರಗೆಲೆಯಂತೆ ಅವನ ಸ್ಥಿತಿಯಾಯಿತು. ಬೇಡರೆಲ್ಲ ನೋಡಿ ಚಕ್ಕಸ ಬೆರಗಾಗಲು, ಅವಳನ್ನು ತನ್ನ ಬೀಡಾರಕ್ಕೆ ಎಳೆದೊಯ್ದು ತನ್ನ ಸರ್ವಸುಖದ ಇನ್ನೊಂದು ಪರಿಯ ಸಮಾಧಿಯಲ್ಲಿ ವಿಲೀನನಾದನು.

ಚೈತ್ರಮಾಸದ ಮೊದಲಿನಿಂದಲೇ ಈ ಸಲ ರಾಜಧಾನಿಯಲ್ಲಿ ಭರದಿಂದ ಮಹೋತ್ಸವದ ಸಿದ್ಧತೆಗಳು ನಡೆದಿದ್ದವು. ಯಾಕಂದರೆ ಈ ತಿಂಗಳ ನವಮಿಯ ಮುಹೂರ್ತದಲ್ಲಿ ರಾಮಜನ್ಮದ ಶುಭ ದಿನದಂದು ಅವನ ಹಾಗೂ ಇಕ್ಷ್ವಾಕು ಕುಲದ ಕೆಲವು ಮಹನೀಯ ಪೂರ್ವಜರ ಕೊನೆ ಬಾಳುವ ನೆನಪಿಗೆಂದು ನಿರ್ಮಾಣವಾಗಿ ಪೂರ್ಣಗೊಂಡಿರುವ ಭವ್ಯ ಸ್ಮಾರಕ ಭವನದ ಪ್ರಾರಂಭೋತ್ಸವವು ಅತ್ಯಂತ ವಿಜೃಂಭಣೆಯಿಂದ ನೆರವೇರುವುದಿತ್ತು. ಹುಣ್ಣಿಮೆಯ ದಿನ ಅಗ್ನಿವರ್ಣನ ನಾಲ್ವತ್ತನೆಯ ವರ್ಷಪೂರ್ತಿಯ ಹುಟ್ಟು ಹಬ್ಬದಲ್ಲಿ ಸಮಾರೋಪವಾಗುವದಿತ್ತು. ಕುಶಾಗ್ರನ ನೇತೃತ್ವದಲ್ಲಿ ನಾಲ್ಕೈದು ವರ್ಷಗಳವರೆಗೆ ನೂರಾರು ಸ್ಥಾಪತ್ಯ ವಿಶಾರದರು ಮತ್ತು ಚಿತ್ರ ಕಲಾವಿದರು ಹಗಲಿರುಳು ದುಡಿದು ಅರಮನೆಯ ಒಳ ಅಂಗಣದಲ್ಲಿಯೇ ಪೂರ್ತಿಗೊಳಿಸಿದ ಅಚ್ಚ ಬಿಳಿಯಾದ ಅಮೃತಶಿಲೆಯ ಸ್ಮಾರಕ ಭವನವು ಅಂದಿನ ಜಗತ್ತಿನ ಅಚ್ಚರಿಗಳಲ್ಲಿ ಒಂದಾಗಿತ್ತು.

ರಾಮ ಜನ್ಮೋತ್ಸವದ ದಿನ ಸೂರ್ಯ ಮೋಡದೊಳಗಿಂದ ಸುತ್ತುಕಡೆ ತನ್ನ ಬೆಳಕಿನ ಕಿರಣಗಳನ್ನು ಮೂಡಣ ಚೆಲುವೆಯ ಮುಕುಟದ ಮೇಲಿನ ಸಿರಪೇಚಿನಂತೆ ಪಸರಿಸುತ್ತ ಮೇಲೆ ಬಂದನು. ತನ್ನ ವಂಶವನ್ನು ಬೆಳಗಿದ ರಾಜಾಧಿರಾಜರ ಸ್ಥಿರಸ್ಥಾಯಿಯಾದ ಸ್ಮಾರಕ ಮಂದಿರವನ್ನು ತಾನೇ ಮೊದಲು ಸ್ಪರ್ಶಿಸಿ ಒಳಹೊರಗೆಲ್ಲ ಕಣ್ತುಂಬ ನಲಿದಾಡಬೇಕೆಂದೆ ಅವನ ಚಪಲಬಯಕೆಯಿರಬೇಕು.

ನಗರದ ಪ್ರಮುಖರು ಸ್ನಾನ ಮಾಡಿ ಬೆಡಗಿನ ಬಟ್ಟೆಯುಟ್ಟು ಪ್ರಾರಂಭೋತ್ಸವಕ್ಕೆ ಹೊರಡಲು ಸಿದ್ಧರಾಗಿದ್ದರು. ಮಂಗಲ ವಾದ್ಯಗಳು ಅರಮನೆಯ ಮೇಲಣ ಗೋಪುರದಿಂದ ಮೊಳಗುತ್ತಿದ್ದವು. ನಾಗರಿಕರೂ ಪರವೂರಿಂದ ಬಂದ ಪ್ರಜೆಗಳೂ ಅದರ ಒಳಗೆ ಒಬ್ಬೊಬ್ಬರಾಗಿ ಪ್ರವೇಶಿಸಿ ನೋಡಲು ವ್ಯವಸ್ಥೆಯಾಗಿತ್ತು. ತಮ್ಮ ಎಲ್ಲ ಕಷ್ಟ ಕಾರ್ಪಣ್ಯಗಳನ್ನು ನುಂಗಿಕೊಂಡು ಅವರೆಲ್ಲ ಸಹಸ್ರಾವಧಿ ಸಂಖ್ಯೆಯಲ್ಲಿ ಅದನ್ನು ನೋಡಲು ಆತುರರಾಗಿದ್ದರು.

ಅಂದು ಬೆಳಗ್ಗೆ ಗೊತ್ತಾದ ಸುಮುಹೂರ್ತಕ್ಕೆ ಸ್ವಲ್ಪ ಮುಂಚೆ ಸ್ಮಾರಕ ಭವನದ ಮುಂದುಗಡೆ ಹಾಕಿದ ಅಲಂಕೃತ ಮಂಟಪದಲ್ಲಿ ಆಮಂತ್ರಿತರೆಲ್ಲ ಬಂದು ಕುಳಿತುಕೊಂಡರು. ಮುಹೂರ್ತ ಸಮೀಪಿಸುತ್ತಿರಲು ಅರಮನೆಯಿಂದ ಅಗ್ನಿವರ್ಣ ಮಹಾರಾಜನು ತಾಯಿ ನಂದಿನೀದೇವಿ, ಮಹಾರಾಣಿಯರಾದ ಧಾರಿಣಿ-ಕಾಮಿನಿಯರೊಂದಿಗೆ ರಾಜವೇಷದಲ್ಲಿ ಭಟ್ಟಂಗಿಗಳಿಂದ ಉಗ್ಗಡಣೆ ಮಾಡಿಸಿಕೊಳ್ಳುತ್ತ ಬಂದು ಮುಂದುಗಡೆಯ ವಿಶಿಷ್ಟ ಆಸನದಲ್ಲಿ ಪರಿವಾರದೊಂದಿಗೆ ಕುಳಿತುಕೊಂಡನು. ಮಹಾಮಾತ್ಯ ಚತುರಾನನ, ಇತರ ಅಮಾತ್ಯರು, ಸೇನಾಪತಿ ಮುಂತಾದ ಪ್ರಮುಖರು ಉಚಿತ ಆಸನಗಳಲ್ಲಿ ಕುಳಿತರು. ಸರಿಯಾದ ಮುಹೂರ್ತದಲ್ಲಿ ರಾಜಪುರೋಹಿತರು ವೈದಿಕ ಗಣ್ಯರ ನೆರವಿನಿಂದ ಶಾಸ್ತ್ರೋಕ್ತವಾದ ವಿಧಿಯಂತೆ ಹೋಮ ಹವನಗಳನ್ನು ಮಾಡಿ ವಾಸ್ತು ಪ್ರತಿಷ್ಠೆಯನ್ನು ಸಾಂಗಗೊಳಿಸಿದರು.

ಹೀಗೆ ಪ್ರಾರಂಭದ ಧಾರ್ಮಿಕ ವಿಧಿಗಳು ಮುಗಿದ ಕೂಡಲೇ ವಾದ್ಯವೃಂದದ ಸಮ್ಮಿಶ್ರ

ಮುಡಿಮರ ಸಾಲಿನಲ್ಲಿ, ನನಗಾಗಿ ಒಂದು ನಡವೆಯನ್ನು ಇಡಲು ಹೇಗೆ ಮನಸ್ಸು ಮಾಡಿದೆ ಮಿತ್ರ ? ಅವರೆಲ್ಲಿ, ನಾನೆಲ್ಲಿ? ಅವರೆಂಥ ಹಿಮಾಲಯದ ಎತ್ತರ ಧೀರರು, ತ್ಯಾಗಿಗಳು, ಸತ್ವವಂತರು! ನಾನೋ ನಿರಂತರ ಭೋಗದಲ್ಲಿ ಮುಳುಗಿ ಏಳುತ್ತಿದ್ದೇನೆ, ಸರ್ವಸುಖಿ ಎಂಬ ಬಿಸಿಲುಗುದುರೆಯ ಬೆನ್ನುಹತ್ತಿ ವಿನಾಶದ ಅಂಚಿನಲ್ಲಿ ಇರುವೆನೇನೋ ಎಂದು ನನಗೀಗ ಅನಿಸಹತ್ತಿದೆ!

"ಹಾಗೆ ಭಾವಿಸಬೇಡಿ ದೊರೆಗಳೇ. ಯಾವ ಸೋಲು ಇಲ್ಲದೆ ನೋವು-ನಲುಗು ಇಲ್ಲದೆ ಹುಟ್ಟಿದೊಡನೆ ಎತ್ತರಕ್ಕೆ ಬೆಳೆದಂತೆ ನಿಂತ ಆ ನಿಮ್ಮ ಪೂರ್ವಜರಿಗಿಂತ ನೀವು ಮಿಗಿಲಾಗಿ ಮೆರೆಯುವಿರಿ. ಅದರಿಂದ ನಿಮ್ಮ ಸೋಲು ಗೆಲುವಾದೀತು, ನೋವು ನಲಿವಾದೀತು ಸಾವೂ ಅಮರವಾದೀತು."

"ಮಿತ್ರ, ಇದೆಲ್ಲ ನಿನ್ನ ಸ್ನೇಹಾತಿಶಯದಿಂದ ಕುಡಿಯೊಡೆದ ಕಲ್ಪನೆಯಷ್ಟೆ."

"ಹಾಗಲ್ಲ ದೊರೆಗಳೆ! ಮಹಾಪುರುಷರಾಗಿಯೇ ಹುಟ್ಟಿ ಬೆಳೆದವರಿಗಿಂತ ಸಾಮಾನ್ಯ ಮಾನವರಾಗಿ ಎಲ್ಲ ತರದ ಯಾತನೆಗೆ ಮೈಯೊಡ್ಡಿ ಏಳು ಬೀಳುಗಳಿಂದ ಎದೆಗುಂದದೆ ತಾನು ಏನಿರುವೆ, ಏನಾಗಬಲ್ಲೆ ಎಂಬ ಗುರಿಯನ್ನು ಅರಿತು ಅದನ್ನು ತಲುಪಲು ಹೆಣಗುವ ಸಾಹಸ ರಸಿಕರು ಸೋತರೂ ನನ್ನ ದೃಷ್ಟಿಯಲ್ಲಿ ಮಹಾಪುರುಷರಾಗುತ್ತಾರೆ."

"ಇದು ಮಿತ್ರನ ಬಗ್ಗೆ ಇರುವ ಮಮತೆಯಿಂದ ವಾದ ಮಾಡುತ್ತಿರುವಿಯಷ್ಟೆ!"

"ಇದು ಬರೀ ವಾದವಲ್ಲ, ನನ್ನ ಪ್ರಾಮಾಣಿಕ ವಿಚಾರವಿದು. ಮಹಾಪುರುಷರು ಹುಟ್ಟಿ ಬಾನೆತ್ತರಕ್ಕೆ ಬೆಳೆದ ದೇಶದಲ್ಲಿ ಉಳಿದವರು ತಮ್ಮ ಸಾಧ್ಯವಿದ್ದ ಎತ್ತರ ಪಡೆಯದೇ ಕುಬ್ಜರಾಗಿ ಬಿಡುತ್ತಾರೆ. ಮಹಾಪುರುಷರ ಎತ್ತರದತ್ತ ಕಣ್ಣು ಚಾಚಿ ತಾವೂ ಹಾಗೆ ಆಗಬೇಕೆಂದೂ ಶಕ್ಯವಾಗದೇ ಆಗಿರುವಂತೆ ಭ್ರಮಿಸಿ ತಮ್ಮನ್ನು ತಾವು ವಂಚಿಸುತ್ತಾರೆ. ಲೋಕವನ್ನು ಆಚರಿಸುತ್ತಾರೆ. ಅವರ ಜನ್ಮೋತ್ಸವಗಳನ್ನು ಆಚರಿಸುತ್ತಾರೆ. ಅವರ ಹೆಸರಿನಲ್ಲಿ ಮಂದಿರಗಳನ್ನು ನಿರ್ಮಿಸುತ್ತಾರೆ. ತಾವು ಮಾತ್ರ ಸ್ವಂತ ಚಾರಿತ್ರ್ಯದ ನಿರ್ಮಿತಿಗಾಗಿ ಯತ್ನಿಸದೇ ಸ್ವಾರ್ಥದ ಬೂಟಾಟಿಕೆಯ ಬೊಂಬೆಗಳಾಗುತ್ತಾರೆ. ಈಗ ಈ ರಾಜ್ಯದ ಸ್ಥಿತಿ ಹೀಗಾಗಿದೆ ಎಂದು ನನ್ನ ಅನಿಸಿಕೆ."

"ನೀನು ಅಂದುದು ನಿಜವೆಂದು ನನಗೂ ಅನಿಸಹತ್ತಿದೆ. ಇನ್ನಾದರೂ ಈ ಸ್ಮಾರಕ ಭವನದಿಂದ ಸ್ಫೂರ್ತಿ ಪಡೆದು ಹೊಸ ಪೀಳಿಗೆಯ ಜನರು ಹೊಸ ನೋಟ ಪಡೆದು ಮುಂದೆ ಸಾಗುವರೆಂದು ಹಾರೈಸೋಣ."

ಅಗ್ನಿವರ್ಣನ ಅರಮನೆಯಲ್ಲಿ ಹರ್ಷದಿಂದ ತೇಲುತ್ತಿರುವ ಜೀವನವು ಕಾಣಲಿಕ್ಕೆ ಸರಾಗವಾಗಿ ಸಾಗಿದೆ. ಆದರೆ ಅವನಿಗಾಗಲಿ ಅವನ ಇಬ್ಬರೂ ಅರಸಿಯರಿಗಾಗಲಿ ಮಾನಸಿಕ ಶಾಂತಿಯಿಲ್ಲ. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ ಎನ್ನುವಂತೆ ಸಂತಾನದಿಂದ ವಂಚಿತರಾಗಿದ್ದರು. ನಂದಿನಿ ನುಡಿದ ಕೊರವಂಜಿ ತರದ ಕಣಿಯಲ್ಲಿ ಅವರಿಗೆ ನಂಬಿಕೆ ಹೊರಟು ಹೋದಂತಾಗಿತ್ತು. ಮಗನ ಆರೋಗ್ಯವು ಅಷ್ಟು ಚನ್ನಾಗಿಲ್ಲ ಎಂದು ತಿಳಿದು ಅವಳ ಚಿಂತೆ ಹೆಚ್ಚುತ್ತಿತ್ತು. ತಾಯಿಯು ಹತ್ತಿರ ಬಂದಾಗಲೆಲ್ಲ ತನಗೆ ಯಾಕೋ ನಿತ್ರಾಣವಾದಂತೆ ಅನಿಸುತ್ತಿದೆ, ಆಗಾಗ ಮೈ ಬಿಸಿಯಾಗುತ್ತದೆ; ಕೆಮ್ಮು ಬಂದು ಬಳಲಿಸುತ್ತದೆ, ಮುದುಡಿಕೊಂಡು ಮಲಗಿಬಿಡುವಂತಾಗುತ್ತದೆ ಎಂದು ಹೇಳುತ್ತಿದ್ದನು. ರಾಜವೈದ್ಯರು ದಿನಾಲೂ ಬಂದು ನೋಡಿ ಅವನಿಗೆ ಔಷಧ ಕೊಡುತ್ತಿದ್ದರು. ಪಥ್ಯವನ್ನೂ ತಿಳಿಸುತ್ತಿದ್ದರು. ಅದರಿಂದ ಕೆಲವು ದಿನ ಏನೂ ಆಗದವರಂತೆ ಅವನು ಮೊದಲಿನ ಉತ್ಸಾಹದಲ್ಲಿರುತ್ತಿದ್ದನು. ತನ್ನ ಸಂಗೀತ—ನೃತ್ಯಗಳಲ್ಲಿ ರಮಾರಮಣನಾಗುತ್ತಿದ್ದನು. ಆಗಾಗ ತನ್ನ ರಾಣಿಯರ ಮಂದಿರಗಳಿಗೆ ಹೋಗಿ ರಾತ್ರಿಯಲ್ಲ ತನ್ನ ಸರ್ವಸುಖವನ್ನು ತಾನು ಪಡೆದು ಅವರಿಗೆ ನೀಡಿ ಬರುತ್ತಿದ್ದನು. ಆದರೆ ಅದಾದ ಒಂದೆರಡು ದಿನಗಳಲ್ಲಿ ಮತ್ತೆ ನಿಶ್ಶಕ್ತಿ ತಲೆದೋರಿ ತಾನು ಹೂಡಿದ ಬೀಡಾರವನ್ನು ಕಿತ್ತುಕೊಂಡು ಹೋಗಿಲ್ಲ ಎಂದು ಡಂಗುರ ಹೊಡೆಯುತ್ತಿತ್ತು. ಇದು ಅರಮನೆಯಲ್ಲಿ ಅರಸಿಯರಿಗಲ್ಲ ಎಲ್ಲ ಪರಿವಾರದವರಿಗೆ ತಿಳಿಯುವಂತಾಯಿತು.

ಸ್ಮಾರಕ ಭವನದಲ್ಲಿಯೇ ರಾಜಪುರೋಹಿತರು ಪ್ರತಿ ಸಂಜೆ ವೇದವೇದಾಂತಗಳ ಪ್ರವಚನ

ಮಾಡುತ್ತಿದ್ದರು. ನಂದಿನಿದೇವಿ, ಧಾರಿಣಿ ತಪ್ಪದೇ ಪ್ರವಚನ ಕೇಳುತ್ತಿದ್ದರು. ಅಗ್ನಿವರ್ಣನು ಆಗಾಗ ಬಂದು ಪ್ರವಚನಗಳನ್ನು ಕೇಳುತ್ತಿದ್ದನು. 'ಇದೆಲ್ಲವೂ ಬ್ರಹ್ಮ' ಎಂಬ ಬಗೆಯ ಮಾತು ಮನಗಳನ್ನು ಮೀರಿದ ಅನುಭವ ಹಿಡಿಸಲಿಲ್ಲ. "ಆನಂದದಿಂದ ಈ ಎಲ್ಲ ಭೂತಗಳು ಜಾತವಾಗಿವೆ, ಅದರಿಂದಲೇ ಜೀವಿಸುತ್ತವೆ, ಅದರಲ್ಲಿಯೇ ಸೇರಿಕೊಳ್ಳುತ್ತವೆ, ಈ ಆಕಾಶದಲ್ಲಿ ಆನಂದವಿರದಿದ್ದರೆ ಯಾರು ಉಸಿರಾಡು-ತ್ತಿದ್ದರು?" ಎಂಬ ಉಪನಿಷದ್‌ವಾಣಿ ಮಾತ್ರ ಅವನ ಜೀವನ ಶಕ್ತಿಗೆ ಉತ್ತರವಾದ್ದರಿಂದ ಸ್ಫೂರ್ತಿದಾಯಕವಾಗಿತ್ತು. ಈ ಆನಂದವೆಂದರೆ ತಾನು ತಿಳಿದ, ಕಂಡುಂಡ ಸರ್ವಸುಖ ತಾನೇ ಎಂದವನು ತನ್ನಷ್ಟಕ್ಕೆ ಹೇಳಿಕೊಳ್ಳುತ್ತಿದ್ದನು. ರಾಜಗುರುಗಳೊಂದಿಗೆ ಚರ್ಚಿಸುತ್ತಿದ್ದನು. ಅನಾರೋಗ್ಯದಿಂದ ಅವನ ಹಿಗ್ಗಿನ ಒರತೆಗಳು ಮೊದಲಿನಷ್ಟು ಒಳಗಿನ ಒತ್ತರದಿಂದ ಚಿಮ್ಮುತ್ತಿರಲಿಲ್ಲ. ಯಾವುದೋ ಹುಳವು ಕಾಣದಂತೆ ಅವನ ಒಳ ಹೊಕ್ಕು ಕೆಲ ಕಾಲ ಸುಮ್ಮನಿದ್ದಂತೆ ಮಾಡಿ ಆಗಾಗ ಸಣ್ಣಗೆ ಕೊರೆಯುತ್ತಿದೆ, ತನ್ನ ಕಸುವನ್ನೆಲ್ಲ ಜಿನುಗಾಗಿ ಹೀರುತ್ತಿದೆ ಎಂದವನಿಗೆ ಅನಿಸುತ್ತಿತ್ತು. ಮದ್ಯ ಮಾಂಸಗಳ ಸೇವನೆಯಿಂದಲೂ ಸುಗ್ರಾಸ ಭೋಜನದಿಂದಲೂ ಅದರ ದಾಳಿಯನ್ನು ತಡೆಯಬೇಕೆಂದು ಅವನು ಹೆಣಗುತ್ತಿದ್ದನು. ರಾಜವೈದ್ಯರಂತೂ ಎಲ್ಲ ತರದ ಶಕ್ತಿದಾಯಕವಾದ ಭಸ್ಮಗಳನ್ನೂ ಲೇಹ್ಯಗಳನ್ನೂ ಯೋಗ್ಯ ಪ್ರಮಾಣದಲ್ಲಿ ಕೊಡುತ್ತಿದ್ದರು. ಧಾರಿಣಿ ಕಾಮಿನಿಯರು ಮತ್ತು ಸಕಲ ಪರಿವಾರದವರೂ ಅವನ ಆರೈಕೆಯಲ್ಲಿ ಯಾವುದೂ ಕಡಿಮೆಯಾಗದಂತೆ ನೋಡಿಕೊಳ್ಳುತ್ತಿದ್ದರು. ಬದಲಾವಣೆಗೆಂದು ಗುಟ್ಟಾಗಿ ಕ್ರೀಡಾಶೈಲದ ನಿವಾಸಕ್ಕೆ ಕಳಿಸಿ ಕೊಟ್ಟರು. ಅವನ ಜೋಡಾಗಿ ಇಬ್ಬರು ಮಹಾರಾಣಿಯರು ವೈದ್ಯರು ಪರಿಮಿತ ಜನರು, ಅವಶ್ಯಕವಾದ

ಪದಾರ್ಥ, ವೀಣೆ, ಮೃದಂಗ ವಾದ್ಯ ಪರಿಕರಗಳು ಇದ್ದವು. ಅವನಿಗೆ ಜೊತೆಗಾರನಾಗಿ ಕುಶಾಗ್ರ ಹೋದನು.

ಕ್ರೀಡಾಶೈಲದ ನಿವಾಸದಲ್ಲಿ ಪರಿಶುದ್ಧ ಹವೆಯ ಸೇವನೆಯಿಂದಲೂ ಔಷಧ ಪಥ್ಯಗಳ ನಿಯಮಿತ ಉಪಯೋಗದಿಂದಲೂ ಕೆಲವು ದಿನಗಳಲ್ಲಿಯೆ ಅಗ್ನಿವರ್ಣನ ಕಾಯಿಲೆಯಲ್ಲ ಓಡಿ ಹೋದಂತಾಗಿ ಆರೋಗ್ಯವು ಉತ್ತಮಗೊಂಡಿತು. ಇದರಿಂದ ಎಲ್ಲರೂ ಸಂತೋಷಭರಿತರಾದರು.

"ಅಗ್ನಿವರ್ಣನು ಹಿಂದೆ ಬಂದಾಗಿನಂತೆ ಕ್ರೀಡಾ ಪರ್ವತದ ಎಲ್ಲ ಏರು ತಗ್ಗುಗಳಲ್ಲಿ ರಾಣಿಯರೊಂದಿಗೆ ಬೆಳಗು-ಬೈಗುಗಳಲ್ಲಿ ಸಂಚರಿಸಹತ್ತಿದನು. ಕುಶಾಗ್ರನೂ ಜೊತೆಗೂಡಿದ್ದನು. ಮಧ್ಯಾಹ್ನ ಮತ್ತು ರಾತ್ರಿ ತನ್ನ ವೀಣೆಯನ್ನು ನುಡಿಸುತ್ತ ಆಗಲಿ, ಮೃದಂಗವನ್ನು ಬಾರಿಸುತ್ತ ಆಗಲಿ ತನಗೂ ತನ್ನವರಿಗೂ ಗಾನ ಸುಖವನ್ನೂ ಒದಗಿಸುತ್ತಿದ್ದನು. ಕೆಲವು ದಿವಸಗಳಾದ ಮೇಲೆ ಬೇರೆ ಔಷಧ-ಪಥ್ಯಗಳು ನಡೆದಿದ್ದರೂ ಇನ್ನೇಕೆ ಹಾಸಿಗೆ ಪಥ್ಯವೆಂದು ಸರದಿ ಸರದಿಯಾಗಿ ರಾಣಿಯರ ಸಂಗ ಸುಖಕ್ಕೆ ಹಾತೊರೆದನು. ಅವರೂ ಅದನ್ನು ನಿರಾಕರಿಸಲಿಲ್ಲ. ಆದರೆ ಒಂದು ದಿನ ಸಂಜೆ ಸುತ್ತಾಟವನ್ನು ಮುಗಿಸಿಕೊಂಡು ಅವನು ತಿರುಗಿ ಬರುವಷ್ಟರಲ್ಲಿಯೇ ಉಸಿರಾಟ ಕಷ್ಟವಾಯಿತು. ಆಯಾಸ ಹೆಚ್ಚಾಯಿತು. ಕೂಡಲೇ ಕುಶಾಗ್ರ, ರಾಣಿಯರು ಅವನನ್ನು ಮೆಲ್ಲನೆ ಕೈ ಹಿಡಿದು ಕರಕೊಂಡು ಬಂದು ಅವನ ಮಂದಿರದಲ್ಲಿ ಮಂಚದ ಮೇಲೆ ಮಲಗಿಸಿದರು. ರಾಜವೈದ್ಯರು ಬಂದು ಪರೀಕ್ಷಿಸಿದರು. ಯಾರಿಗೂ ಏನೂ ಹೇಳದೆ ತಮ್ಮ ಕೋಣೆಗೆ ಹೋಗಿ ಬೇರೆ ಔಷಧಿಗಳನ್ನು ತಂದು ಉಪಚಾರವನ್ನು ಪ್ರಾರಂಭಿಸಿದರು.ಕೆಲವು ದಿನ ಕಟ್ಟುನಿಟ್ಟಾದ ಊಟ-ಉಪಚಾರಗಳು ಎಲ್ಲರ ಕಣ್ಣರಿಕೆಯಲ್ಲಿ ನಡೆಯಲು ಅಗ್ನಿವರ್ಣನ ಮೈಯಲ್ಲಿ ಶಕ್ತಿ-ಉತ್ಸಾಹಗಳು ಉಕ್ಕಿದಂತಾಯಿತು.

"ಇನ್ನು ನಾನು ಸಂಜೆ ಹೊತ್ತಾದರೂ ಸ್ವಲ್ಪ ಹೊರಗಡೆಗೆ ಹೋಗಿಬರಬಹುದೆ?" ಎಂದು ವೈದ್ಯರನ್ನು ಕೇಳಿದನು.

"ಬೇಸರವಾಗಿದ್ದರೆ ನಾಲ್ಕು ಹೆಜ್ಜೆ ಜೊತೆಯೊಡನೆ ಹೋಗಬಹುದು" ಎಂದು ಅವರು ಅನುಮತಿಸಿದರು. ಕುಶಾಗ್ರನ ಕೈ ಹಿಡಿದುಕೊಂಡು ಮೆಲ್ಲಮೆಲ್ಲನೆ ಅಗ್ನಿವರ್ಣನು ನಿವಾಸದಿಂದ ಹೊರ ಹೊರಟನು. ಆ ಈ ಮಾತನಾಡುತ್ತ ಕೆಳಗಿಳಿಯುತ್ತಿರುವ ಸಂಜೆಯ ಸೂರ್ಯನನ್ನು ನೋಡಿ ಅಗ್ನಿವರ್ಣನೆಂದನು: "ಕುಶಾಗ್ರ, ನನ್ನ ಜೀವನ ಸಾರ್ಥಕವಾಯಿತು. ಈಗ ನನ್ನ ಸರ್ವಸುಖ ನನಗೆ ದೊರೆಯಿತು. ಈ ಹೊಂಬಿಸಿಲು ಹೀಗೆ ಕಡೆತನಕ ಇರಲಿ, ಕಣ್ಣು ಈ ಹೊಂಗಳೆಯ ಹಬ್ಬವನ್ನು ನೋಡುತ್ತಲೆ ಇರಲಿ. ಹೋಗು, ನನ್ನ ವೀಣೆಯನ್ನು ತಗೊಂಡು ಬಾ. ರಾಣಿಯರನ್ನು ಕರೆ. ನಾನು ಹಾಡುತ್ತ ಬಾರಿಸುತ್ತ ಹೀಗೆ ಕೂತು ಬಿಡುವೆ. ಸೂರ್ಯನಿಗೆ ಸಾವಿಲ್ಲ, ಅವನ ವಂಶದವನಾದ ನನಗೂ ಸಾವಿಲ್ಲ."

"ಮಿತ್ರಾ ಸ್ವಲ್ಪ ಮೆತ್ತಗೆ ಮಾತನಾಡು ನಿನಗೆ ದಣಿವಾದೀತು" ಎಂದು ಕುಶಾಗ್ರ ಹತ್ತಿರ ಹೋಗಿ ಬೆನ್ನ ಮೇಲೆ ಕೈಯಾಡಿಸುತ್ತ ಹೇಳಿದನು.

ಅಗ್ನಿವರ್ಣನಿಗೆ ಈಗ ಸ್ವಲ್ಪ ಆಯಾಸವಾಗಿ ಉಸಿರು ಕಷ್ಟವಾಯಿತು. ಆದ್ದರಿಂದ ಕುಶಾಗ್ರನ ಬೆನ್ನಮೇಲೊರಗಿ ಮುಳುಗುತ್ತಿರುವ ಸೂರ್ಯನನ್ನು ನೋಡುತ್ತ ಕುಳಿತನು. ಸೂರ್ಯ ಮುಳುಗಿದನು, ಹೊಂಬಿಸಿಲು ಇನ್ನು ಇಳಿದಿತ್ತು.

"ನಡೆ ಹೋಗೋಣ, ಕತ್ತಲೆಯಾಗುವವರೊಳಗೆ" ಕುಶಾಗ್ರ ಅಂದನು.

"ಇರು, ಇರು. ನಾನು ಈ ಅಮೃತವನ್ನು ಪೂರ ಕುಡಿದು ಬಿಡುವೆ. ಈ ಸೌಂದರ್ಯ, ಈ ಸುಖ ಇದೇ ಜಗತ್ತಿನ ಪರಮ ಸತ್ಯ."

"ಆದರೆ ಇದು ಕೊನೆ ಬಾಳುವಂಥದಲ್ಲ, ನೋಡು, ಈ ಹೊಂಬಿಸಿಲೂ ಹೊರಟಿತು. ಸೂರ್ಯನ ಬೆನ್ನ ಹಿಂದೆ."

"ಹೋಗಿಲ್ಲ. ನನ್ನೊಳಗೆ ಹೊಕ್ಕುಬಿಟ್ಟಿತು. ನಾನದನ್ನು ಸವಿದು ಅಮರನಾದೆ."

"ಹೀಗೋ? ಒಳ್ಳೆಯದಾಯಿತು. ಇನ್ನೇಕೆ ಸಾವಿನ ಚಿಂತೆ? ನಡೆಯಿನ್ನು."

"ಆಗಲಿ" ಎಂದು ಅವನು ಕುಶಾಗ್ರನ ಆಧಾರದಿಂದ ಏಳಲು ಪ್ರಯತ್ನ ಮಾಡಿದನು.

ಏಳುವದಾಗಲಿಲ್ಲ. "ಸ್ವಲ್ಪ ತಡೆ" ಎಂದು ಹಾಗೆ ಕೂತುಕೊಂಡನು. ಆ ಮಾಯಾಲೋಕದ ಭ್ರಾಮಕದಿಂದ ಈಗ ವಾಸ್ತವ ಸ್ಥಿತಿಯ ಅರಿವಿಗೆ ಬಂದನು. ಕುಶಾಗ್ರನ ಬೆನ್ನ ಮೇಲೆ ಒರಗಿಯೇ ನುಡಿದನು. "ಮಿತ್ರಾ ಎಷ್ಟಾದರೂ ತೃಪ್ತಿಯಾಗಲಿಲ್ಲ, ಶಾಂತಿ ದೊರೆಯಲಿಲ್ಲ. ನೆಲದ ಮೇಲಿನ ಈ ಸುಧೆಯನ್ನು ಕುಡಿದಂತೆ ಇನ್ನಿಷ್ಟು ಬಾಯಾರಿಕೆ, ಇನ್ನಿಷ್ಟು ದಾಹ."

"ಅದಕ್ಕೆ ನನ್ನಂತೆ ಇರಬೇಕು. ಕುಡಿಯುವುದಕ್ಕೆ ಹೋಗಬಾರದು!"

"ಅದು ಹೇಗೆ ಸಾಧ್ಯ ಕುಶಾಗ್ರ? ಮೋಹ, ದಾಹ, ಇದೇ ಜೀವನ ಪ್ರವಾಹ!"

"ಚೆನ್ನಾಗಿದೆ ನಿನ್ನ ಸ್ವಾನುಭವದ ಸೂತ್ರ. ನಾನೂ ನನ್ನ ರೀತಿಯಲ್ಲಿ ಅದನ್ನು ಅನುಭವಿಸಿದ್ದೇನೆ ಅನ್ನು. ಆದರೆ ಆ ಮೋಹ ಈ ಮೋಹ ಬಿಟ್ಟಾಗಲೇ ನಿಜವಾದ ಸುಖ ಸಿಗುವುದೆಂಬುದನ್ನು ಅರಿತಿದ್ದೇನೆ, ಕೇಳು ಕವಿ ಮುಕ್ತಕ:

ಮೋಹವೆಂಬುದೆನಿತು ಬೆಟ್ಟಿತು
ಎಂದು ಅದನು ಜೀವ ಬಿಟ್ಟಿತು.

ಅಂದೆ ತನ್ನ ನೆಲೆಯು ಮುಟ್ಟಿತು.
ಅಂದೆ ನಲಿವು ಕಡಲ ತಟ್ಟಿತು."

"ಚೆನ್ನಾಗಿದೆ ನಿನ್ನ ಈ ಮುಕ್ತಕ. ಆದರೆ ಉಬ್ಬಬೇಡ ನೀನೂ ಒಮ್ಮೆ ನನ್ನಂತೆ ಆಗ ಬಹುದು, ಜಾರಬಹುದು."

"ಅದಕ್ಕೇಕೆ ಯೋಚನೆ? ಜಾರುವುದಾದರೆ ಜಾರಬೇಕು. ಕೂತಿರುವುದೇ ಜಾರು ಬಂಡೆಯು ಮೇಲೆ ಎಂದಿರುವಾಗ."

"ಹಾಗಲ್ಲ. ಅದರ ಪರಿಣಾಮ ನನ್ನ ನೋಡಿ ತಿಳಿದುಕೋ. ನನ್ನದೇ ಆದ ಹೊಸ ಪರಂಪರೆ, ಹೊಸ ಬಾಳಿನ ನಾಂದಿ ಅನ್ನುತ್ತ ನಾನು ಸರ್ವ ಸುಖದ ಬೆನ್ನು ಹತ್ತಿದೆ ನಿಜ; ನನ್ನ ಸಂಗೀತ ಸಮಾಧಿಯಲ್ಲಿ, ಈ ಸೃಷ್ಟಿ ಸೌಂದರ್ಯದ ಸೇವನೆಯಲ್ಲಿ ಅದನ್ನು ನಾನು ತುಸುವಾದರೂ ಪಡೆದಿದ್ದೇನೆ—ಕಿವಿದಣಿ, ಕಣ್ದಣಿ, ಮನದಣಿ ಯಾಗಿ. ಆದರೆ ಅದು ನನ್ನ ಸೆಳೆದುಕೊಂಡು ಹೋಯಿತು! ದೂರ ದೂರ ಹೋಯಿತು... ಕರೆಯುವ ಕಾಮದ ಕಣ್ಣುಗಳಿಂದ, ಮುಡಿ ಯುವ ಹೂಗಳ ಕಂಪಿನಿಂದ ಬಳ್ಳು ಬಳಕಿನ ಮೈಯಿಂದ ಈ ಹೆಣ್ಣು ಎಂಬ ಮಾಯೆ ತಬ್ಬಿ ಕೊಂಡು ಬಂತು...ನನ್ನ ಸರ್ವಸುಖದ ಸಮಗ್ರ ಸಂಕೇತವಾಗಿ...ಕೊನೆಗೆ ನನ್ನ ಸತ್ವವನ್ನೆಲ್ಲ ಹೀರಿ ಕೊಂಡು ಬಿಟ್ಟಿತು..."

"ಕುಶಾಗ್ರ ಕೊನೆಗೆ ಏನಾಯಿತು? ಈ ಸರ್ವ ಸುಖದ ಅರಸುವಿಕೆಯಲ್ಲಿ ನಾನು ಸಂತಸ ವನ್ನೂ ಪಡೆಯಲಿಲ್ಲ ಸಂತಾನವನ್ನೂ ಪಡೆಯ ಲಿಲ್ಲ. ಅದೆಷ್ಟೋ ಹೆಣ್ಣುಗಳ ಸಂಗದಲ್ಲಿ ನನ್ನ ಬಾಳುವೆಯನ್ನು ಹಾಳು ಮಾಡಿಕೊಂಡೆ, ನಿನಗೆ ಗೊತ್ತೆ? ಈ ಇಬ್ಬರು ರಾಣಿಯರು ಮೋಹನಾಂಗಿ ಮುಂತಾಗಿ ಕೆಳದಿಯರು, ದಾಸಿ ಯರು, ಮತ್ತೆ ಕಾಡಿನಲ್ಲಿಯ ಬೇಡತಿಯರು..."

"ಹಾ...ಬೇಡತಿಯರೆ?"

"ಯಾಕೆ? ನಿನಗೆ ಅಚ್ಚರಿಯೇ? ಕಪ್ಪಿದ್ದರೂ ಕಾಡಿದ್ದರೂ ಅವರೆಷ್ಟು ಸುಖ ಕೊಟ್ಟರು ನೀನ ರಿಯೆ. ಸುಖಕ್ಕೂ, ಮುಖಕ್ಕೂ ಸಂಬಂಧವಿಲ್ಲ. ನೋಡು, ನಾನು ಯಾರನ್ನೂ ಬಿಡಲಿಲ್ಲ—ರಾಜ್ಯ ಲಕ್ಷ್ಮಿಯೊಬ್ಬಳನ್ನು ಬಿಟ್ಟು! ಮೂಳೆಯು ಮನೆಗೆ ಹೊದಿಸಿದ ತೊಗಲಿನ ಉಸಿರಾಡುವ ಬೊಂಬೆಯಾಗದೆ ಈ ನನ್ನ ಸರ್ವಸುಖದ ಸಂಕೇತವಾದ ಹೆಣ್ಣು ಒಂದು ಸುಂದರ ಹೂವಿ ನಂತಿದ್ದರೆ ನಾನು ಹೀಗಾಗುತ್ತಿರಲಿಲ್ಲ. ನಿತ್ಯ ವಾಗಿ ಸಿಗುವ ಸರ್ವಸುಖ ನನಗೆ ಬೇಕು. ಅದರ ಶೋಧ ಮಾಡುತ್ತ ಹೊರಟೆ. ಅದು ಹತ್ತಿರ ಬರುತ್ತಲೇ ಹಿಂಡಿ ಹಿಪ್ಪೆ ಮಾಡಿತು... ನನ್ನ ಕಣ್ಣೊಳಗಿನ ಕಾಂತಿಯನ್ನು ಕಸಿದುಕೊಂ ಡಿತು, ಮನದೊಳಗಿನ ಶಾಂತಿಯನ್ನು ಯಾವಾಗ ಹೊರದೂಡಿತು. ಇನ್ನು ಉಳಿದಿರುವ ಪ್ರಾಣದ ಪಣತಿಯನ್ನು ಯಾವಾಗ..."

ಕುಶಾಗ್ರನು ಮುಂದಿನದನ್ನು ಆಡದಂತೆ ಅವನ ಬಾಯಿಯ ಮೇಲೆ ಕೈಯಿಟ್ಟು ಮೆಲ್ಲಗೆ ಎಬ್ಬಿಸಿ, ಕೈಗೊಟ್ಟು ನಿವಾಸಕ್ಕೆ ಕರೆದೊಯ್ದು ಮಂಚದ ಮೇಲೆ ಮಲಗಿಸಿದನು. ಆಗ ರಾಣಿಯ ರೊಡನೆ ಮಾತನಾಡುವಷ್ಟು ತ್ರಾಣವಿರಲಿಲ್ಲ. ಕೂಡಲೇ ವೈದ್ಯರು ಬಂದು ಪರೀಕ್ಷಿಸಿ ಔಷ ಧೋಪಚಾರ ಪ್ರಾರಂಭಿಸಿದರು. ವಿಶ್ರಾಂತಿ ಅವಶ್ಯವೆಂದರು. ಒಂದೆರಡು ದಿನಗಳಲ್ಲಿ ಅವನು ಚೇತರಿಸಿಕೊಂಡನು. ಆದರೆ ಕಾಣದೆ ಕುಳಿತ ಹಗೆಯಾಗಿ ಬೇನೆ ತಿಳಿಯದಂತೆ ಬಲಿಯುತ್ತಿತ್ತು.

ಸ್ವಲ್ಪ ಮಟ್ಟಿಗೆ ಓಡಾಡುವಂತಾದ ಮೇಲೆ ಕ್ರೀಡಾಶೈಲದಲ್ಲಿ ಚಳಿ ಹೆಚ್ಚಾಗಿ ತೊಂದರೆಯು ಆಗಬಹುದೆಂದು ಅವನನ್ನು ಜೋಪಾನವಾಗಿ ರಾಜಧಾನಿಗೆ ಕರೆದುಕೊಂಡು ಹೋದರು.

ಧಾರಿಣಿ ಮತ್ತೆ ತಾಯಿಯಾಗುವ ನಿರೀಕ್ಷೆ ಯಲ್ಲಿರುವಳು ಎಂಬ ಸುದ್ದಿ ಅರಮನೆಯಲ್ಲಿ ಹಬ್ಬಿತು. ಧಾರಿಣಿ ಮೊದಲು ಅತ್ತೆಯವರ ಬಳಿ ಹೋಗಿ ಆಶೀರ್ವಾದ ಕೋರಿದಳು. ನಂದಿನಿ ತುಂಬು ಮನದಿಂದ ಹರಿಸಿದಳು.

"ಅಗ್ನಿಗೆ ಈ ವಿಷಯ ಗೊತ್ತಾಯಿತೆ?" ನಂದಿನಿ ಕೇಳಿದಳು.

"ಗೊತ್ತಾಯಿತು. ಚೇಟಿ ಹೋಗಿ ಹೇಳಿ ದಳು."

"ಏನೆಂದನು?"

"ಮಲಗಿದ ದೊರೆ ಸ್ವಲ್ಪ ಶ್ರಮದಿಂದ ಎದ್ದು ಕುಳಿತು ನಕ್ಕನಂತೆ. 'ಸಂತೋಷವಾಯಿತೆಂದು ಹೇಳು' ಅಂದನಂತೆ. 'ಇನ್ನು ನನಗೇನಾದರೂ

ಸರಿ' ಅಂದನಂತೆ."

"ಅಲ್ಲ ಅತ್ತೆಯವರೇ, ಇದೇನು ನಮಗೆ ಸಮಾಧಾನ ನೀಡುವ ವಿಷಯವೆ? ಅವರೂ ಇರಬೇಕು. ಮಗನು ಹುಟ್ಟಿ ಬರಬೇಕು ಇದು ನನ್ನ ಮನದಾಸೆ."

ಧಾರಿಣಿಯು ಗರ್ಭಸ್ಥ ಶಿಶು ಯಾವ ತೊಂದರೆಯಿಲ್ಲದೆ ಬೆಳೆಯುತ್ತ ಹೋದಂತೆ ಅಗ್ನಿವರ್ಣನ ಆರೋಗ್ಯವು ಆರುತ್ತಿರುವ ಅಗ್ನಿಯಂತೆ ಇಳಿಯುತ್ತ ಹೋಯಿತು. ಇಂದಿಲ್ಲ ನಾಳೆ ತನ್ನ ಸಾವು ಸನ್ನಿಹಿತವೆಂಬುದನ್ನು ಮನಗಂಡಿದ್ದನು. ಆದರೆ ಈಗವನು ಭಯಚಕಿತನಾಗಿರಲಿಲ್ಲ. ಮಲಗಿದಲ್ಲಿಯೇ ಅರಮನೆಯ ನರ್ತಕಿಯಾದ ಮೋಹನಾಂಗಿ ನೃತ್ಯ ನರ್ತಕಿಯರ ಮೇಳ ನೃತ್ಯ ಮತ್ತು ವಾದ್ಯವೃಂದ ನೋಡುತ್ತ ಕೇಳುತ್ತ ಏನೂ ಆಗದವನಂತೆ ಕಾಲ ಕಳೆಯುತ್ತಿದ್ದನು.

ಒಂದೊಂದು ಸಲ ಮೈ ಎಷ್ಟು ಬೇನೆಯಿಂದ ಬಳಲಿ ಹಣ್ಣಾದರೂ ಮನುಷ್ಯನ ಮನಸ್ಸು ತನ್ನ ಸಂಕಲ್ಪ ಬಲದಿಂದ ಅಸಾಧ್ಯವೆನ್ನಬಹುದಾದ ಚಟುವಟಿಕೆಗಳನ್ನು ಕೈಕೊಳ್ಳಲು ಪ್ರವೃತ್ತವಾಗುತ್ತದೆ. ಅದರಿಂದ ಮುಂದೆ ಸಂಭವಿಸಬಹುದಾದ ಅನಿಷ್ಟ ಪರಿಣಾಮಗಳನ್ನು ಅದು ಲೆಕ್ಕಿಸುವುದೇ ಇಲ್ಲ. ತಾನು ನಿರ್ಮಿಸಿದ ಸ್ಮಾರಕ ಭವನಕ್ಕೆ ಹೋಗಿ ಅಲ್ಲಿಯ ಮೂರ್ತಿಗಳನ್ನು ಚಿತ್ರಗಳನ್ನು ಇನ್ನೊಮ್ಮೆ ಕಣ್ತುಂಬ ನೋಡಿ ಅಲ್ಲಿಯೇ ಕುಳಿತುಕೊಂಡು ತಾನು ಹೊಸದಾಗಿ ಯೋಜಿಸಿದ ರೀತಿಯಲ್ಲಿ ವೀಣೆ ನುಡಿಸುತ್ತ, ಹಾಡು ಹೇಳುತ್ತ, ತಾನು ಕಂಡ ಕಾಣ್ಕೆಯನ್ನು ಅದರಲ್ಲಿ ಮೂಡಿಸುತ್ತ ಒಂದು ಬಗೆಯ ಸಮಾಧಿಯಲ್ಲಿ ತಲ್ಲೀನನಾಗಬೇಕೆಂದು ಅವನಿಗೆ ಉತ್ಕಟವಾಗಿ ಅನಿಸಿತು. ಇದನ್ನು ತಾಯಿಗೆ, ಹೆಂಡತಿಗೆ, ರಾಜ ವೈದ್ಯರಿಗೆ ಹಾಗೂ ಮಹಾಮಾತ್ಯರಿಗೆ ಹತ್ತಿರ ಕರೆದು ತಿಳಿಸಿದನು. ಇದಕ್ಕೆ ಅವರು ಸುತರಾಂ ಒಪ್ಪಲಿಲ್ಲ. ಆರೋಗ್ಯಕ್ಕೆ ಅಪಾಯ ತಪ್ಪದೆಂದು ಎಚ್ಚರಿಸಿದರು. ಅವನು ಅದರಿಂದ ಎದೆಗುಂದಲಿಲ್ಲ. "ನೀವೆಲ್ಲ ಹೇಳುವುದರ ಅರ್ಥವೇನು?, ನಾನು ಸಾಯಬಹುದೆಂದು ತಾನೇ? ಸರಿ, ಅದನ್ನು ಬರಮಾಡಿಕೊಳ್ಳಲು ನಾನೆಂದೋ ಸಿದ್ಧನಾಗಿದ್ದೇನೆ. ಅದು ಕೂಡ ನನ್ನಲ್ಲಿಯೇ ತನ್ನ ಬಿಡಾರ ಹಾಕಿದೆ. ಅದು ತನ್ನ ಕೊನೆಯ ಪೆಟ್ಟು ಹಾಕುವ ಮೊದಲು ಈ ಉಸಿರಾಡುವ ಮೈಯ ಎಲ್ಲ ಪರಿಕರಗಳಿಂದ್ಮ ನೆಲದ ಎಲ್ಲ ಸೊಗಸಾದ ಸಾರವನ್ನು ಒಮ್ಮೆ ಹೀರಿ ಬಿಡುತ್ತೇನೆ." ಎಂದು ಸಾರಿಬಿಟ್ಟನು.

ಅವರು ನಿರುಪಾಯರಾದರು. ಅವನ ಅಪೇಕ್ಷೆಯ ಮೇರೆಗೆ ಸ್ಮಾರಕ ಭವನವನ್ನು ಹಸನುಗೊಳಿಸಿ ತಳಿರು ತೋರಣಗಳಿಂದ ಅಲಂಕರಿಸಲಾಯಿತು. ರಾಮ ಸೀತೆಯರ ಪ್ರತಿಮೆಯ ಮುಂದುಗಡೆ ಒಂದು ತವಗವನ್ನು ಮಾಡಿ ಅದರ ಮೇಲೆ ರತ್ನಗಂಬಳಿಯನ್ನು ಹಾಸಿ ಒರಗುದಿಂಬುಗಳನ್ನು ಇಡಲಾಯಿತು. ಅಗ್ನಿವರ್ಣನು ಸೇವಕರ ಆಧಾರದೊಡನೆ ಏನೂ ಆಗದಂತೆ ನಗುಮೊಗದಿಂದ ಮೆಲ್ಲನೆ ಬಂದು ಮೊದಲು ಭವನದ ಎಲ್ಲೆಡೆಗಳಲ್ಲಿ ಸುಳಿದಾಡಿ ತನ್ನ ಹಿಂದಿನ ಭವ್ಯ ಪರಂಪರೆಯ ಪ್ರತೀಕಗಳನ್ನು ನೋಡುತ್ತ ಬಂದನು. ಎಲ್ಲ ನಡವೆಗಳನ್ನು ನೋಡಿಯಾದ ಮೇಲೆ ಕೊನೆಗೆ ತೆರವಾಗಿದ್ದ ನಡವೆಯ ಹತ್ತಿರ ಬಂದು ನಿಂತನು. ಆಗ ಅವನಿಗೆ ಹಿಂದೆ ಕುಶಾಗ್ರನು "ಇದು ನಿನಗಾಗಿ ಮೀಸಲಾಗಿದೆ." ಎಂದು ಆಡಿದ ಮಾತು ನೆನಪಾಯಿತು. ಕೆಲ ಹೊತ್ತು ಅವನು ಕಣ್ಣು ಮುಚ್ಚಿ ನಿಂತನು. ಕಣ್ಣು ತೆರೆಯುತ್ತಲೇ ತೂಬು ತೆರೆದಂತೆ ಕಂಬನಿಗಳು ಕೆಳಗುರುಳಿದವು.

"ಎಂಥ ಉನ್ನತ ಶಿಖರಗಳ ಹಿನ್ನೆಲೆಯಲ್ಲಿ ಹುಟ್ಟಿ ಎಂಥ ಕಿರುಬೆಟ್ಟವಾದೆ ನಾನು!" ಎಂದು ತನ್ನಷ್ಟಕ್ಕೇ ಅಂದುಕೊಂಡು ನೊಂದನು. "ನಾನು ಹೀಗಾದ್ದರಿಂದಲೇ ನನ್ನ ಜನವೂ ಹಾಗಾದರೇನೋ" ಎಂದು ಉದ್ಗಾರ ತೆಗೆದನು. "ಇನ್ನು ನಾನು ಹೀಗಾಗುವುದಿಲ್ಲ, ಜನರು ಹೀಗಾಗಲಾರರು" ಎಂದು ಎತ್ತರದ ದನಿಯಲ್ಲಿ ಹೇಳುತ್ತ ನಡೆದನು. ತವಗವನ್ನು ಮೆತ್ತಗೆ ಏರಿ ಕುಳಿತನು, ಎಡಬಲ ಬದಿಗಳಲ್ಲಿ ನಂದಿನಿ-ಧಾರಿಣಿಯರು ಬಂದು ಕುಳಿತುಕೊಂಡರು. ಹಿಂದೆ ರಾಜವೈದ್ಯರು ಪ್ರಸಂಗ ಬಂದರೆ ಬಳಸಲೆಂದು ಔಷಧೋಪಚಾರಗಳಿಂದ ಸನ್ನದ್ಧರಾಗಿ ಕುಳಿತುಕೊಂಡರು. ಮುಂದಿನ ಆಸನಗಳಲ್ಲಿ ಮಹಾಮಾತ್ಯ ಚತುರಾನನ ಉಳಿದ ಪ್ರಮುಖ ಅಧಿಕಾರಿಗಳು ಮತ್ತೂ ಅರಮನೆಯ ಪರಿವಾರ ಆಸೀನರಾಗಿದ್ದರು.

# ಮಗುವಿನ ಉತ್ತಮ ಪಾಲನೆಗಾಗಿ

* ನಿಮ್ಮ ಮಗು ಅಪೇಕ್ಷಿಸಿದಷ್ಟು ಕಾಲ ಎದೆ ಹಾಲು ಕುಡಿಸಿ.
* ನಿಮ್ಮ ಮಗುವಿಗೆ ನಾಲ್ಕು ತಿಂಗಳಾದ ನಂತರ ಮೆದು ಆಹಾರ ಪ್ರಾರಂಭಿಸಿ.
* ನಿಮ್ಮ ಮಗುವಿಗೆ ದಿನಕ್ಕೆ ೫-೬ ಬಾರಿ ಆಹಾರ ಕೊಡಿ.
* ನಿಮ್ಮ ಮಗುವಿಗೆ ಖಾಯಿಲೆ ಇದ್ದಾಗಲೂ ಆಹಾರ ನಿಲ್ಲಿಸ-ಬಾರದು.
* ನಿಮ್ಮ ಮಗು ಅನಾರೋಗ್ಯದಿಂದ ನರಳುತ್ತಿರುವಾಗ ಅದರಲ್ಲೂ ಅತಿಸಾರ ಭೇದಿಯಿದ್ದಾಗ ಹೆಚ್ಚು ನೀರು ಕುಡಿಸಿರಿ.
* ನಿಮ್ಮ ಮಗು ರೋಗದಿಂದ ಬಳಲುತ್ತಿದ್ದರೆ ಕೂಡಲೇ ಹತ್ತಿರ ಇರುವ ಆರೋಗ್ಯ ಕೇಂದ್ರದ ಸಹಾಯ ಪಡೆಯಿರಿ.
* ನಿಮ್ಮ ಮಗುವಿಗೆ ಸಕಾಲದಲ್ಲಿ ಅಗತ್ಯವಾದ ರೋಗನಿರೋಧಕ ಚುಚ್ಚು ಮದ್ದುಗಳನ್ನು ಹಾಕಿಸಿ.
* ನಿಮ್ಮ ಮಗುವಿನ ಆಹಾರವನ್ನು ನೊಣಗಳಿಂದ ರಕ್ಷಿಸಿ.
* ನಿಮ್ಮ ಮಗುವಿಗೆ ಉಣಿಸುವ ಮೊದಲು ನಿಮ್ಮ ಹಾಗೂ ಮಗುವಿನ ಕೈಗಳನ್ನು ಸ್ವಚ್ಛವಾಗಿರಿಸಿರಿ.

ಹೆಚ್ಚಿನ ವಿವರಗಳಿಗೆ :
ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ,
ಕರ್ನಾಟಕ ಸರಕಾರ, ಬೆಂಗಳೂರು.
ಇವರನ್ನು ಸಂಪರ್ಕಿಸಿರಿ.

"ಕರ್ನಾಟಕ ವಾರ್ತೆ"

DIP 460/85

ತವಗದ ಮುಂದುಗಡೆ ನರ್ತನಕ್ಕೆಂದು ತೆರವಾಗಿರಿಸಿದ ಒಂದು ಹರವಾದ ಜಾಗವಿತ್ತು.

ಮೊದಲು ಮಂಗಳ ವಾದ್ಯವಾಯಿತು, ವಾದ್ಯ ವೃಂದವಾಯಿತು; ಆಮೇಲೆ ಮೋಹನಾಂಗಿಯ ಮೋಹಕ ನೃತ್ಯವು ಎಂದಿಗಿಂತ ಅದ್ಭುತ ರಮ್ಯವಾಗಿ ನಡೆಯಿತು. ಅವಳ ನೃತ್ಯ ನೋಡಿ ಅಗ್ನಿವರ್ಣ ಬೆರಗು ನಿಬ್ಬೆರಗಾದನು. ಅವನಿಗೆ ರಾಜವೈದ್ಯರು ಸಾಕೆಂದು ಹೇಳಿದರು. "ಇನ್ನು ವಿಶ್ರಾಂತಿ ಪಡೆ" ಎಂದು ನಂದಿನಿ-ಧಾರಿಣಿಯರು ಚಾಲೊತ್ತರು-ಅವನು ಕೇಳಲಿಲ್ಲ. ತನ್ನ ವೀಣೆಯನ್ನು ತರಹೇಳಿದನು. ಅದರ ಶ್ರುತಿಯನ್ನು ಹೊಂದಿಸಿಕೊಂಡನು. ಮೊದಲು ಸುಮ್ಮನೆ ಸಪ್ತಸ್ವರಗಳನ್ನು ಬೆರಳಿನಿಂದ ಜಾರಿಸಿದನು. ನಾದ ತರಂಗಗಳು ಹರಡಿದವು. ಅನೇಕ ದಿನಗಳಿಂದ ಅವನು ಒಂದು ಹೊಸ ಸಂಗೀತ ಪರಿಕಲ್ಪನೆಯನ್ನು ನಿರ್ಮಿಸಿಕೊಂಡು ಸಾಧನೆ ಮಾಡುತ್ತಿದ್ದನು. ಅದರಲ್ಲಿ ಅವನ ಸಂಗೀತ ದರ್ಶನವೂ ಇತ್ತು: ಜೀವನ ದರ್ಶನವೂ ಇತ್ತು. ಅದಕ್ಕೆ ಅವನು 'ಪಂಚ ಪ್ರಪಂಚ' ಎಂಬ ಅಭಿದಾನವನ್ನು ಕೊಟ್ಟಿದ್ದನು. ಈ ವರೆಗೆ ಯಾರಿಗೂ ಹೇಳದೆ ಇದ್ದು ತನ್ನಷ್ಟಕ್ಕೆ ಸಾಧನೆ ಮಾಡುತ್ತ ಒಂದು ಪರಿಪಾಕಕ್ಕೆ ತಂದ ಯೋಜನೆಯನ್ನು ಇವೊತ್ತು ಪ್ರಕಟವಾಗಿ ಅಭಿವ್ಯಕ್ತಗೊಳಿಸಲು ಆರಂಭಿಸಿದನು, ತನ್ನ ಸೋತು ಹೋದ ಮೈಯಲ್ಲಿ ನಿತ್ರಾಣವಾದ ಬೆರಳುಗಳಿಂದ ತನ್ನ ಅಭಿವ್ಯಕ್ತಿ ಸಮರ್ಪಕವಾಗಲಾರದು ಎಂದು ಅನಿಸಿದರೂ ಪ್ರಬಲವಾದ ಅಂತಃಪ್ರೇರಣೆ ಅವನನ್ನು ಚೋದಿಸುತ್ತಿತ್ತು. ಐದೈದು ಸ್ವರಗಳಿಂದ ಭಾವ ವಿಶೇಷಗಳನ್ನು ಧ್ವನಿಸುವ ಐದು ರಾಗಗಳನ್ನು ಆರಿಸಿಕೊಂಡು ಅವನು ವೀಣೆಯಲ್ಲಿ ಒಂದೊಂದಾಗಿ ಆಲಾಪಿಸುತ್ತ ಅವನು ಅತ್ಯಂತ ತನ್ಮಯನಾಗಿ ತನ್ನ ಅಂತರಂಗ ಕಥನವನ್ನೂ ಜೀವನ ದರ್ಶನವನ್ನೂ ನಿರೂಪಿಸಲುತೊಡಗಿದನು. ಮೊದಲು ಅವನು ಸರಿಗಪಧಸ ಈ ಸ್ವರ ಸಂಚಯದ ಮೋಹನ(ಭೂಪ)ರಾಗದಲ್ಲಿ ವೀಣೆ ನುಡಿಸುತ್ತ ಹಿಂದೊಮ್ಮೆ ಸೃಷ್ಟಿಸಿದ ಮಾಧುರ್ಯವನ್ನು ಮರು ಸೃಷ್ಟಿಸಿದನು. ಧಾರಿಣಿ ಅದನ್ನು ನೆನೆದು ಮೆಚ್ಚಿಕೆಯಿಂದ ತಲೆದೂಗಿದಳು. ಈಗ ಅವನು ಅದರ ಆಲಾಪನೆಯೊಂದಿಗೆ ತನ್ನೊಂದು ಗೀತವನ್ನು ಸೇರಿಸಿ ಹಾಡಲುತೊಡಗಿದನು.

ನಾನೇ ನಾನಾಗಿಯೇ ಸುಖದ ಶೋಧಕನಾಗಿ
ಬಿಸಿಲುಗುದುರೆಯನೇರಿ ಜಲವ
ಕಾಣದೆ ಸಾಗಿ
ಬಾಯಾರಿಕೆಯು ಹೆಚ್ಚಿ ಬಸವಳಿದೆ ಬೆಂಡಾಗಿ
ನಿಜಸುಖದ ಲೇಶವನು ಪಡೆಯದಲೆ
ವಿಫಲನಾಗಿ

ಇದನ್ನು ಅವನು ಒತ್ತು ಕೊಡುವಲ್ಲಿ ಒತ್ತು ಕೊಡುತ್ತ ಇಳಿಯುವಲ್ಲಿ ಇಳಿಸುತ್ತ ಏರುವಲ್ಲಿ ಏರಿಸುತ್ತ ನಡು ನಡುವೆ ನಿಲ್ದಾಣಗಳಲ್ಲಿ ನಿಲ್ಲುತ್ತ ತನ್ನ ಅಂತರಂಗದ ಆಳದಿಂದ ಉಕ್ಕಿಬಂದ ಆವೇಶದ ಮೂರ್ತಿಯಾಗಿ ಮರಮರಳಿ ಹಾಡುತ್ತ ಹೋದರೆ ಕೇಳುವವರೆಲ್ಲ ಬೆರಗಿನ ಬೊಂಬೆಯಾದರು. ನಂದಿನಿ-ಧಾರಿಣಿಯರು ವೀಣೆಯ ಮಿಡಿತ ಮತ್ತು ಕಂಠದ ನುಡಿತ ಇವುಗಳ ಸಮ್ಮಿಳನದಿಂದ ಹೊರ ಹೊಮ್ಮುತ್ತಿರುವ ಇಂಪು ಸಂತೋಷವನ್ನು ಕೊಡುತ್ತಿದ್ದರೂ ಅವನೆಲ್ಲಿ ಆಯಾಸದಿಂದ ಕುಸಿಬೀಳುವನೋ ಎಂದು ಸಂತೋಷ, ಕಾತರ ಇವುಗಳ ಸಮ್ಮಿಶ್ರ ಸಂವೇದನೆಯನ್ನು ಮುಖದ ಮೇಲೆ ತೋರುತ್ತಿದ್ದರು. ವೈದ್ಯರಂತೂ ಸಾಕು ಇನ್ನು ಎನ್ನುವಂತೆ ಕೈಸನ್ನೆ ಮಾಡುತ್ತಿದ್ದರು. ಇದಾವುದನ್ನು ಅವನು ಗಮನಿಸಲಿಲ್ಲ.

ಮೋಹದ ರಮ್ಯ ರುದ್ರರೂಪವನ್ನು ಸಾರುವ ಮೋಹನ ರಾಗದಲ್ಲಿಯ ಗೀತೆಯಾದ ಮೇಲೆ ಅಗ್ನಿವರ್ಣನು ಪಂಚಸ್ವರ ವಿಶಿಷ್ಟವಾದ ನಾಟಿ (ತಿಲಂಗ) ಮಧ್ಯಮಾವತಿ (ಸಾರಂಗ), ಆರಭಿ (ದುರ್ಗಾ) ಈ ಮೂರು ರಾಗಗಳಲ್ಲಿ ಕ್ರಮೇಣ ಆಲಾಪನೆ ಮಾಡುತ್ತ ತನ್ನ ಸುಖದ ಶೋಧದಲ್ಲಿ ತಾನು ಪಡೆದ ರಸಾನುಭವಗಳನ್ನು ಅದರ ಅರೆಕೊರೆಗಳನ್ನೂ ತನ್ನ ಕರ್ತವ್ಯ ಚ್ಯುತಿಯಿಂದ ಉಂಟಾದ ಲೋಪದೋಷಗಳನ್ನು ಒಂದೊಂದು ಅರ್ಥಪೂರ್ಣವಾದ ಸವಿನುಡಿಯಿಂದ ಧ್ವನಿಸುತ್ತ ಹಾಡಿದನು. ಇಷ್ಟೊತ್ತಿಗೆ ತುಂಬ ಬಳಲಿಕೆಯಾಗಿ ವೀಣೆಯ ಮೇಲೆ ಒರಗಿದಂತೆ ಕುಳಿತುಕೊಳ್ಳಲು

ವೈದ್ಯರು ಬಂದು ಅವನಿಗೆ "ಇನ್ನು ಅರಮನೆಗೆ ದಯಮಾಡಿಸಿ ಮಹಾರಾಜರು ವಿಶ್ರಮಿಸಬೇಕು" ಎಂದು ಬಿನ್ನವಿಸಿದರು. ಧಾರಿಣಿ-ನಂದಿನಿಯರೂ ಚತುರಾನನೂ ಅದಕ್ಕೆ ತಮ್ಮ ಒತ್ತಾಸೆಯನ್ನು ಸೇರಿಸಿದರು. ಅವನು ಯಾವ ಉತ್ತರ ಕೊಡದೆ "ಇದೊಂದು ಕೊನೆಯ ರಾಗ, ಕೊನೆಯ ಹಾಡು" ಎಂದು ಹಾಡಹತ್ತಿದನು. ವೈದ್ಯರಿಂದ ಮಾತ್ರೆಯನ್ನು ತೆಗೆದುಕೊಂಡು ನೀರಿನೊಡನೆ ನುಂಗಿದನು. ಎಲ್ಲಿಂದಲೋ ಅವನಲ್ಲಿ ಹೊಸಶಕ್ತಿ ಚಿಮ್ಮಿ ಬಂದಂತಾಯಿತು. ಈ ವರೆಗೆ ಸಂಗೀತದಿಂದ ತನ್ನ ಅಂತರಂಗ ಕಥನವನ್ನು ನಿರೂಪಿಸಿದ್ದಾಯ್ತು. ಈಗ ಅದರ ಸಾರಭೂತವಾದ ಪರಿಪಕ್ವ ಅನುಭೂತಿಯನ್ನು ಬಣ್ಣಿಸಿ ತನ್ಮೂಲಕ ತನ್ನ ಜೀವನ ದರ್ಶನವನ್ನು ಅವನಿಗೆ ನಿವೇದಿಸಬೇಕಾಗಿತ್ತು. ಇದಕ್ಕಾಗಿ ಅವನು ಪಂಚರಾಗಗಳಲ್ಲಿ ಕೊನೆಯದಾದ ಹಿಂದೋಳ (ಮಾಲಕಂಸ)ರಾಗವನ್ನು ಎತ್ತಿಕೊಂಡು ಅದರ ಸಗಮಧನಿಸಾ ಇದರಲ್ಲಿಯ ಕೋಮಲ ಸ್ವರಗಳ ಅತ್ಯಂತ ಗಂಭೀರ ಮತ್ತು ಮಧುರ ಆಲಾಪನೆಯನ್ನು ತನ್ನ ವೀಣೆಯಲ್ಲಿ ಮೊದಲು ಮಾಡಿದನು. ಇದನ್ನು ಕೇಳುತ್ತಿದ್ದಂತೆ ಎಲ್ಲರೂ ಸುತ್ತಮುತ್ತಲಿನ ಪರಿಸರವನ್ನೇ ಮರೆ-ತರು. ವೀಣೆಯನ್ನು ನುಡಿಸುತ್ತಲೇ ಅವನು ತನ್ನ ಕೊರಲ ದನಿಯಿಂದ ವಿಲಂಬಿತದಲ್ಲಿ ಹಾಡತೊಡಗಿದನು:

ಪಂಚೇಂದ್ರಿಯಂಗಳಿಂದೀ ಪಂಚ ಪ್ರಪಂಚದಾ
ಸರ್ವಸುಖವನು ಸವಿದು ಸರ್ವಮುಖ ಜೀವನವಾ
ಈ ಸೃಷ್ಟಿಯೋ ಸಕಲದೈವತವೆನೆ ತಾನು
ಪಂಚತ್ವವನು ಹೊಂದಿ ನಿತ್ಯನಾದೆನು ನಾನು!

ಮೆಲ್ಲನೆ ಭಾವಪೂರ್ವವಾಗಿ ಹಾಡುವ ವೈಖರಿ-ಯಿಂದ, ವೀಣೆಯ ಸ್ವರಗಳಲ್ಲಿ ಹಾಗೂ ಪದಗಳಲ್ಲಿ ಶಬ್ದವನ್ನು ನಾದದಿಂದ ಮರುದನಿಗೊಡುವ ಕೌಶಲ್ಯದಿಂದ ತನ್ನ ಜೀವನ ಸಾರವನ್ನೂ ಜೀವನ ದರ್ಶನವನ್ನೂ ಅವನು ಬೇರೆಯಾಗಿ ವಿವರಣೆ ಮಾಡುವ ಅಗತ್ಯವಿಲ್ಲದಂತೆ ನಿರೂಪಿಸಿದನು. ತನಗಾಗುತ್ತಿರುವ ದಣಿವನ್ನು ಕಡೆಗಣಿಸಿ ಅವನು ದನಿಯನ್ನು ಏರಿಸುತ್ತ ಗತಿಯನ್ನು ಹೆಚ್ಚಿಸುತ್ತ ಈ ಹಾಡನ್ನು ಹಾಡುತ್ತ 'ಪಂಚತ್ವ ಹೊಂದಿ ನಿತ್ಯನಾದೆನು ನಾನು' ಈ ಕೊನೆಯ ಸಾಲನ್ನು ಹತ್ತಾರು ಸಲ ಪುನರುಚ್ಚರಿಸಿ ಬರಬರುತ್ತ ದನಿಯನ್ನು ಕುಗ್ಗಿಸಿ 'ನಿ...ತ್ಯ...ನಾದೆನು ನಾ...ನು' ಎಂಬುದಾಗಿ ಮಾರ್ದನಿಯೊಂದರ ಕೊನೆಕೊನೆಯ ಪಿಸು ನುಡಿಯಂತೆ ನುಡಿದು ವೀಣೆಯೊಂದಿಗೆ ಸ್ತಬ್ಧನಾಗಿ ಕುಳಿತನು. ತವಗದ ಮೇಲೆ ಕುಸಿದನು. ತನ್ಮಯತೆಯಿಂದ ಕೇಳುತ್ತಿದ್ದ ಎಲ್ಲರೂ ಅಲ್ಲಿಗೆ ಧಾವಿಸಿ ಬಂದರು.

"ಏನಾಯಿತು? ದೊರೆ ಏಳು, ಮಾತಾಡು," ಎಂದು ಧಾರಿಣಿ ಹಲುಬಿದಳು.

"ಏಳು ಅಗ್ನಿ, ಬೇಡವೆಂದರೂ ಕೇಳದೆ ಹಾಡಿ ದಣಿದು ಹೋದಿಯಪ್ಪ" ಎಂದು ತಾಯಿ ನಂದಿನಿ ಮೊರೆಯಿಟ್ಟಳು. ರಾಜವೈದ್ಯರು ಬಂದು ತಮ್ಮ ಆರೈಕೆಯಲ್ಲಿ ತೊಡಗಿದರು. ಎಚ್ಚರ ತಪ್ಪಿದರೂ ದೇಹದಲ್ಲಿ ಇನ್ನೂ ಉಸಿರಾಡುತ್ತಿತ್ತು. ಅವನನ್ನು ಕೂಡಲೇ ಹೂವಿನಂತೆ ಹಗುರವಾಗಿ ಎತ್ತಿಕೊಂಡು ಸೇವಕರು ಅವನ ಮಂದಿರಕ್ಕೆ ಕರೆದುಕೊಂಡು ಹೋಗಿ ಮಂಚದ ಮೇಲೆ ಮಲಗಿಸಿದರು. ವೈದ್ಯರ ಆರೈಕೆ ಮುಂದುವರಿಯಿತು. ಎಚ್ಚರು ಬರಿಸುವ ಎಲ್ಲ ಯತ್ನಗಳಾದವು. ಯಾವುದೂ ಕೈಗೂಡಲಿಲ್ಲ. ಕೊನೆಗೆ ಮುಳುಗುವ ಸೂರ್ಯನೊಡನೆ ಅವನ ವಂಶದ ಈ ದೊರೆಯ ಪಂಚಪ್ರಾಣಗಳು ಹೊರಟು ಹೋದವು!

(ಮುಗಿಯಿತು)

---

ಇತ್ತೀಚಿನವರೆಗೂ ಪ್ರಪಂಚದ ಅತಿ ದೊಡ್ಡ ಅರಮನೆಯೆಂಬ ಕೀರ್ತಿಗೆ ಪಾತ್ರವಾದದ್ದು ವ್ಯಾಟಿಕನ್ ಅರಮನೆ. ಇದರಲ್ಲಿದ್ದ ಕೋಣೆಗಳ ಸಂಖ್ಯೆ ೧,೪೦೦. ಆದರೆ ಈಗ ಈ ಗೌರವ ಬ್ರು ನೆಲ್‌ನ ರಾಜನಿಗೆ ಸಲ್ಲುತ್ತದೆ. ಈತನ ಹೊಚ್ಚಹೊಸ ಅರಮನೆಯಲ್ಲಿ ೧೭೮೮ ಕೋಣೆಗಳಿವೆ.

–ಶೆಣೈ

# 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

## ಸಪ್ಟೆಂಬರ್ ೧೯೮೫ ರಿಂದ ಫೆಬ್ರುವರಿ ೧೯೮೬ ರ ವರೆಗೆ

ಕ್ರಮ: ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ

ಸ = ಸಪ್ಟಂಬರ್ ಅ = ಅಕ್ಟೋಬರ್ ನ = ನವೆಂಬರ್ ಡಿ = ಡಿಸೆಂಬರ್

ಜ = ಜನೆವರಿ ಫೆ = ಫೆಬ್ರುವರಿ

ಕವನ–ಉವಾಚ–ಚುಟುಕ



ಚರ್ಚೆ–ಚಿಂತನ

**ವಿಜ್ಞಾನ**



**ಸಾಮಾನ್ಯ**



**ಹರಟೆ–ನಗೆಬರಹ**



Edited, printed & published by M. N. Mahishi on behalf of the Receiver (Moveables), Loka Shikshana Trust, Samyukta Karnataka Press, Koppikar Road, Hubli–580 020, Phone : 64307. Rept : Bombay: V. Satyamurthy Phone: 5510502, Calcutta : H. Majumdar Phone : 46–42331 Madras : K. A. Subramanian Phone : 842201; New Delhi : V. K. Chopra Phone : 7114785.

*Registered with the Registrar of Newspapers for India under No. 3530/57*